



# ಬಿ. ಎಂ. ಶ್ರೀ. ಅವರ ಬದುಕು - ಬರಹ



ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು

# ಬಿ. ಎಂ. ಶ್ರೀ ಅವರ ಬದುಕು - ಬರಹ



**ಸಂಗ್ರಹ ಲೇಖನ**



**ಕನ್ನಡ ಸಾಹಿತ್ಯ ಪರಿಷತ್ತು**
ಚಾಮರಾಜಪೇಟೆ, ಬೆಂಗಳೂರು-೫೬೦೦೧೮

B. M. Sri Avara BADUKU BARAHA a collection of articles, Published by Kannada Sahitya Parishat, Chamarajpet, Bangalore-560 018. Pages 137 + vi





ಬೆಲೆ : 10 ರೂಪಾಯಿಗಳು



ಮುದ್ರಕರು :
ಲೋಟಸ್ ಪ್ರಿಂಟರ್ಸ್
ರಾಜಾಜಿನಗರ, ಬೆಂಗಳೂರು-560 010

## ಪರಿವಿಡಿ

# ಮುನ್ನುಡಿ

ಭಾರತದಲ್ಲಿಯೇ ಒಂದು ಹಿರಿಯ ಸಾಹಿತ್ಯಿಕ, ಸಾಂಸ್ಕೃತಿಕ ಮಹಾಸಂಸ್ಥೆಯಾಗಿರುವ ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕದ ಏಕೀಕರಣಕ್ಕೆ, ಏಕೀಕರಣವಾದ ನಾಡಿಗೆ ಕರ್ನಾಟಕ ಎಂಬ ನಾಮಕರಣಕ್ಕೆ, ಕನ್ನಡಿಗರ ಸಂಘಟನೆಗೆ, ಕನ್ನಡ ಭಾಷೆ ರಾಜ್ಯಮಟ್ಟದ ಆಡಳಿತ ಭಾಷೆಯಾಗುವುದಕ್ಕೆ, ಸಾಹಿತ್ಯ ಸಂವರ್ಧನೆಗೆ ಮಹತ್ತರವಾದ ಸೇವೆಯನ್ನು ಕಳೆದ 64 ವರ್ಷಗಳಿಂದ ಸಲ್ಲಿಸುತ್ತಾ ಬಂದಿದೆ. ಜೊತೆಗೆ ಜನತೆಗೂ ಸಾಹಿತ್ಯಕ್ಕೂ ಸಂಪರ್ಕ ಕಡಿದುಹೋಗದಂತೆ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾ ಬಂದಿದೆ. ಕನ್ನಡ ಆಡಳಿತ ಭಾಷೆಯಾಗಿ ಯಶಸ್ವಿಯಾಗಿ ಮುನ್ನಡೆಯಲು ಸಕ್ರಿಯಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪುಸ್ತಕಗಳನ್ನು ಪ್ರಕಟಿಸುತ್ತಿರುವುದಲ್ಲದೆ ಕನ್ನಡ ಶೀಘ್ರಲಿಪಿ ಮತ್ತು ಬೆರಳಚ್ಚು ತರಗತಿಗಳನ್ನೂ ನಡೆಸುತ್ತಿದೆ. ಸಾಹಿತ್ಯೋಪಾಸಕರಾದ ಜನಸಾಮಾನ್ಯರೂ ಹಳಗನ್ನಡ ನಡುಗನ್ನಡ ಕಾವ್ಯಗಳನ್ನು ಅಭ್ಯಾಸ ಮಾಡಿಕೊಳ್ಳಲು ಅನುಕೂಲವಾಗಲೆಂಬ ಆಶಯದಿಂದ ಹೊಸಗನ್ನಡ ಅನುವಾದ ಸಹಿತ ಕಡಿಮೆಬೆಲೆಗೆ ಪರಿಷತ್ತು ಪ್ರಕಟಿಸುತ್ತಿದೆ. ಓದುಬರಹ ಬಾರದವರು, ಬರುವವರು, ಗ್ರಾಮಾಂತರ ಪ್ರದೇಶದವರು ಕನ್ನಡ ನಾಡಿನ ಭವ್ಯಪರಂಪರೆಯನ್ನು ಅರಿಯಲು ಸಹಾಯಕವಾಗಲೆಂದು ಉಪಯುಕ್ತವಾದ ಸಾಕ್ಷ್ಯಚಿತ್ರಗಳನ್ನೂ ಸಿದ್ಧಪಡಿಸಿದೆ.

ಈಗ ಹೊಸದಾಗಿ ಹಾಕಿಕೊಂಡಿರುವ ಯೋಜನೆಗಳಲ್ಲಿ ನಮ್ಮ ಕವಿಕಾವ್ಯ ಪರಂಪರೆಯ ವೈಭವವನ್ನು ಸಾಹಿತ್ಯಪ್ರಿಯರಿಗೆ ಪರಿಚಯ ಮಾಡಿಕೊಡಬೇಕೆಂಬುದೂ ಒಂದು. ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದ ಪ್ರಾತಿನಿಧಿಕ ಕವಿಗಳನ್ನು ಆರಿಸಿಕೊಂಡು ಅವರ ಕೃತಿಗಳನ್ನು ಆಳವಾಗಿ ಅಧ್ಯಯನ ನಡೆಸಿದ ವಿಮರ್ಶಕರಿಂದ ಪ್ರಬಂಧಗಳನ್ನು ಬರೆಸಿ, ಉಪನ್ಯಾಸಗಳನ್ನು ಏರ್ಪಡಿಸಿ, ಆಮೇಲೆ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಏರ್ಪಾಟು ಮಾಡಲಾಗಿದೆ. ಇಂಥ ಕಾರ್ಯಕ್ರಮಗಳನ್ನು ಆದಷ್ಟೂ ಆಯಾ ಕವಿ ಹುಟ್ಟಿ ಬೆಳೆದ, ಕಾವ್ಯ ರಚಿಸಿದ ಪ್ರದೇಶಗಳಲ್ಲೆ ಏರ್ಪಡಿಸಲು ಪ್ರಯತ್ನಿಸುತ್ತಿದ್ದೇವೆ.

ಇದುವರೆಗೆ ಆರು ವಿಚಾರ ಸಂಕಿರಣಗಳು ಈ ರೀತಿ ನಡೆದಿವೆ. ಕುಮಾರವ್ಯಾಸ ಕವಿಯನ್ನು ಕುರಿತು ಕೋಳಿವಾಡ ಗ್ರಾಮದಲ್ಲಿ ಮತ್ತು ಗದಗಿನಲ್ಲೂ ; ರನ್ನ ಕವಿಯನ್ನು ಕುರಿತು ಮುಧೋಳದಲ್ಲೂ ; ರಾಘವಾಂಕ ಕವಿಯನ್ನು ಕುರಿತು ಬೇಲೂರು ಮತ್ತು ಹಾಸನದಲ್ಲೂ ; ಹರಿಹರ ಕವಿಯನ್ನು ಕುರಿತು ಹೊಸಪೇಟೆಯಲ್ಲೂ ; ರತ್ನಾಕರ ಕವಿಯನ್ನು ಕುರಿತು ಮೂಡಬಿದ್ರೆಯಲ್ಲೂ ; ಲಕ್ಷ್ಮೀಶ ಕವಿಯನ್ನು ಕುರಿತು ದೇವನೂರು ಮತ್ತು ಚಿಕ್ಕಮಗಳೂರಿನಲ್ಲೂ ವಿಚಾರ ಸಂಕಿರಣಗಳನ್ನು ಯಶಸ್ವಿಯಾಗಿ ನಡೆಸಲಾಯಿತು.

ಇದೇ ರೀತಿ ಹೊಸಗನ್ನಡದ ಆಚಾರ್ಯ ಪುರುಷರಾದ ಬಿ. ಎಂ. ಶ್ರೀಕಂಠಯ್ಯ ನವರನ್ನು ಕುರಿತ ವಿಚಾರ ಸಂಕಿರಣವನ್ನು ಮಂಡ್ಯದಲ್ಲಿ ಅನನ್ಯ ರೀತಿಯಲ್ಲಿ ನಡೆಸ ಲಾಯಿತು. ಇವಲ್ಲದೆ ಕೆಲವು ಕವಿಗಳನ್ನು ಕುರಿತ ಪ್ರಶಸ್ತಿ ಗ್ರಂಥಗಳನ್ನು ಕೂಡ ಪುನರ್‌ಮುದ್ರಿಸಲಾಗಿದೆ. ಈ ಪ್ರಶಸ್ತಿ ಗ್ರಂಥಗಳು ಹಿಂದೆ ಅಚ್ಚಾಗಿದ್ದು ಈಗ ಅಲಭ್ಯವಾಗಿರುವುದರಿಂದ, ಇವುಗಳಿಗೆ ವಿಶೇಷ ಬೇಡಿಕೆಯಿರುವುದರಿಂದ ಮರು ಮುದ್ರಣಕಾರ್ಯವನ್ನು ಕೈಗೊಳ್ಳಲಾಗಿದೆ. ಈ ಮಾಲೆಯಲ್ಲಿ ಕುಮಾರವ್ಯಾಸ ಪ್ರಶಸ್ತಿ, ರನ್ನ ಕವಿಯ ಪ್ರಶಸ್ತಿ, ಲಕ್ಷ್ಮೀಶ ಕವಿಯ ಪ್ರಶಸ್ತಿ, ಹರಿಹರಕವಿ ಪ್ರಶಸ್ತಿ ಮತ್ತು ಸಂಭಾವನೆ – ಈ ಗ್ರಂಥಗಳನ್ನು ಈಗಾಗಲೇ ಪ್ರಕಟಿಸಲಾಗಿದ್ದು ಓದುಗರ ಮೆಚ್ಚುಗೆಯನ್ನು ಗಳಿಸಿಕೊಂಡಿವೆ.

ಮನುಷ್ಯನ ಸಂಕೀರ್ಣ ಜೀವನಕ್ಕೆ ಶ್ರೇಷ್ಠ ಮೌಲ್ಯಗಳನ್ನು ದೊರಕಿಸಿಕೊಟ್ಟ ನಮ್ಮ ಪ್ರಾಚೀನ ಕವಿಗಳ ಪರಿಚಯ ಕನ್ನಡಿಗರಿಗೆ ಎಲ್ಲ ಕಾಲಕ್ಕೂ ಇರಬೇಕಾಗುತ್ತದೆ. ಮೌಲ್ಯರಹಿತತೆ ಕಾಣುತ್ತಿರುವ ನಮ್ಮ ಇಂದಿನ ವರ್ತಮಾನದ ಬದುಕಿಗೂ ನಮ್ಮ ಕೆಲವು ಹಳೆಯ ಕವಿಗಳು ಪ್ರಸ್ತುತರಾಗಿದ್ದಾರೆ. ಇವತ್ತಿನ ಬದುಕಿಗೆ ಸ್ಫೂರ್ತಿತುಂಬಿ ರುವ ಪಂಪ, ಕುಮಾರವ್ಯಾಸ, ರನ್ನ, ಹರಿಹರ ಮೊದಲಾದ ಕವಿಗಳ, ನಮ್ಮ ಪರಂ ಪರೆ ಕಟ್ಟಿದ ಧೀಮಂತ ಚೇತನಗಳ ಪರಿಚಯದಿಂದ ಹೊಸ ಉತ್ಸಾಹ, ಹೊಸ ಬಾಳಿಗೆ ದೊರೆಯುವ ಸಾಧ್ಯತೆ ಇದೆ. ಈ ಭಾವನೆಯಿಂದ 'ಏರ್ಪಡಿಸಿರುವ ವಿಚಾರ ಸಂಕಿರಣಗಳಲ್ಲಿ' ಓದಿದ ಪ್ರಬಂಧಗಳನ್ನು ಇದೀಗ ಒಂದೊಂದಾಗಿ ಪುಸ್ತಕ ರೂಪದಲ್ಲಿ ಹೊರತರುತ್ತಿದ್ದೇವೆ. ಈ ಪುಸ್ತಕಗಳಲ್ಲಿ ನಮ್ಮ ಹಿಂದಿನ ಕವಿಗಳ ಕಾವ್ಯಗಳನ್ನು ಇವತ್ತಿನ ತಿಳಿವಳಿಕೆಗೆ ಬೆಲೆಕಟ್ಟುವ ಪ್ರಾಮಾಣಿಕವಾದ ಪ್ರಯತ್ನ ಕೂಡ ಅಲ್ಲಲ್ಲಿ ನಡೆದಿರುವುದನ್ನು ಓದುಗರು ಗುರುತಿಸಬಹುದು.

ಕನ್ನಡವನ್ನು ವಿಶೇಷವಾಗಿ ಅಭ್ಯಾಸ ನಡೆಸುವವರಿಗೆ ಈ ಮಾಲೆಯ ಪುಸ್ತಕಗಳು ವಿಶೇಷವಾಗಿ ನೆರವಾಗುತ್ತವೆಂದು ನಂಬಿದ್ದೇನೆ.

**ಹಂಪ. ನಾಗರಾಜಯ್ಯ**
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

# ಕನ್ನಡ ನುಡಿಯ ಹರಿದಾಸ ಬಿ. ಎಂ. ಶ್ರೀ

ಗೊರೂರು ರಾಮಸ್ವಾಮಿ ಅಯ್ಯಂಗಾರ್

ದಿವಂಗತ, ಕೀರ್ತಿವಂತ ಬೆಳ್ಳೂರು ಮೈಲಾರ ಶ್ರೀ ಕಂಠಯ್ಯನವರು, ಕನ್ನಡ ಸಾಹಿತ್ಯದಲ್ಲಿ ನವೀನ ಪುನರುಜ್ಜೀವನವನ್ನು ಕನಸುಕಂಡು ಕಾರ್ಯಕಾರಿ ಗೊಳಿಸಿ ಉಜ್ಜೀವಿಸಿ ಪ್ರೋತ್ಸಾಹಿಸಿದ ಮೊದಲಿಗರಲ್ಲಿ ಅಗ್ರಗಣ್ಯರು. ಅವರು ಸರ್ವ ವಿಧದಿಂದಲೂ ಕನ್ನಡದ ಮತ್ತು ಕನ್ನಡನಾಡಿನ ಶ್ರೀಯೇ ಆಗಿ ಬೆಳಗಿ, ಭೌತದೇಹದಿಂದ ಕಣ್ಮರೆಯಾದರೂ ಪ್ರಭಾವ ಮತ್ತು ಸಂದೇಶದಿಂದ ಕನ್ನಡ ನುಡಿಯ ಮತ್ತು ನಾಡಿನ ಮುನ್ನಡೆಗೆ ಮಾರ್ಗವನ್ನು ತೋರಿಸುವ ನಂದಾದೀಪವೇ ಆಗಿದ್ದಾರೆ.

ಶ್ರೀಮಾನ್ ಬಿ.ಎಂ. ಶ್ರೀಯವರು ಕನ್ನಡಕ್ಕಾಗಿ ಮಾಡಿದ ಕಾರ್ಯವನ್ನು ಇಂದು—ಅವರನ್ನು ಕಾಣದಿದ್ದವರು—ಊಹಿಸಿ ಮಾತ್ರ ತಿಳಿಯಬಹುದಾಗಿದೆ. ಶ್ರೀಯವರು ಈಗ ಸುಮಾರು ನಲವತ್ತು ವರುಷಗಳ ಹಿಂದೆಯೇ ಆ ಕಾರ್ಯವನ್ನು ಪ್ರಾರಂಭಿಸಿದರು. ಅದು ಕನ್ನಡಕ್ಕೂ ದೇಶ ಭಾಷೆಗಳಿಗೂ, ಇಂಗ್ಲಿಷ್ ಭಾಷೆಯ ಸಾರ್ವಭೌಮಪ್ರಭುತ್ವ, ಇಂಗ್ಲಿಷರ ಜಗತ್ತನ್ನೇ ಆವರಿಸಿದ ಚಕ್ರಾಧಿಪತ್ಯ, ಪಾರತಂತ್ರದಲ್ಲಿರುವವರಿಗೆ ಸ್ವಾಭಾವಿಕವಾಗಿರುವ "ಆಳುವವರ ಭಾಷೆ ಹೆಚ್ಚು, ನಮ್ಮದು ಕೀಳು" ಎಂಬ ಸ್ವಭಾಷಾ ಪ್ರೇಮ ರಹಿತ ನೈಚ್ಯಭಾವನೆ ಇವು ಅರಮನೆ ಗುರುಮನೆಗಳನ್ನೆಲ್ಲ ವ್ಯಾಪಿಸಿದ್ದಕಾಲ ಅದು. ಮೊದಲ ಇಂಗ್ಲಿಷು, ಅನಂತರ ನಮ್ಮ ಕನ್ನಡ, ಸಂಸ್ಕೃತ, ಮುಂತಾದುವು—ಇಂದೂ ನಾವು ಇನ್ನೂ ಈ ಖಾಯಿಲೆಯಿಂದ ಮುಕ್ತರಾಗಿಲ್ಲ—"ಅಂತಹ ಗಾಢಾಂಧಕಾರದ ಕಾಲದಲ್ಲಿ ಸಹ, ಇಂಗ್ಲಿಷಿನ ಉಪಾಧ್ಯಾಯರಾಗಿದ್ದರೂ ಇಂಗ್ಲಿಷನ್ನೇ ಎಷ್ಟು ಹೆಚ್ಚಾಗಿ ಪ್ರೀತಿಸಿ ಸವಿದು ವ್ಯಾಸಂಗ ಮಾಡುತ್ತಿದ್ದರೂ ನಮ್ಮ ದೇಶ ಭಾಷೆ ಕನ್ನಡ ಈ ಮಟ್ಟಕ್ಕೆ ಬರುವುದೆ ? ಎಂದು ಕಿಂಕೃತಿಯಿಂದಲೇ ನಾನು ರಹಸ್ಯವಾಗಿ ಇಂಗ್ಲಿಷಿನ ಮಟ್ಟುಗಳನ್ನೆಲ್ಲ ಕನ್ನಡದಲ್ಲಿ ನನ್ನ ಆನಂದಕ್ಕಾಗಿಯೇ ಬಳಸಿ ಬಳಸಿ ಸಂತೋಷಪಟ್ಟು ಅವಕಾಶ ಸಿಕ್ಕಿದರೆ ಕನ್ನಡವೂ ಸಹಾ ಇಂಗ್ಲಿಷು ಮಾಡುವ ಎಲ್ಲ ಕೆಲಸವನ್ನೂ ಮಾಡಬಲ್ಲದು ಎಂದು ಮನದಟ್ಟು ಮಾಡಿಕೊಂಡೆ'' ಎಂದು ಶ್ರೀಯವರು ಒಂದೆಡೆ ಹೇಳಿದ್ದಾರೆ ; ಆ ವೇಳೆಗೆ ಭಾರತ ಜನಜೀವನದಲ್ಲಿ ಮಹಾತ್ಮ ಗಾಂಧಿಯವರು ಪ್ರವೇಶವುಂಟಾಗಿ ಸಾವಿರಾರು ವರುಷಗಳಿಗೊಮ್ಮೆ ನಡೆಯಬಹುದಾದ ಆ ಅಮೃತಮಯ ಸತ್ಯ ಧರ್ಮ ತೇಜಸ್ಸೂರ್ಯನಿಂದ, ಯುಗಯುಗಾಂತರಗಳ ಭಾರತೀಯರ ಆರ್ಷೇಯ

ಆಸ್ತಿಯಾದ ರಾಮ, ಕೃಷ್ಣ, ಭೀಷ್ಮ. ಯುಧಿಷ್ಠಿರರ ಸತ್ವ ನಮ್ಮಲ್ಲಿ ತಲೆ ಎತ್ತಿ ಭಾರತದ ಸಮಸ್ತ ಜೀವನವೂ ಚೈತನ್ಯಗೊಂಡು ತನ್ನನ್ನು ತಾನೆ ಅರಿತಂತೆ ಸ್ವಾಭಿಮಾನದಿಂದ ಎದ್ದು ನಿಂತಾಗ, ಯಾವ ಚಳುವಳಿಯಿಂದಲೂ ಆಗದಂತಹ ಹೊಸ ಹುರುಪು ಭಾರತದ ದೇಶ ಭಾಷೆಗಳಿಗೂ ಉಂಟಾಯಿತು. ಶ್ರೀಯವರು ಎಚ್ಚೆತ್ತ ನಮ್ಮ ಕನ್ನಡ ಪ್ರೇಮ ಅಭಿಮಾನ ಯೋಗ್ಯ ಅರ್ಹವೊನೆಯಾದರು.

ಆ ಪರ್ವಕಾಲದಲ್ಲಿ ಕನ್ನಡಕ್ಕೆ ಶ್ರೀಯವರೂ, ಶ್ರೀಯವರಿಗೆ ಕನ್ನಡವೂ ದೊರಕಿದುದು ಇಬ್ಬರ ಅದೃಷ್ಟ ಮತ್ತು ಶ್ರೇಯಸ್ಸು ಎಂದು ಹೇಳಬೇಕು. ಕನ್ನಡದ ಅಭಿಮಾನ ಜನತೆಯಲ್ಲಿ ಜಾಗ್ರತವಾಗಿದ್ದರೂ ಅದಕ್ಕೆ ಒಂದು ರೂಪವನ್ನು ಕೊಟ್ಟು ಕಾರ್ಯ ವಿಧಾನವನ್ನು ವ್ಯವಸ್ಥೆಗೊಳಿಸಿ, ಅದರಿಂದ ಲಾಭವಾಗಲೀ ಅಥವಾ ಲೌಕಿಕ ಪ್ರತಿಷ್ಠೆಯಾಗಲೀ ದೊರೆಯದಿದ್ದರೂ ಕೆಲವು ವೇಳೆ ನಷ್ಟವೇ ಆದರೂ ಸರ್ಕಾರದ ಕಣ್ಣು ಸಹ ಕೆಂಪಗೇ ಆದರೂ-ಇದು ನಮ್ಮ ಜನತೆಗೆ ಬೇಕಾದ ಕಾರ್ಯ ಎಂದು ಜನತೆಯನ್ನು ಆ ಕಾರ್ಯಕ್ಕೆ ಸ್ವಂತ ಇಚ್ಛೆಯಿಂದಲೇ ತೊಡಗಿಸಬೇಕಾಗಿತ್ತು. ಶ್ರೀಯವರು ಕನ್ನಡ ಪ್ರೇಮ ; ಕನ್ನಡದಲ್ಲಿ ನಂಬಿಕೆ ಅದರ ಸರ್ವತೋಮುಖವಾದ ಏಳಿಗೆಯನ್ನು ರೂಪಿಸುವ ಶಕ್ತಿ ಅದಕ್ಕಾಗಿ ಏಕಾವಧಾನ ಮತ್ತು ಬಹು ಅವಧಾನಗಳ ಪರಿಚಯ ಸಂಪರ್ಕ ಇವೆಲ್ಲ ಆಗ ಅವರಿಗೇ ತಿಳಿಯದಂತೆ ಅವರ ಶಕ್ತಿಗಳೆಲ್ಲ ಒಮ್ಮಡಿ ನೂರ್ಮಡಿ ಸಾವಿರಮಡಿಯಾಗಿ ಅವರೇ ಎಲ್ಲ ಕನ್ನಡಿಗರ ಕಣ್ಣು ಮಿದುಳು ಕೈಗಳಾಗಿ ಕೆಲಸಮಾಡಿದರು. ಈ ಸಾಧನೆಯನ್ನು ಶ್ರೀಯವರು 1920 ರಿಂದ 1930 ರವರೆಗೆ ಏಕಾಂತವಾಗಿ ಒಬ್ಬರೇ, ತಮಗೆ ಬೇಕಾದ ಕೆಲವೇ ಕೆಲವು ಆಪ್ತ ಮಿತ್ರರೊಂದಿಗೆ—ಕೆಲವೇ ಹೆಸರುಗಳನ್ನು ಹೇಳುವುದಾದರೆ ಶ್ರೀ ಬೆಳ್ಳಾವೆ ವೆಂಕಟನಾರಣಪ್ಪ, ಕರ್ಪೂರದ ಶ್ರೀನಿವಾಸರಾವ್, ಮಾಸ್ತಿ, ಡಿ.ವಿ.ಜಿ., ಟಿ.ಎಸ್. ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರಿ (ಎಲ್ಲ ಹೆಸರುಗಳನ್ನು ಹೇಳುವುದು ಸಾಧ್ಯವಿಲ್ಲ) ಚರ್ಚಿಸಿ ಎಲ್ಲರೂ ಅನೌಪಚಾರಿಕವಾಗಿ ಒಂದು ಕಾರ್ಯಕ್ರಮಕ್ಕೆ ಒಪ್ಪಿ ಅದರಂತೆ ನಡೆಯತೊಡಗಿದರು. ಈ ಎಲ್ಲ ಕಾರ್ಯಕ್ರಮಗಳ ರಚನೆ ವ್ಯವಸ್ಥೆ ಇವುಗಳೆಲ್ಲದರ ಕಣ್ಣು ಮಿದುಳು ಶ್ರೀಯವರೇ ಆಗಿದ್ದರು.

ಕನ್ನಡಕ್ಕೆ ಆಗಬೇಕಾದ ಕಾರ್ಯ, ನಿಜವಾಗಿ ಬಹಳವಾಗಿತ್ತು. ಪ್ರಾಚೀನವಾದ—ಅಂದಿನ ದೃಷ್ಟಿಯಿಂದ ಸಮೃದ್ಧವೂ ಆಗಿದ್ದ—ಈ ಭಾಷೆಯನ್ನು, ಅರಮನೆಯಲ್ಲಿ ಭಾರವಾದ ಚಿನ್ನ ರತ್ನಗಳ ಹೊರೆಯಿಂದ ತುಂಬಿ ಬಿಸಿಲು ಗಾಳಿ ಮಳೆಗೆ ಬಾರದೆ, ಸಿಲುಕಲಾರದೆ ನಿಂತಿರುವ ಈ ಕನ್ನಡ ಸರಸ್ವತಿಯನ್ನು ಹಗುರಗೊಳಿಸಿ ಗಾಳಿ ಮಳೆ ಬಿಸಿಲಿಗೂ ಒಡ್ಡಿ ಸರ್ವ ಸಾಮಾನ್ಯರಿಗೂ ಬಾಳಿನ ಎಲ್ಲ ಹಂತದಲ್ಲಿಯೂ ಉಸಿರು ಕಣ್ಣು ಜೀವವಾಗುವಂತೆ ಮಾಡಿ ಮೆರೆಸುವುದು ಅವಶ್ಯಕವಾಗಿತ್ತು, ಮೊದಲು ಕನ್ನಡ ಜನತೆಗೇ ತಮ್ಮ ಭಾಷೆಯ ಶಕ್ತಿ ಯೋಗ್ಯತೆಯನ್ನು ತೋರಿಸಬೇಕಾಗಿತ್ತು ; ಅನಂತರ ಅಂದಿನ ನಮ್ಮ ಸರ್ಕಾರಗಳನ್ನು (ಸ್ವಾತಂತ್ರ್ಯಪೂರ್ವದ ನಮ್ಮ ಸರ್ಕಾರಗಳಲ್ಲಿ ಕನ್ನಡಕ್ಕೆ

ಯಾವ ಸ್ಥಾನವೂ ಇರಲಿಲ್ಲ; ಕನ್ನಡ ಅಧಿಕಾರಿಗಳು ಯಾವ ಹುದ್ದೆಯಲ್ಲಿಯೂ ಇರಲಿಲ್ಲ. ಹಾಗೂ ಇದ್ದರೂ ಅವರಿಗೆ ಕನ್ನಡ ಅಭಿಮಾನ ಇರಲಿಲ್ಲ. ದೇಶೀಯ ಸಂಸ್ಥಾನಗಳಲ್ಲಿ ರೆಸಿಡೆಂಟಿನ ಹದ್ದು ದೃಷ್ಟಿಯೊಳಗೆ ಕೆಲಸ ಮಾಡುತ್ತಿದ್ದ ರಾಜರ ಸರ್ಕಾರಗಳ; ಭಾರತದಲ್ಲಿ ಇಂಗ್ಲಿಷರ ಸರ್ಕಾರ) ಅವರಿಗೆ ಅಸಮಾಧಾನವಾಗದಂತೆ ಅಲ್ಪಸ್ವಲ್ಪ ಕನ್ನಡದ ಕೆಲಸಕ್ಕೆ ಒಲಿಸಿಕೊಳ್ಳಬೇಕಾಗಿತ್ತು; ಆಗಿನ ಸುಸ್ಕೃತಿ ನಾಗರೀಕತೆ ಎಂದೇ ಪಾಪ, ಮಮ್ಮಿ, ಟಾಟಾ ಎಲ್ಲ ವಿದ್ಯಾವಂತರೂ 'ಬೈ' 'ಟೈ' ಗಳೇ–ಅವರನ್ನೂ ಕನ್ನಡಕ್ಕೆ ಒಲಿಸಿಕೊಳ್ಳಬೇಕಾಗಿತ್ತು. ಇನ್ನು ಕನ್ನಡಿಗರಿಗೆ ಸಾಧಾರಣವಾಗಿ ಓದಲು ಸುಲಭವಾದ ಗ್ರಂಥಗಳೇ ಇರಲಿಲ್ಲ. ಕನ್ನಡ ಪುಸ್ತಕಗಳೆಂದರೆ ಪಂಪಭಾರತ, ಕುಮಾರ ವ್ಯಾಸ, ಜೈಮಿನಿ, ಚೆನ್ನಬಸವ ಪುರಾಣ ಇತ್ಯಾದಿ. ಇಂಗ್ಲಿಷ್ ಬಲ್ಲವರು ಇಂಗ್ಲಿಷಿ ನಲ್ಲಿಯೇ ಓದುತ್ತಿದ್ದುದರಿಂದ ಕನ್ನಡದಲ್ಲಿ ಏನಿದೆ ? ಎನ್ನುತ್ತಿದ್ದರು. ಜೊತೆಗೆ ಕಾಲೇಜು ಮಟ್ಟದಲ್ಲಿ ಸಹ ಎಲ್ಲೋ ಒಂದೋ ಎರಡೋ ಕನ್ನಡ ಪುಸ್ತಕ ಪಠ್ಯ ಪುಸ್ತಕವಾಗಿರು ತ್ತಿದ್ದಿತು. ಹಳೆಯ ಕಾವ್ಯಗಳನ್ನೆಲ್ಲ ಪರಿಷ್ಕರಿಸಿ ಜಳ್ಳನ್ನು ತೂರಿ ಹೊಸ ಲೇಖಕರನ್ನು ಪ್ರೋತ್ಸಾಹಿಸಿ ಹೊಸ ಹೊಸ ವಿಷಯಗಳ ಮೇಲೆ ಅವರು ಗ್ರಂಥ ರಚನೆ ಮಾಡುವಂತೆ ಪ್ರೇರೇಪಿಸಬೇಕಾಗಿತ್ತು. ಆಳ್ವಿಕೆಯಲ್ಲಿ ವಿಶ್ವವಿದ್ಯಾನಿಲಯದಲ್ಲಿ ಜನಜೀವನದಲ್ಲಿ ಎಲ್ಲದರ ಲ್ಲಿಯೂ ಕನ್ನಡದ ಸ್ಥಾನವನ್ನು ಉನ್ನತಿಗೇರಿಸಬೇಕಾಗಿದ್ದಿತು. ಒಟ್ಟಿನಲ್ಲಿ ಹೇಳುವು ದಾದರೆ ಬಿ.ಎಂ. ಶ್ರೀ. ಯವರ ಮೇಲೆ ಬಿದ್ದ ಭಾರ ದೊಡ್ಡ ಬೆಟ್ಟ, ಕೊರಕಲು ಹಳ್ಳ, ಕಲ್ಲುಬಂಡೆ, ಮರಗಳ ಅಣ್ಣೆ ಭೂಮಿ ಇವುಗಳೆಲ್ಲ ಸರಿಮಾಡಿ ತಳಪಾಯ ಹಾಕಿ ಸರಿಯಾದ ಕಟ್ಟಡವನ್ನು ಕಟ್ಟಿ ಅಲ್ಲಿ ಸರ್ವ ಸೌಕರ್ಯಗಳನ್ನು ಒದಗಿಸಬಹುದಾಗಿತ್ತು.

ಒಂದು ದೃಷ್ಟಿಯಿಂದ ಬಿ.ಎಂ. ಶ್ರೀಯವರು ಕೆಲಸ ಪ್ರಾರಂಭ ಮಾಡಿದ ಕಾಲವನ್ನು ಕನ್ನಡದ ಸ್ವರ್ಣಯುಗದ ಆರಂಭವೆನ್ನಬಹುದು; ಕನ್ನಡದ ಸ್ಥಿತಿಯಲ್ಲಿ ಅತಿ ಅಂಧಕಾರದ ನಂತರ, ತೋರಿದ ಉದಯವೇ ಅದು. ವಿಶ್ವವಿದ್ಯಾನಿಲಯದಲ್ಲಿ ಸಹ, ಇನ್ನೂ ಕನ್ನಡಕ್ಕೆ ಒಂದು ಪ್ರೊಫೆಸರ್ ಸ್ಥಾನ ದೊರಕಿರಲಿಲ್ಲ. ಬರಿಯ ಪಂಡಿತರೇ ಸಾಕು ಎಂಬುದು ಸರ್ಕಾರದ ಉದ್ದೇಶವೂ ಆಗಿತ್ತು. ಪ್ರೊಫೆಸರರನ್ನು ಹೊಂದಲು ಕನ್ನಡಕ್ಕೆ ಯೋಗ್ಯತೆ ಸಾಲದು; ಅಷ್ಟು ವೆಚ್ಚ ಮಾಡುವುದು ನ್ಯಾಯವಲ್ಲ ಎಂಬುದು ಸರ್ಕಾರದ ವಾದವಾಗಿತ್ತು. ಸರ್ಕಾರ, ಪ್ರೊಫೆಸರರನ್ನೇ ಕೊಡದೆ ಇನ್ನೂ ಎಷ್ಟು ವರ್ಷ ತಳ್ಳುತ್ತಿತ್ತೊ. ಆಗ ಶ್ರೀಯವರು ಕನ್ನಡಕ್ಕೆ ಹೇಗಾದರೂ ಪ್ರೊಫೆಸರ್‌ರ ಸ್ಥಾನ ದೊರಕಲಿ ಎಂದು ಇಂಗ್ಲಿಷ್ ಪ್ರೊಫೆಸರರಾದ ತಾವೇ ಕನ್ನಡಕ್ಕೂ ಗೌರವಾನ್ವಿತ ಪ್ರೊಫೆಸರ್ ಆಗಲು ಸಮ್ಮತಿಸಿ ಪಾಠಗಳನ್ನು ಹೇಳತೊಡಗಿದರು. ಅಂತೂ ವಿಶ್ವವಿದ್ಯಾ ನಿಲಯದಲ್ಲಿ ಕನ್ನಡದ ಪ್ರೊಫೆಸರ್ ಎಂಬ ಮಾತು ಬಳಕೆಗೆ ಬಂದಿತು. ವಿಶ್ವವಿದ್ಯಾ ನಿಲಯದಲ್ಲಿ ಅನುಸರಿಸಬೇಕಾದ ಪಾಠಕ್ರಮ ಪಟ್ಟಿ ಮುಂತಾದುವನ್ನೆಲ್ಲ ಅವರು ಪರಿ ಷ್ಕರಿಸಿ ಅನೇಕ ವಿದ್ಯಾರ್ಥಿಗಳನ್ನು ಕನ್ನಡಕ್ಕೆ ಆಕರ್ಷಿಸಿದರು. ಹೀಗೆ ವಿಶ್ವವಿದ್ಯಾ ನಿಲಯದ ಪ್ರೌಢ ತರಗತಿಗಳ ಉಪಯೋಗಕ್ಕಾಗಿಯೇ ಅವರು ಕನ್ನಡ ಕೈಪಿಡಿ,

ಕನ್ನಡ ಸಾಹಿತ್ಯ ಚರಿತ್ರೆ ಗ್ರಂಥಮಾಲೆ, ಹೊಸ ಗ್ರಂಥ ರಚನೆಗೆ ಪ್ರೋತ್ಸಾಹ ಈ ಎಲ್ಲ ಕಾರ್ಯಕ್ರಮಗಳನ್ನು ಕೈಕೊಂಡರು. ಒಟ್ಟಿನಲ್ಲಿ ಒಂದೇ ಮಾತಿನಲ್ಲಿ ಹೇಳಬಹುದಾದರೆ, ಇಂದಿನ ಬಗೆಯ ಕನ್ನಡದ ಬೆಳವಣಿಗೆಯ ಮೂಲವನ್ನೂ ಶ್ರೀಯವರ ಪ್ರಾರಂಭ ಪ್ರಯತ್ನಗಳಲ್ಲಿ ಗುರುತಿಸಬಹುದು.

ಇವುಗಳೆಲ್ಲವುಗಳಿಗಿಂತ ಶ್ರೀಯವರು ಮಾಡಿದ ಹೆಚ್ಚಾದ ಕಾರ್ಯವೆಂದರೆ ಕನ್ನಡಕ್ಕಾಗಿ, ಕನ್ನಡ ವಾತಾವರಣಕ್ಕಾಗಿ; ಜನಜೀವನದಲ್ಲಿ ಕನ್ನಡವನ್ನು ಅವರ ಉಸಿರು ಕಣ್ಣು ಜೀವನದ ಅವಶ್ಯಕತೆಗಾಗಿ ಉಪಯೋಗಿಸುವಂತೆ ಜನರನ್ನು ಪ್ರೇರಿಸುವುದಕ್ಕಾಗಿ ಮಾಡಿದ ಕಾರ್ಯ. ಮುಖ್ಯವಾಗಿ ಕನ್ನಡ ಜನವೆಲ್ಲಾ ಒಂದು, ಕನ್ನಡ ಕುಲವೆಲ್ಲಾ ಒಂದು ; ಕನ್ನಡಿಗರು ಎಲ್ಲಿದ್ದರೂ (ಆಗ ಕನ್ನಡಿಗರು ಬೊಂಬಾಯಿ, ಮದರಾಸು, ಕೊಡಗು ಮತ್ತು ಇತರ ನಾನಾ ಭಾಗಗಳಲ್ಲಿದ್ದರು) ಒಂದು ಕುಟುಂಬಕ್ಕೆ ಸೇರಿದವರು ಎಂಬ ಭಾವನೆಯನ್ನು ಶ್ರೀಯವರು ಕರ್ನಾಟಕದಲ್ಲೆಲ್ಲ ಅನೇಕ ಸಾರಿ ಸಂಚರಿಸಿ, ಹಳ್ಳಿಗಳಿಗೆ ಸಹ ಹೋಗಿ, ಕರ್ನಾಟಕ ಸಂಘಗಳಿದ್ದೆಡೆಗಳಲ್ಲೆಲ್ಲಾ ಉಪನ್ಯಾಸ ಮಾಡಿ, ಕರ್ನಾಟಕದ ವೈಭವವನ್ನೂ ಮಹಿಮೆಯನ್ನೂ ಇಲ್ಲಿಯ ಧೀರರು ವೀರರು, ಕಾವ್ಯ, ಶಿಲ್ಪ, ಸಂಗೀತ, ನೃತ್ಯ, ವಾಸ್ತುಶಿಲ್ಪ ಹರಿದಾಸರು, ಶಿವಶರಣರು, ದೇವಾಲಯಗಳು, ತೀರ್ಥಗಳು—ಇವುಗಳನ್ನೆಲ್ಲಾ ಕುರಿತು ಗಂಟೆಗಟ್ಲೆ ಲೀಲಾಜಾಲವಾಗಿ ಅತ್ಯಂತ ಮಧುರವಾದ ರೀತಿಯಲ್ಲಿ ಉಪನ್ಯಾಸ ಮಾಡಿ ಜನಗಳಲ್ಲಿ ಕನ್ನಡ ಪ್ರೇಮ ಚಳುವಳಿಯನ್ನು ಏಳಿಸಿದರು. ಅವರ ಜೀವನದ ಬಹುಭಾಗ (ಅವರು ಸರ್ಕಾರಿ ಸೇವೆಯಲ್ಲಿರುವಾಗಲೂ) ಸರ್ಕಾರಿ ಕೆಲಸವನ್ನು ನಿರ್ವಹಿಸಿದ ನಂತರ, ಕನ್ನಡದ ಪ್ರಚಾರಕ್ಕಾಗಿಯೇ ವಿನಿಯೋಗಿಸಿದರು. ಪ್ರಾಯಶಃ ಹಿಂದಲಕಾಲದ ಯಾವ ಸಾಧುಸಂತರೂ, ಶಿವಶರಣರೂ, ಹರಿದಾಸರೂ, ಲಾವಣಿಕಾರರೂ ಇವರಿಗಿಂತ ಹೆಚ್ಚಾಗಿ ಜನಸಂಪರ್ಕವನ್ನು ಕನ್ನಡ ಗೀತೆಯನ್ನು, ಕನ್ನಡತನವನ್ನೂ ಕನ್ನಡ ಕಲಿತನವನ್ನೂ ಪ್ರಚಾರಿಸಿರಲಾರರು. ಕೊನೆಕೊನೆಗೆ ಕನ್ನಡದ ಏಕೀಕರಣ ಏಕತಂತ್ರ ಆಳ್ವಿಕೆಯೇ ಶ್ರೀಯವರ ಬಾಳ ಧ್ಯೇಯವಾಗಿತ್ತು. ಅವರು ಏಕೀಕೃತ ಕರ್ನಾಟಕದ ಚಿತ್ರವನ್ನು ತಯಾರಿಸಿ ಅದರಂತೆ ಒಂದು ಬಾವುಟವನ್ನು ಸಹ ಮಾಡಿ (ಕೆಲವು ಸಾಹಿತ್ಯ ಸಮ್ಮೇಳನಗಳಲ್ಲಿಯೂ ಈ ಬಾವುಟವನ್ನು ಹಾರಿಸುತ್ತಿದ್ದರು) ಆ ಬಾವುಟವನ್ನು ಹಿಡಿದುಕೊಂಡು ಪ್ರಹರಿಯಂತೆ ಹೊರಟುಬಿಟ್ಟರು. ಹೀಗೆ ಆ ಬಾವುಟವನ್ನು ಎಲ್ಲೆಲ್ಲಿಯೂ ಪ್ರಚಾರಿಸಿ, ಏಕೀಕೃತ ಕರ್ನಾಟಕವಾಗುವುದಕ್ಕೆ ಬಹಳ ಕಾಲದ ಹಿಂದಿನಿಂದಲೇ ಆ ಭಾವನೆಯನ್ನು ಜನತೆಯ ಮನಸ್ಸಿಗೆ ಹಿಡಿಸಿದ್ದರು. ಇಂದಿನ ಕರ್ನಾಟಕದ ಬಾವುಟವು ಬಹಳ ಮಟ್ಟಿಗೆ ಆ ಬಾವುಟವನ್ನೇ ಹೋಲುತ್ತದೆ. "ಕನ್ನಡ ಬಾವುಟ"ವೆಂಬ ಪ್ರಾಚೀನ ಅರ್ವಾಚೀನ ಕವಿಗಳ ನಾಡ ಹೊಗಳಿಕೆಯ ಪದ್ಯ ಸಂಕಲನವೊಂದನ್ನು ಸಹ ಅವರು ಪ್ರಕಟಿಸಿದರು.

ಶ್ರೀಯವರು ಸ್ವತ: ಕನ್ನಡ ಇಂಗ್ಲಿಷು ತಮಿಳು ಗ್ರೀಕ್ ಸಾಹಿತ್ಯಗಳಲ್ಲಿ ಉದ್ದಾಮ ಪಂಡಿತರು. ಅವರು ಉಪನ್ಯಾಸ ಮಾಡಲು ನಿಂತರೆ ಎರಡು ಮೂರು

ಘಂಟೆ ನಿರರ್ಗಳವಾಗಿ ಉಪನ್ಯಾಸ ಮಾಡುತ್ತಿದ್ದರು. ಇಂಗ್ಲಿಷಿನಲ್ಲಿ ಅದರಲ್ಲಿಯೂ ಶೇಕ್ಸ್‌ಪಿಯರ್ ಮೇಲೆ ಅವರು ಭಾಷಣಕ್ಕೆ ನಿಂತರೆ, ಕೆಲವು ಸಲ ನಾಲ್ಕು ಘಂಟೆಗಳ ಕಾಲ ಮಾತನಾಡಿದುದುಂಟು. ಒಂದು ಕ್ಷಣವಾದರೂ ನೀರಸವಿಲ್ಲ. ಇನ್ನೂ ಕೇಳೋಣ ಎನ್ನುವ ಮಾತಿನ ಮೋಡಿ. ಕನ್ನಡದಲ್ಲಿಯೂ ಹಾಗೆಯೇ. ಪಂಪ, ರನ್ನ, ಕುಮಾರವ್ಯಾಸ, ಅಲ್ಲಮ ಪ್ರಭು, ವಚನಗಳು—ಇವುಗಳ ಮೇಲೆ ವಿದ್ವತ್ಪೂರ್ಣ ಭಾಷಣಗಳು. ಒಂದು ಸಲ ಸಾಹಿತ್ಯ ಪರಿಷತ್ತಿನಲ್ಲಿ ಮಾಣಿಕ್ಯವಾಚಕರ ಮೇಲೆ ಎರಡೂವರೆ ಘಂಟೆಗಳ ಕಾಲ ಉಪನ್ಯಾಸ ಮಾಡಿದರು. ದಕ್ಷಿಣ ಭಾಷೆಗಳ ಪರಸ್ಪರ ನಿಕಟ ಬಾಂಧವ್ಯವನ್ನರಿತು, ದಕ್ಷಿಣದವರೆಲ್ಲ ಒಬ್ಬರ ಭಾಷೆಯನ್ನೊಬ್ಬರು ಕಲಿಯ ಬೇಕೆಂದು ಅವರು ಹೇಳುತ್ತಿದ್ದರು. ಅವರಲ್ಲಿ ಭಾಷಾಂಧತೆ ಇರಲಿಲ್ಲ. ಅವರ ಕಾಲದಲ್ಲಿ ಅವರ ಕನ್ನಡ ಎಂ. ಎ. ತರಗತಿಯ ಶಿಷ್ಯರನೇಕರು ಅವರ ಮೇಲು ಪಂಕ್ತಿ ಯನ್ನು ಅನುಸರಿಸಿ ತಮಿಳನ್ನು ಅಭ್ಯಾಸ ಮಾಡಿದರು. ಶ್ರೀಯವರ ಆಳವಾದ ಪಾಂಡಿತ್ಯ ಅವರ ನಿರರ್ಗಳವಾದ ಉಪನ್ಯಾಸಗಳಲ್ಲಿ ವ್ಯಕ್ತವಾಗುತ್ತಿದ್ದಿತು. ಅವರು ಕನ್ನಡದ ಪ್ರಚಾರಕ್ಕೆ ಕನ್ನಡ ವಾತಾವರಣವನ್ನು ನಿರ್ಮಿಸುವುದರಲ್ಲಿಯೇ ತಮ್ಮ ಕಾಲ ವನ್ನು ಕಳೆಯಬೇಕಾಗಿ ಬಂದುದರಿಂದ ಅವರು ತಮಗೆ ಪ್ರಿಯವಾದ ಮತ್ತು ತಮಗೆ ಇನ್ನೂ ಹೆಚ್ಚು ಅಂತರರಾಷ್ಟ್ರೀಯ ಖ್ಯಾತಿಯನ್ನೂ ಲಾಭವನ್ನೂ ತರಬಹುದಾಗಿದ್ದ ಆಂಗ್ಲ ನಾಟಕ ವಿಮರ್ಶೆಗಳು ಮತ್ತು ಆಂಗ್ಲ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳನ್ನು ರಚಿಸುವ ಆಸೆಯನ್ನು ಮೂಲೆಗೊತ್ತರಿಸಬೇಕಾಯಿತು. ನನ್ನ ಸ್ನೇಹಿತರೂ ಪಾರ್ಲಿಮೆಂಟ್ ಮಾಜಿ ಸದಸ್ಯರೂ ಆದ ಮಂಗಳೂರಿನ ಶ್ರೀ ಕೆ. ಆರ್. ಆಚಾರ್‌ರವರು ಈ ಕೆಳಗಿನ ಸಂಗತಿಯನ್ನೇ ಹೇಳುತ್ತಾರೆ.

ಮಂಗಳೂರು ವಿದ್ಯಾಭಿಮಾನಿಗಳ ಪ್ರಾರ್ಥನೆಯನ್ನು ಮನ್ನಿಸಿ ಒಂದು ಸಲ ಬಿ. ಎಂ. ಶ್ರೀಯವರು ಉಪನ್ಯಾಸ ಮಾಡಲು ಮಂಗಳೂರಿಗೆ ಹೋದರು. ಸೈಂಟ್ ಅಲೋಸಿಯಸ್ ಕಾಲೇಜ್‌ನಲ್ಲಿ ಶೇಕ್ಸ್‌ಪಿಯರ್ ಮೇಲೆಯೇ ಏಳು-ಎಂಟು ಉಪನ್ಯಾಸ ಮಾಡಿದರಂತೆ. ಆಗ ಅಲ್ಲಿಗೆ ಬಂದಿದ್ದ ಕೆಲವು ಅಮೇರಿಕದ ಕಾಲೇಜುಗಳ ಇಂಗ್ಲಿಷ್ ಉಪಾಧ್ಯಾಯರು "ಶೇಕ್ಸ್‌ಪಿಯರನ್ನು ಇಷ್ಟು ಚೆನ್ನಾಗಿ ಅರ್ಥ ಮಾಡಿ ಕೊಂಡಿರುವವರು ಇಂಗ್ಲೆಂಡು ಅಮೇರಿಕದಲ್ಲಿ ಸಹ ಬಹಳ ಮಂದಿ ಇಲ್ಲ'' ....ಎಂದು ಹೇಳಿದರಂತೆ. ಇಷ್ಟು ಆಳವಾದ ಮತ್ತು ವಿಸ್ತಾರವಾದ ಇಂಗ್ಲಿಷ್, ಕನ್ನಡ ತಮಿಳು ಜ್ಞಾನದೊಂದಿಗೆ ಶ್ರೀಯವರು ಸಂಸ್ಕೃತದಲ್ಲಿಯೂ ತಕ್ಕಮಟ್ಟಿನ ಪಾಂಡಿತ್ಯವುಳ್ಳವ ರಾಗಿದ್ದರು. ಅವರು ಕೆಲವು ವೇದಗಳ ಋಕ್ಕುಗಳನ್ನೂ ಪ್ರಾರ್ಥನಾ ಭಾಗಗಳನ್ನೂ ಕನ್ನಡ ಕವಿತೆಗೆ ಪರಿವರ್ತಿಸಿದ್ದಾರೆ-"ಋತವೊಂದೆ ಗೆಲ್ವುದು ಅನೃತ ಮಲ್ತು" ಎಂಬುದು ಎಲ್ಲರಿಗೂ ತಿಳಿದಿರುವ ಉದಾಹರಣೆ.

ಹೀಗೆ ಕನ್ನಡದ ಏಳಿಗೆಗೆ ಅನುಕೂಲ ವಾತಾವರಣವನ್ನು ಕಲ್ಪಿಸುವುದರಲ್ಲಿ ತಮ್ಮ ಕಾಲಶಕ್ತಿ ಹಣಗಳ ಬಹುಭಾಗವನ್ನು ಶ್ರೀಯವರು ವಿನಿಯೋಗಿಸಬೇಕಾದರೂ ಅವರು

ಸೃಷ್ಟಿಸಿದ ಕಾವ್ಯಗಳು ನಾಟಕಗಳು ಅವಿರತ ಪರಿಶ್ರಮದ ಮಧ್ಯದಲ್ಲಿಯೂ ಅವರ ಕಾವ್ಯಪ್ರತಿಭೆ ಹೇಗೆ ಜಾಗ್ರತವಾಗಿದ್ದಿತೆಂಬುದನ್ನು ತೋರಿಸುತ್ತದೆ. ಶ್ರೀಯವರು ಕೆಲವು ಇಂಗ್ಲಿಷ್ ಗೀತೆಗಳು ಎಂಬ ಸಣ್ಣ ಕವನ ಸಂಗ್ರಹದೊಂದಿಗೆ (ಪ್ರಾರಂಭದಲ್ಲಿ ಇದು ಡೆಮ್ಮಿ ಆಕಾರದ ಎರಡಾಣೆ ಪುಸ್ತಕವಾಗಿತ್ತು) ಕನ್ನಡ ಕಾವ್ಯ ಪ್ರಪಂಚದಲ್ಲಿ ಪ್ರವೇಶಿಸಿದರು, ಅವರು ಅದೇ ಮಾರ್ಗದಲ್ಲಿ ಮುಂದುವರಿದಿದ್ದರೆ ಇನ್ನೂ ಎಷ್ಟೊಂದು ಗೀತೆಗಳನ್ನು ಅನುವಾದ ಮಾಡುತ್ತಿದ್ದರೋ ಇತರ ಎಷ್ಟು ಇಂಗ್ಲಿಷ್ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸುತ್ತಿದ್ದರೋ ? ಆದರೆ ಕನ್ನಡ ಕಾವ್ಯ ಪ್ರಪಂಚಕ್ಕೆ ಆದ ನಷ್ಟ ಕನ್ನಡ ಜನತೆಗೆ ಕನ್ನಡ ಜಾಗೃತಿಗೆ ಲಾಭವಾಯಿತು. ಕಾವ್ಯದ ಮಾರ್ಗದಲ್ಲಿ, ನಾಟಕವಾಗಿ ಶ್ರೀಯವರ "ಅಶ್ವತ್ಥಾಮನ್" ಮತ್ತು "ಪಾರಸಿಕರು" ಎಂಬ ಎರಡು ನಾಟಕಗಳು ಬಹಳ ಉತ್ತಮ ದರ್ಜೆಯವು. ಇಂಗ್ಲಿಷ್ ಗೀತೆಗಳಲ್ಲಿ ಶ್ರೀಯವರು ಹೊಸಕನ್ನಡದ ಸರಳತೆ ಶಕ್ತಿಗಳನ್ನು ವ್ಯಕ್ತಪಡಿಸಿದ್ದರೆ, ಅಶ್ವತ್ಥಾಮದಲ್ಲಿ ಹಳಗನ್ನಡದ ವೀರ್ಯವನ್ನು ಗ್ರೀಕ್ ಸಂಸ್ಕೃತಿಯ ಮಿಲನದಿಂದ ಉಂಟಾದ ಒಂದು ಸಂಕೀರ್ಣತೆಯನ್ನು ಚೆನ್ನಾಗಿ ತೋರಿಸಿದ್ದಾರೆ. ಇದೊಂದು ಶ್ರೇಷ್ಠವಾದ ಕೃತಿ. ಇದರಲ್ಲಿ ಆಧುನಿಕರಿಗೆ ಆದರ್ಶವಾದ ಮತ್ತೊಂದು, ಛಂದೋ ಮಾಧುರ್ಯವನ್ನು ಶ್ರೀಯವರು ಸಾಧಿಸಿದ್ದಾರೆ. ಅವರು ಅಶ್ವತ್ಥಾಮನ್‌ನಲ್ಲಿ ಸಾಧಿಸಿರುವ ಉದ್ದವಾದ ಕವಿತಾ ಸಾಲುಗಳು, ಹಳಗನ್ನಡ ಛಂದಸ್ಸಿನ ಮಾರ್ಗವನ್ನು ಮುಂದುವರಿಸುದುದಾಗಿದೆ. ಹೀಗೆ ಹಳೆಯ ಘಟಕಗಳ ಮೇಲೆ ಆಧರಿಸುವುದರಿಂದ ಹೊಸದಾದರೂ, ಛಂದಸ್ಸು ಎಷ್ಟು ಕೌಶಲವುಳ್ಳದುದು, ನಯವೂ ಸಾಹಸಮಯವೂ ಲಯವನ್ನು ಅನುಸರಿಸುವುದೂ ಆಗುತ್ತದೆಂಬುದನ್ನು ಹೊಸ ಕವಿಗಳು ಗಮನಿಸಬೇಕು. ಅಶ್ವತ್ಥಾಮನ್‌ನನ್ನು ಬರೆಯುವುದರಲ್ಲಿ ಶ್ರೀಯವರಿಗೆ ಒಂದು ಉದ್ದೇಶವೂ ಇತ್ತು. ಕನ್ನಡದಲ್ಲಿ ದುರಂತ ನಾಟಕಕ್ಕೆ ಇದೊಂದು ಉದಾಹರಣೆಯಾಗಿರಲಿ ಎಂದು ಒಬ್ಬ ಧೀರ ದುರಂತ ವ್ಯಕ್ತಿಗೆ ಸಾವು ಒದಗಿದರೂ ಅದು ಸಾವಲ್ಲ. ಮನುಷ್ಯತ್ವ ಯಾವ ಎತ್ತರ ಘನತೆಗೆ ಪುನರುತ್ಥಾನ ಹಿರಿಮೆಗೆ ಏರಬಲ್ಲದು ? ಅದಕ್ಕೆ ಈ ಗತಿ ಏಕೆ ಹೇಗೆ ಎಂಬುದನ್ನೆಲ್ಲ ತೋರಿಸಿ ಮಾನವನ ಸ್ವಭಾವವನ್ನು ಉನ್ನತ ಆದರ್ಶದೆಡೆಗೆ ಏರಿಸುವುದೇ ಈ ಕೃತಿಯ ಉದ್ದೇಶ. ಇದರಂತೆ ಶ್ರೀಯವರು ಪಾರಸಿಕರು ನಾಟಕ ಸಹ ಕನ್ನಡದಲ್ಲಿ ಹೊಸ ಪ್ರಯೋಗ. ಗ್ರೀಕ್ ಅನೇಕ ಕೃತಿಗಳನ್ನು ಶೇಕ್ಸ್‌ಪಿಯರನ ಎಲ್ಲ ನಾಟಕಗಳನ್ನು ಅಯಾ ಛಂದಸ್ಸುಗಳಲ್ಲಿಯೇ ಸೃಷ್ಟಿಸುವುದು ಶ್ರೀಯವರ ಉದ್ದೇಶವಾಗಿತ್ತು. ಆದರೆ ಅದಕ್ಕೆ ಕಾಲಾವಕಾಶ ಅವರಿಗೆ ದೊರೆಯಲಿಲ್ಲ. ಕನ್ನಡ ಸಾಹಿತ್ಯಕ್ಕೆ ಇದೊಂದು ದೊಡ್ಡ ನಷ್ಟ.

ಶ್ರೀಯವರು ಕನ್ನಡ ಮಾತೆಗೆ ಒಂದು ತೇಜಸ್ಸನ್ನೂ ಓಜಸ್ಸನ್ನೂ ಕೊಟ್ಟರು. ಅವರ ಕನ್ನಡ ಗದ್ಯಶೈಲಿ ತುಂಬ ಪ್ರಭಾವಶಾಲೀ ಮತ್ತು ಸತ್ವಪೂರ್ಣ ; ಅವರ ಭಾಷಣಗಳು ನಿರರ್ಗಳ ರಸಪೂರ್ಣ ಪ್ರವಾಹಗಳು. ಆ ಭಾಷಣಗಳು ಆಗಲೇ "ರಿಕಾರ್ಡ್" ಆಗಿದ್ದಿದ್ದರೆ ಕನ್ನಡ ಗದ್ಯದ ಶಕ್ತಿ ಸೊಗಸುಗಳು ನಮಗೆ ಲಭ್ಯವಾಗುತ್ತಿದ್ದವು. ನಮ್ಮ

ಅದೃಷ್ಟದಿಂದ ಮೈಸೂರಿನ ಕಾವ್ಯಾಲಯದವರು "ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ" ಎಂಬ ಹೆಸರಿನಲ್ಲಿ ಶ್ರೀಯವರ ಕೆಲವು ಉಪನ್ಯಾಸಗಳನ್ನು ಅಚ್ಚು ಮಾಡಿಸಿದ್ದಾರೆ. ಮೈಸೂರಿನ ವಿಶ್ವಸಾಹಿತ್ಯ ಮತ್ತು ಶಾರದ ಮಂದಿರ ಇವರುಗಳು ಶ್ರೀಯವರ ಇತರ ಕೃತಿಗಳನ್ನು, ಕೃತಿವಿಮರ್ಶೆಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಕನ್ನಡ ಸಾಹಿತ್ಯ ನಾಡುನುಡಿಗಳಿಗೆ ಸಂಬಂಧಿಸಿದ, ನಮ್ಮ ಮುಂದಲ ಪೀಳಿಗೆಗೆ ಸಹ ಆದರ್ಶವಾಗುವ ನಮ್ಮ ನುಡಿಯ ಶಕ್ತಿ ದೌರ್ಬಲ್ಯಗಳನ್ನು ವಿವೇಚಿಸಿದ್ದಾರೆ. ಅವುಗಳ ವ್ಯಾಸಂಗದಿಂದ ನಮ್ಮ ನಾಡಿಗೆ ಮಾರ್ಗದರ್ಶನವಾಗುವುದು. ಶ್ರೀಯವರು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆಗಿದ್ದು: ಕನ್ನಡ ಸಾಹಿತ್ಯ ಪರಿಷತ್ತಿಗೆ ಒಂದು ಮುದ್ರಣಾಲಯವನ್ನು ಸಹ ಸ್ಥಾಪಿಸಿಕೊಟ್ಟು ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ,

ಶ್ರೀಮಾನ್ ಬಿ. ಎಂ. ಶ್ರೀ ಯವರ ವ್ಯಕ್ತಿತ್ವದಲ್ಲಿ ಕಿರಿಯರಿಗೆ ಪ್ರೋತ್ಸಾಹ ಹೊಸ ಬರಹಗಾರರಿಗೆ ಎಲ್ಲ ಬಗೆಯ ನೆರವು (ಶ್ರೀಮಾನ್ ಮಾಸ್ತಿಯವರು ರೂಪಿಸಿದ್ದ ಲೇಖಕರ ಅನೌಪಚಾರಿಕ ಸಹಾಯ ನಿಧಿಯಲ್ಲಿ ಅವರೂ ಪ್ರಮುಖರಾಗಿದ್ದರು). ಔದಾರ್ಯ, ದೇಶಪ್ರೇಮ. ಹೊಸ ಬರಹಗಾರರ ಹಸ್ತಪ್ರತಿಗಳನ್ನು ಸಹ ಅವಲೋಕಿಸಿ ಬದಲಾವಣೆಗಳನ್ನು ಸೂಚಿಸುವುದು: ಉತ್ತಮವಾದುದನ್ನು ಮುಕ್ತ ಕಂಠದಿಂದ ಮೆಚ್ಚುವುದು. ಹಳ್ಳಿಗಾಡಿನ ಪ್ರೇಮ ಇವೆಲ್ಲ ಸಮರಸವಾಗಿ ಮಿಳಿತವಾಗಿದ್ದವು. ಅವರು ಒಂದೆಡೆ....ನಮ್ಮ ಹಳ್ಳಿಗಳ ಎಲ್ಲ ಬಗೆಯ ಕೊಳಕು ಕೊರತೆಗಳು ಮಾಯವಾಗಿ ಅವು ಮತ್ತೆ ನಂದನವನಗಳಾಗಬೇಕು. ಜನ ತೇಜಸ್ವಿಗಳಾಗಬೇಕು. ಚೊಕ್ಕಟ ಆರೋಗ್ಯ, ವಿದ್ಯೆ, ಒಕ್ಕಟ್ಟು, ಸಾಹಸ, ದೇಶಾಭಿಮಾನ, ಭಾಷಾಭಿಮಾನ, ಧರ್ಮಶ್ರದ್ಧೆ, ತುಂಬು ಬದುಕು ಹಳ್ಳಿಗಳಲ್ಲಿ ಮತ್ತೆ ಮನೆ ಮಾಡಬೇಕು. ಎಲ್ಲೆಲ್ಲಿಯೂ ಸಿರಿಯೂರು ಸಿರಿಹಟ್ಟಿ ಸಿರಿಹೊಳಲು ಹೊಂದಿ ಜನಪದ ಹಾಡುಗಳು ಮತ್ತೆ ಊಟೆ ಬುಗ್ಗೆಯಂತೆ ನಲಿದಾಡಬೇಕು. ಗೆಯ್ಮೆ ಗೆಯ್ಯುತ್ತಾ ಹಾಡು ಹೊಮ್ಮಬೇಕು. ನಾಡು ಹಸನಾಗಬೇಕು. ಹಳ್ಳಿಗಳು ದೊಡ್ಡ ಬದುಕು ಬದುಕಿದರೆ ನಾಡಿಗೆ ನಾಡೇ ಬಾಳೀತು, ಬೆಳಗೀತು." ಎಂದು ಹೇಳಿದ್ದಾರೆ.

"ಆಳ್ ತಾಯ್ ಬಾಳ್ ತಾಯ್ ಗೆಲ್ ತಾಯ್
ಕನ್ನಡಿಗರ ಅಧೀಶ್ವರಿ ಓ ರಾಜೇಶ್ವರೀ"

ಇದೇ ನಮ್ಮೆಲ್ಲರ ಆಸೆ ಬಯಕೆ ಪ್ರಾರ್ಥನೆ ಆಗಲಿ.

# ಬಿ. ಎಂ. ಶ್ರೀಕಂಠಯ್ಯನವರು

**ಪ್ರಧಾನ ಗುರುದತ್**

ಹೊಸಗನ್ನಡದ ಆಚಾರ್ಯ ಪುರುಷರಲ್ಲಿ ಒಬ್ಬರಾದ ಬಿ. ಎಂ. ಶ್ರೀಕಂಠಯ್ಯನವರು ಕನ್ನಡ ನಾಡು–ನುಡಿಗಳಿಗೆ ಸಲ್ಲಿಸಿದ ಸೇವೆಯ ಒಂದು ಪ್ರಮುಖ ಅಂಗ ಅವರು ನೀಡಿದ ಅನುವಾದಗಳು. 1926ರಲ್ಲಿ 'ಇಂಗ್ಲಿಷ್ ಗೀತಗಳು' ಎಂಬ ಸಂಕಲನದೊಂದಿಗೆ ಆರಂಭಗೊಂಡ ಅವರ ಈ ಅನುವಾದ ಕಾಯಕ 1948ರಲ್ಲಿ ಪ್ರಕಟವಾದ ಮೊಹಮ್ಮದ್ ಅಬ್ಬಾಸ್ ಶುಸ್ತ್ರಿಯವರ ಗ್ರಂಥದ ಕನ್ನಡ ಆವೃತ್ತಿಯಾದ ಇಸ್ಲಾಂ ಸಂಸ್ಕೃತಿ ಎಂಬ ಗ್ರಂಥದೊಡನೆ ಮಂಗಳವನ್ನು ಕಂಡಿತು. ಸುಮಾರು 22 ವರ್ಷಗಳ ಸುದೀರ್ಘ ಅವಧಿಯಲ್ಲಿ ಅವರು ಬೆಳಕು ಕಾಣಿಸಿದ ಇತರ ಅನುವಾದಗಳು ಎರಡೇ ಎರಡು : ಒಂದು 1929ರಲ್ಲಿ ಪ್ರಕಟವಾದ 'ಅಶ್ವತ್ಥಾಮನ್', ಇನ್ನೊಂದು 1935 ರಲ್ಲಿ ಬೆಳಕು ಕಂಡ 'ಪಾರಸಿಕರು.' ಶ್ರೀಯವರ ಒಟ್ಟಾರೆ ಬರೆಹದ ಪ್ರಮಾಣ ನಮ್ಮಲ್ಲಿ ಹೇಗೆ ಅತೃಪ್ತಿಯನ್ನು ಮೂಡಿಸುತ್ತದೆಯೋ, ಹಾಗೆಯೇ ಅನುವಾದದ ಪ್ರಮಾಣವೂ. ಆದರೆ, ನಮ್ಮ ಪುಣ್ಯವೆಂದರೆ ಅವರು ಮಾಡಿದ ಈ ಅಲ್ಪ ಪ್ರಮಾಣದ ಅನುವಾದವೂ ಕನ್ನಡಕ್ಕೆ ತಾರಕವಾಯಿತು, ಪ್ರೇರಕವಾಯಿತು, ಪೋಷಕವಾಯಿತು. ಅನುವಾದದ ಸ್ವರೂಪ–ಲಕ್ಷಣಗಳನ್ನು ವಿವರಿಸುತ್ತಾ ಡಿ. ವಿ. ಜಿ. ಯವರು ಹೇಳಿದ ಸೂತ್ರಪ್ರಾಯವಾದ ಉಕ್ತಿ–ಅಂದರೆ, "ಸ್ವತಂತ್ರ ಕಾವ್ಯದ ಪೈರು ಹುಟ್ಟುವುದಕ್ಕೆ ಮೊದಲು ನಡೆದಿರಬೇಕಾದ ಉಳುಮೆಯ ಕೆಲಸವೇ ತರ್ಜುಮೆ" ಎಂಬ ಉಕ್ತಿ– ಬಿ. ಎಂ. ಶ್ರೀಯವರು ಮಾಡಿದ ಕಾರ್ಯದ ವಿಷಯದಲ್ಲಿ ಚರಿತಾರ್ಥಗೊಂಡಿತು. "ಅವು ಪ್ರಕಟವಾದ ಗಳಿಗೆ ಅಮೃತಗಳಿಗೆ ; ಅದನ್ನು ರಚಿಸಿದ ಹಸ್ತ ಅಮೃತಹಸ್ತ...ಅದಾದ ನಾಲ್ಕು ವರ್ಷಗಳಲ್ಲಿ ಅದೇನು ಬೆಳೆಯ ಚಿಹ್ನೆ ಕಂಡಿತು ! ಅಲ್ಲಿಂದ ಈಚಿನ ಇಪ್ಪತ್ತು ವರ್ಷಗಳಲ್ಲಿ ಎಂಥ ಹುಲುಸು ಬೆಳೆ ಬೆಳೆದಿದೆ. ಅದರಲ್ಲಿ ಅದೆಷ್ಟು ಭಾಗ ಪ್ರತ್ಯಕ್ಷವಾಗಿ ಶ್ರೀಕಂಠಯ್ಯನವರ ಶಿಷ್ಯರಾಗಿದ್ದವರ ಕೆಲಸ ! ನಿಜವಾಗಿ ಶ್ರೀಕಂಠಯ್ಯನವರು ಪುಣ್ಯಾತ್ಮರು" ಎಂದು ಮಾಸ್ತಿವೆಂಕಟೇಶ ಅಯ್ಯಂಗಾರರೂ, "ಹೊಸಕವನಗಳಿಗೆ ಮಾರ್ಗದರ್ಶಕವಾಗಿ, ತರುಣರ ಮೆಚ್ಚಿಕೆಯದಾಗಿ, ಭಾವಗೀತೆಗಳ ಭಾಷಾಂತರಕ್ಕೊಂದು ಕೈಪಿಡಿಯಾಗಿ, ಅಕ್ಲಿಷ್ಟ ಪ್ರಸನ್ನ ಕಾವ್ಯಶೈಲಿಗೆ ಮಾದರಿಯಾಗಿ ನಿಲ್ಲುವುದು. ಹೊಸ ಕವನಗಳ ಓಂಕಾರದಲ್ಲಿ ಶ್ರೀಯವರ ಈ ಶ್ರೀಕಾರವು ನಿತ್ಯ ನವೀನವಾಗಿ ಉಳಿಯಲಿ" ಎಂದು ಬೇಂದ್ರೆಯು

ವರೂ, "ಅವರು ತೆರೆದ ಮಾರ್ಗದಲ್ಲಿ ಕನ್ನಡಕವಿತೆ.... ಸೆರೆಗೊಂಡು ಹರಿಯಿತು" ಎಂದು ತೀ. ನಂ. ಶ್ರೀಯವರೂ-ಹೀಗೆ ಸಾಹಿತಿಗಳೂ, ವಿದ್ವಾಂಸರೂ ಒಕ್ಕೊರಲಿನಿಂದ ಉದ್ಘೋಷಿಸಿದ ಈ ಪ್ರಶಂಸೆ, ಹಾರೈಕೆ, ಹಿರಿಮೆಗಳನ್ನೂ ಆತ್ಮೀಕರಿಸಿಕೊಂಡಿರುವ ಶ್ರೀಯವರ ಕೃತಿ 'ಇಂಗ್ಲಿಷ್ ಗೀತೆಗಳು' ಶ್ರೀಯವರು ನಮಗೆ ಮೊದಲು ನೀಡಿದ ಅನುವಾದ. ಹೋಮರನ ಕೃತಿಯ ಅನುವಾದದ ಸಂದರ್ಭದಲ್ಲಿ ಅನುವಾದಕನೊಬ್ಬ ಹೊಸದಾಗಿ ಬಳಸಿದ ಛಂದಸ್ಸು "ಇಂಗ್ಲಿಷ್ ಕಾವ್ಯದ 'ಪಾತ್ರ'ವನ್ನೇ ಬದಲಾಯಿಸಿ ಬಿಟ್ಟಿತು" ಎಂದು ಹೇಳಿದ್ದಾರೆ. ಕನ್ನಡದಲ್ಲಿ ಇಂಥ ಇತಿಹಾಸವನ್ನು ನಿರ್ಮಿಸಿದ ಕೃತಿ 'ಇಂಗ್ಲಿಷ್ ಗೀತೆಗಳು'. ಇಂಥದೇ ಇತಿಹಾಸವನ್ನು ನಿರ್ಮಿಸಿದ ಅವರ ಇನ್ನೊಂದು ಅನುಪಮ ಅನುವಾದ 'ಅಶ್ವತ್ಥಾಮನ್'. "ಅಶ್ವತ್ಥಾಮನ್ ಒಂದು ಅದ್ಭುತವಾದ ಸಾಧನೆ". ಎಂದೂ, "ಅಶ್ವತ್ಥಾಮನ್ ಈಚಿನ ಕನ್ನಡ ಸಾಹಿತ್ಯದ ಮೇಲೆ ಅಗಾಧ ಪ್ರಭಾವ ಬೀರಿದೆ" ಎಂದೂ, "ಮಿಲ್ಟನನ" ಸ್ಯಾಮ್ಸನ್ ಅಗೊನಿಸ್ಟೀಸ್" ಇಂಗ್ಲೀಷ್ ಭಾಷೆಯಲ್ಲಿನ ಪರಿಶುದ್ಧ ಗ್ರೀಕ್ ದುರಂತ ನಾಟಕವಾಗಿರುವಂತೆ ಪ್ರೊ. ಶ್ರೀಕಂಠಯ್ಯ ನವರ 'ಅಶ್ವತ್ಥಾಮನ್' ಕನ್ನಡದಲ್ಲಿನ ಪರಿಶುದ್ಧ ಗ್ರೀಕ್ ದುರಂತ ನಾಟಕವಾಗಿದೆ" ಎಂದೂ ವಿಮರ್ಶಕರು ಬಗೆಬಗೆಯಾಗಿ ಕೊಂಡಾಡಿದ್ದಾರೆ. ವಾಸ್ತವವಾಗಿ ಶ್ರೀಯವರ ಹೆಸರು ಕನ್ನಡಸಾಹಿತ್ಯದ ಇತಿಹಾಸದಲ್ಲಿ ಅಜರಾಮರವಾಗಿ ಉಳಿಯಲು ಬಹುಮಟ್ಟಿಗೆ ಕಾರಣವಾಗಿರುವುವು ಅವರು ಕನ್ನಡಿಗರಿಗೆ ನೀಡಿರುವ ಅನುವಾದಗಳು. ಹೀಗೆ ಅವರಿಗೆ ವಿಶೇಷ ಖ್ಯಾತಿಯನ್ನು ತಂದುಕೊಟ್ಟಿರುವ ಹಾಗೂ ಅಷ್ಟಾಗಿ ಪ್ರಸಿದ್ಧಿಯನ್ನು ಪಡೆಯ ದಿರುವ ಅವರ ಅನುವಾದಗಳನ್ನು ಒಂದು ಸಮೀಕ್ಷೆಗೆ ಒಳಪಡಿಸುವುದು ಈ ಪ್ರಬಂಧ ದಲ್ಲಿ ನನ್ನ ಉದ್ದೇಶ. ಈ ಅನುವಾದಗಳನ್ನು ಇಲ್ಲಿ ಅನುವಾದ ಮಾತ್ರವಾಗಿ ಪರಿಶೀಲಿಸ ಲಾಗಿದೆಯೇ ಹೊರತು, ಅವುಗಳ ಪ್ರಭಾವ ಮತ್ತು ಪರಿಣಾಮಗಳ ದೃಷ್ಟಿಯಿಂದಲ್ಲ. ಇದಕ್ಕೆ ಕಾರಣ- ಆ ಮುಖಗಳ ಪರಿಶೀಲನೆ, ಇತರ ಗೋಷ್ಠಿಗಳ ಅಂಗವಾಗಿ, ಇತರ ವಿದ್ವಾಂಸರುಗಳಿಂದ ಈಗಾಗಲೇ ನಡೆದಿರುವುದು. ಆನುಷಂಗಿಕವಾಗಿ ಅಭಿಪ್ರಾಯಗಳ ಪುನರಾವರ್ತನೆಯಾಗಿದ್ದರೆ ಅದಕ್ಕಾಗಿ ತಮ್ಮ ಕ್ಷಮೆಯನ್ನು ಕೋರುತ್ತೇನೆ.

## ಇಂಗ್ಲಿಷ್ ಗೀತೆಗಳು

ಕಾಲಾನುಕ್ರಮದ ದೃಷ್ಟಿಯಿಂದ ಹಾಗೂ ಮಹತ್ವದ ದೃಷ್ಟಿಯಿಂದ ಅಗ್ರಗಣ್ಯ ವಾಗಿರುವ ಶ್ರೀಯವರ ಅನುವಾದ 'ಇಂಗ್ಲಿಷ್ ಗೀತಗಳು'. ಗ್ರಂಥರೂಪದಲ್ಲಿ ಹೊರ ಬರುವುದಕ್ಕೂಮೊದಲು 1919 ರಿಂದ 1924ರ ನಡುವಣ ಅವಧಿಯಲ್ಲಿ ಈ ಸಂಕಲನದ ಹಲವು ಗೀತೆಗಳು 'ವಿದ್ಯಾದಾಯಿನಿ', 'ಗ್ರಂಥಮಾಲೆ' ಮತ್ತು 'ಕರ್ಣಾಟಕ ಜನಜೀವನ' ಇವುಗಳಲ್ಲಿ ಪ್ರಕಟವಾಗಿದ್ದುವು ಎಂದು ಶ್ರೀಯವರೇ ತಿಳಿಸಿದ್ದಾರಾದರೂ, ಗ್ರಂಥ ರೂಪದಲ್ಲಿ ಇವು ಒಟ್ಟಾಗಿ ಬೆಳಕನ್ನು ಕಂಡದ್ದು 1926 ರಲ್ಲಿಯೇ. ಇದರಲ್ಲಿ ಜ್ಞಾತರಾ ಗಿರುವ 30 ಮಂದಿ ಇಂಗ್ಲಿಷ್ ಕವಿಗಳ 58 ರಚನೆಗಳೂ, ಅಜ್ಞಾತಕವಿಗಳ 2 ರಚನೆ

ಗಳೂ, ಶ್ರೀಯುವರ 3 ಮೌಲಿಕ ರಚನೆಗಳೂ–'ಕಾಣಿಕೆ', 'ಭರತಮಾತೆಯ ವಾಕ್ಯ' ಮತ್ತು 'ಮೈಸೂರು ಮಕ್ಕಳು'–ಹೀಗೆ ಒಟ್ಟು 63 ಗೀತಗಳು ಸಂಕಲಿತವಾಗಿವೆ. ಪ್ರಮಾಣದ ದೃಷ್ಟಿಯಿಂದ ನೋಡಿದಾಗ, ಷೆಲ್ಲಿ ಮತ್ತು ವರ್ಡ್ಸ್‌ವರ್ತ್ (ತಲಾ 7 ಗೀತಗಳು) ಹಾಗೂ ವರ್ಡ್ಸ್‌ವರ್ತ್ (5 ಗೀತಗಳು), ಬ್ರೌನಿಂಗ್ ಟೆನಿಸನ್ ಮತ್ತು ಸ್ಕಾಟ್ (ತಲಾ 3 ಗೀತೆಗಳು), ಕ್ಯಾಂಬೆಲ್, ಕೂಪರ್, ಬೈರನ್, ಷೆಲ್ಲಿ, ಷೇಕ್ಸ್ ಪೀಯರ್ ಮತ್ತು ಸೆದೆ (ತಲಾ 3 ಗೀತಗಳು) ಹಾಗೂ ಇತರ 18 ಕವಿಗಳು (ತಲಾ 1) ಅನುಕ್ರಮವಾದ ಸ್ಥಾನವನ್ನು ಪಡೆದಿರುವುದನ್ನು ಗುರುತಿಸಬಹುದಾಗಿದೆ– ಅಜ್ಞಾತಕರ್ತೃಕವಾದ 2 ಗೀತಗಳನ್ನು ಹಾಗೂ ಶ್ರೀಯವರ 3 ಸ್ವಂತ ರಚನೆಗಳನ್ನು ಬಿಟ್ಟು.

ಈ ಬಗೆಯಾದ ಆಯ್ಕೆಗೆ ಆಧಾರವಾಗಿರುವ ಸಂಗತಿಗಳು ಯಾವುವು ಎಂಬುದನ್ನು ಶ್ರೀಯವರು ತಮ್ಮ ಈ ಮಾತುಗಳಲ್ಲಿ ಸ್ಪಷ್ಟಪಡಿಸಿದ್ದಾರೆ : (i) "ಇಂಗ್ಲಿಷ್ ಕಾವ್ಯ ಮಾರ್ಗವನ್ನು ಕನ್ನಡಿಗರು ಈ ಸಣ್ಣಗ್ರಂಥದಿಂದ ಸ್ವಲ್ಪಮಟ್ಟಿಗಾದರೂ ತಿಳಿಯ ಬಹುದು; (ii) "ವಿಶ್ವಕವಿತಾ ವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷ ಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯ ವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜ ಭಾಷೆಯಲ್ಲಿ ಸೌಂದರ್ಯ ರಚನೆಯನ್ನು ಮಾಡಿರುವರೋ ಅದನ್ನೆಲ್ಲ ಶ್ರದ್ಧೆಯಿಂದ ಪರಾಮರ್ಶಿಸಿ, ಧೈರ್ಯವನ್ನೂ ಶಿಕ್ಷಣಬದ್ಧವಾದ ಸ್ವಾತಂತ್ರ್ಯವನ್ನೂ ವಹಿಸಿ ಕನ್ನಡ ಕವಿಗಳು ಹಿಂದ ಕ್ಕಿಂತಲೂ ಮುಂದೆ ಇನ್ನೂ ಶ್ರೇಯಸ್ಸನ್ನೇ ತಾಳಲಿ."

ಈ ಉದ್ದೇಶದಿಂದ ಆಯ್ದಿರುವ ಕವನಗಳೆಲ್ಲ ಸಹಜವಾಗಿಯೇ ಅತ್ಯುತ್ಕೃಷ್ಟ ವಾದುವಾಗಿರಬಹುದೆಂಬ ಕಲ್ಪನೆಯನ್ನು ಯಾರಾದರೂ ಇರಿಸಿಕೊಂಡಿದ್ದರೆ, ಅವರಿಗೆ ಶ್ರೀಯವರು ಹೇಳುತ್ತಾರೆ : "ಇಲ್ಲಿ ಕೊಟ್ಟಿರುವ ಕವನಗಳೆಲ್ಲಾ ಇಂಗ್ಲಿಷ್ ಕಾವ್ಯ ಮಾಲೆಯ ನಾಯಕರತ್ನಗಳೆಂದು ಆದುಕೊಂಡವಲ್ಲ. ಉತ್ತಮರಾದ ಕವಿಗಳು ಇಲ್ಲಿ ಎಲ್ಲರೂ ಇಲ್ಲ. ಆಗಾಗ್ಗೆ ಓದುತ್ತಿರುವಾಗ ನನ್ನ ಮನಸ್ಸಿಗೊಪ್ಪಿ. ನನ್ನ ಕೈಮೀರದುವಾಗಿ ಕಂಡುಬಂದ ಗೀತಗಳಿವು." ಹೀಗೆ ಗೀತಗಳನ್ನು ಆಯ್ದುಕೊಳ್ಳುವಲ್ಲಿಯೂ ಅವರ ಒಲವು ಏಕೆ ಹಾಗೂ ಯಾವುವರತ್ತ ಹರಿದಿದೆ ಎಂಬುದನ್ನು ಅವರು ಸ್ಪಷ್ಟಪಡಿಸಿದ್ದಾರೆ. "ಇಂಗ್ಲಿಷ್ ಕವಿಗಳು ಶೃಂಗಾರ ರಸವನ್ನು ಹೇಗೆ ಗಂಭೀರವಾಗಿಯೂ, ಸೂಕ್ಷ್ಮ ವಾಗಿಯೂ ಸ್ವಭಾವಿಕವಾಗಿಯೂ ತೋರಿಸುವರೆಂಬುದನ್ನು ತಿಳಿಸುವುದಕ್ಕಾಗಿ ಆ ಬಗೆಯ ಗೀತಗಳು ಕೊಂಚ ಹೆಚ್ಚಾಗಿ ಬಂದಿವೆ. ಇಂಗ್ಲಿಷ್ ಸಾಹಿತ್ಯ ಸಮುದ್ರದ ಕರೆಯಲ್ಲಿ ತೆರೆಯೆಸೆದ ಈ ಕೆಲವು ಸಣ್ಣ ಚಿಪ್ಪುಗಳಿಂದ ಆ ದಿವ್ಯರತ್ನಾಕರದ ಲಾವಣ್ಯವೂ, ವಾಸನೆಯೂ, ಘೋಷವೂ, ರುಚಿಯೂ, ಸಹೃದಯರ ಅನುಭವಕ್ಕೆ ಸಿದ್ಧಿಸದೆ ಇರಲಾರವು."

ಇವೆಲ್ಲಕ್ಕಿಂತ ಹೆಚ್ಚಾಗಿ ಶ್ರೀಯವರನ್ನು ಇಂಥ ಸಾಹಸದಲ್ಲಿ ತೊಡಗಿಸಿದ ಒಂದು ಆಂತರಿಕ ಅಭೀಪ್ಸೆಯೂ ಉಂಟು. ನಮ್ಮ ಹೆಣ್ಣಾದ ಕನ್ನಡನುಡಿ ಹಾಗೂ ಪಡುವ ಕಡಲ ಹೊನ್ನ ಹೆಣ್ಣಾದ ಇಂಗ್ಲಿಷ್‌ಭಾಷೆ, ತಮ್ಮನ್ನು ಒಲಿಸಿ, ನಲಿಸಿ, ಕಲಿಸಿ ಕುಣಿಸುತ್ತಿದ್ದಾಗ,

"ಇವಳು ಸೊಬಗನವಳು ತೊಟ್ಟು
 ನೋಡ ಬಯಸಿದೆ ;
ಅವಳ ತೊಡಿಗೆ ಇವಳಿಗಿಟ್ಟು
 ಹಾಡ ಬಯಸಿದೆ."

—ಎಂದು ಶ್ರೀಯವರೇ 'ಕಾಣಿಕೆ'ಯಲ್ಲಿ ಹೇಳಿಕೊಂಡಿದ್ದಾರೆ.

ಇಂಥ ಅಭೀಪ್ಸೆಯ ಮತ್ತು ಆಯ್ಕೆಯ ಗೀತಗಳನ್ನು ಅನುವಾದಿಸಿದಲ್ಲಿ ತಾವು ಅನುಸರಿಸಿದ ವಿಧಾನ ಯಾವುದೆಂಬುದನ್ನು ಶ್ರೀಯವರು ತಿಳಿಸಿದ್ದಾರೆ : "ಭಾಷಾಂತರಕಾರರು ಕೊಲೆಗಾರರು" ಎಂದು ಪಾಶ್ಚಾತ್ಯರಲ್ಲಿ ಒಂದು ಗಾದೆಯುಂಟು. ಆ ಅಪವಾದವನ್ನು ತಪ್ಪಿಸಿಕೊಂಡಿರುವೆನೆಂದು ನಾನು ತಿಳಿದುಕೊಂಡಿಲ್ಲ. ಆದರೆ ನನ್ನ ಬುದ್ಧಿಬಲವಿರುವಮಟ್ಟಿಗೂ ಮೂಲವನ್ನು ಪ್ರತಿಬಿಂಬಿಸುವ ಕರ್ತವ್ಯವನ್ನೇ ಮುಂದಿಟ್ಟುಕೊಂಡು ಕೆಲಸ ಮಾಡಿದ್ದೇನೆ. ಕೆಲವು ಕಡೆ ಹೆಸರು, ಭಾವ ಮುಂತಾದುವು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ, ಸಾಮಾನ್ಯವಾಗಿ ಪದಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸ–ಇವೆಲ್ಲವೂ ಮೂಲಕವಿಯ ವ್ಯಕ್ತಿತ್ವವನ್ನೇ ಅನುಸರಿಸಿವೆ. ಕನ್ನಡದ ಜಾಯಮಾನವನ್ನು ಮೀರದೆ ಎಷ್ಟು ಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟು ಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ. ಇಂಗ್ಲಿಷ್ ಬಲ್ಲವರು ಇದನ್ನು ತಿಳಿಯಬಲ್ಲರು. ಅಚ್ಚಗನ್ನಡಿಗರು ಈ ಭಾಗವಲ್ಲಿ ಅಸಮಾಧಾನ ಪಡಬಾರದೆಂದು ನನ್ನ ಪ್ರಾರ್ಥನೆ."

ಶ್ರೀಯವರ ಈ ಮಾತುಗಳಲ್ಲಿ ಆಶಯದ ಉದಾತ್ತತೆ, ಆಯ್ಕೆಯ ಒಲವು–ನಿಲವು ಹಾಗೂ ಕಾರಣ, ಸ್ವಸಾಮರ್ಥ್ಯದ ಬಗೆಗಿನ ವಿನಯಪೂರ್ಣಧೋರಣೆ ಎದ್ದು ಕಾಣುತ್ತವೆ. ತಾವು ಕೈಕೊಂಡ ಕಾರ್ಯಕ್ಕೆ ಶ್ರೀಯವರು ಅಸಮರ್ಥರೇನೂ ಆಗಿರಲಿಲ್ಲ, ವಾಸ್ತವವಾಗಿ, ಇಂಗ್ಲಿಷ್ ಭಾಷಾ ಸಾಹಿತ್ಯಗಳ ಬಗೆಗಿನ ಅವರ ವಿದ್ವತ್ತು ಸ್ವತಃ ಆಂಗ್ಲ ಪ್ರಾಧ್ಯಾಪಕರನ್ನು ಬೆರಗುಗೊಳಿಸುವಂಥದಾಗಿತ್ತು. ಒಬ್ಬರಂತೂ "ಹಿಂದಿನ ಜನ್ಮದಲ್ಲಿ ಶ್ರೀಯವರು ಆಕ್ಸ್‌ಫರ್ಡ್‌ನಲ್ಲೋ ಕೇಂಬ್ರಿಜ್‌ನಲ್ಲೋ ಪ್ರಾಧ್ಯಾಪರಾಗಿದ್ದಿರಬೇಕು" ಎಂದು ಉದ್ಗಾರವೆತ್ತಿದ್ದು ಉಂಟು. ಆದರೆ, ನಮ್ಮಲ್ಲಿಯೇ ಕೆಲವರು ಶ್ರೀಯವರ ಆಸೆ-ಅಭೀಪ್ಸೆಗಳನ್ನು ಲೇವಡಿ ಮಾಡುತ್ತಿದ್ದರು ಎಂದು ವಿ. ಸೀತಾರಾಮಯ್ಯನವರು ಒಂದೆಡೆ ಉಲ್ಲೇಖಿಸಿದ್ದಾರೆ : "ಇವಳ ಸೊಬಗನವಳು ತೊಟ್ಟು, ನೋಡಬಯಸಿದೆ : ಅವಳ ತೊಡಿಗೆ ಇವಳಿಗಿಟ್ಟು ಹಾಡಬಯಸಿದೆ" ಎಂಬಲ್ಲಿ ಬರುವ ಪ್ರೀತಿಗಾಗಿ ಅವರನ್ನು ಲೇವಡಿ ಮಾಡಿದ್ದವರುಂಟು. 'ಸೊಬಗನುಟ್ಟು' ಎಂದಿದೆಯೇ ಹೊರತು 'ಉಡೆಯ

ನುಟ್ಟು' ಎಂದಿಲ್ಲ ; 'ತೊಟ್ಟು', 'ತೊಡಿಗೆ ಇಟ್ಟು' ಎಂಬವು ಇಲ್ಲಿಯ ಮಾತುಗಳು ; ಉಡುಪಿಗೆ ಸಂಬಂಧಪಟ್ಟ ಮಾತುಗಳಲ್ಲ ; ಒಡವೆ-ತೊಟ್ಟದ್ದು : ಇಂಗ್ಲಿಷ್‌ಫ್ರಾಕ್, ಗೌನ್‌ಹಾಕಿ ಭಾರತದ ಮಹಿಳೆಯನ್ನು ದೊರೆಸಾನಿ ಮಾಡಬೇಕೆನ್ನಲಿಲ್ಲ. ಹಲ್ಲುಕಿರಿಯ ಬೇಕೆಂದವರಿಗೆ ಯಾವುದೂ ಅವಕಾಶ ಕಲ್ಪಿಸುತ್ತದೆ. ಕ್ಷೀರಸಾಗರಶಾಯೀಯಾದ ವಿಷ್ಣುವಿನ ದುಃಸ್ಥಿತಿಯನ್ನೂ ಅಣಕಿಸಿದರೆ ನಗೆಪಾಟಲಾಗುತ್ತಿದೆಯಲ್ಲವೆ ?" ಇದಕ್ಕೆ ಸಮರ್ಥನೆಯಾಗಿ ಇಂಗ್ಲಿಷ್ ಗೀತೆಗಳಲ್ಲಿನ ಒಂದು ಗೀತೆಯನ್ನೂ ಉದಾಹರಿಸ ಬಹುದೇನೋ. ಪಾಶ್ಚಾತ್ಯಲೋಕದ 'ಪ್ರೌಡ್‌ಮೇಸಿ' ಕನ್ನಡಕ್ಕೆ ಬರುವಾಗ 'ಬಿಂಕದ ಸಿಂಗಾರಿ'ಯಾಗಿ "ಚಿಮ್ಮುತ ನಿರಿಯನು ಬನದಲಿ ಬಂದ"ವಳಾಗುತ್ತಾಳೆ. ಇರಲಿ !

'ಇಂಗ್ಲಿಷ್ ಗೀತಗಳನ್ನು ವಿಮರ್ಶಿಸಲು ಹೊರಡುವಾಗ ನಾವು ಗಮನಿಸಬೇಕಾದ ಒಂದೆರಡು ಸಂಗತಿಗಳಿವೆ ; ಒಂದು, ಇದು ಶ್ರೀಯವರು ನಡೆಸಿದ ಬಗೆಬಗೆಯಾದ ಪ್ರಯೋಗಗಳ ಪ್ರಯೋಗಶಾಲೆ ; ಹೊಸ ಹೊಸ ಹಾದಿಗಳನ್ನು ತೆರೆದು ತೋರುವ ಕನ್ನೆ-ಸಾಹಸ. ಒಂದು ಪ್ರಯೋಗ ಚಿತ್ತಾಕರ್ಷಕವಾಗಿರಬಹುದು ; ಒಂದು ಪ್ರಯೋಗ ಅದ್ಭುತ ಪರಿಣಾಮಗಳನ್ನು ಸಾಧಿಸಿರಬಹುದು. ಇನ್ನೊಂದು ಪ್ರಯೋಗ ಬೇಸರವನ್ನು ತರಬಹುದು. ಮತ್ತೊಂದು ಪ್ರಯೋಗ ನಿಷ್ಫಲವಾಗಿರಬಹುದು. ಆದರೆ ಮುಖ್ಯವಾಗುವುದು' ಒಟ್ಟಾರೆ ಸಾಧನೆ ಏನು ? ಎಂಬುದು ; ಹಾಗೂ ಈ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಯಂತೂ ಇಲ್ಲ. ಶ್ರೀಯವರ ಇಂಗ್ಲಿಷ್ ಪ್ರಾಧ್ಯಾಪಕತ್ವ ಅವರು ಭಾವದ ಹಾದಿಯನ್ನು ಹಿಡಿಯುವಲ್ಲಿ ದಾರಿ ತಪ್ಪದಷ್ಟರ ಮಟ್ಟಿಗೆ ನೆರವಾಗಬಹುದೇ ಹೊರತು ಅದು ಪ್ರತಿಯೊಂದು ಕವನದ ಅನುವಾದ ಯಶಸ್ಸಿಗೆ ಭರವಸೆಯಾಗಿ 'ಗ್ಯಾರಂಟಿ'ಯಾಗಿ ನಿಲ್ಲಲಾರದು. ಜೊತೆಗೆ, ಡಾ.ಪ್ರಭುಶಂಕರ ಅವರೆಂದಿರುವಂತೆ "ಕವಿಯ ಎಲ್ಲ ಕವನಗಳೂ, ಹೇಗೆ ಸಿದ್ಧಿಯ ಶಿಖರವನ್ನು ಮುಟ್ಟ ಲಾರವೋ ಹಾಗೆಯೇ ಅನುವಾದಕರ ಎಲ್ಲ ಅನುವಾದಗಳೂ ಸಂಪೂರ್ಣವಾಗಿ ಸಮರ್ಪಕವಾಗಲಾರವು" ಎಂಬುವುದನ್ನು ನಾವು ಒಪ್ಪಬೇಕಾಗುತ್ತದೆ.

ಹೇಳಿ ಕೇಳಿ ಶ್ರೀಯವರು ಕೈಹಾಕಿದ್ದು ಕಾವ್ಯದ ಅನುವಾದಕ್ಕೆ. ಇದು ಎಷ್ಟು ದುಸ್ಸಾಧ್ಯವಾದುದು ? ಜಾನ್ಸನ್ ''Poetry, Sir, cannot simply be translated'' ಎಂದು ಎಚ್ಚರಿಸಿದರೆ, ಫ್ರಾಸ್ಟ್ ''Poetry is what gets lost in translation'' ಎಂದು ಅಪಾಯದ ಗಂಟೆಯನ್ನೇ ಮೊಳಗಿಸಿದರೆ, ''Translation of poetry is like kissing one's sweetheart through a veil'' ಎಂದು ಹಿಬ್ರೂ ಕವಿಯೊಬ್ಬ ಈ ಬಗೆಯ ಪ್ರಯತ್ನದಲ್ಲಿ ನಮಗೆದುರಾಗುವ ಮಹಾ ನಿರಾಶೆ ಯಾವ ಸ್ವರೂಪದ್ದು ಎಂಬುದನ್ನು ಘೋಷಿಸಿದ್ದಾನೆ. ಇಂಥ ಕಷ್ಟ ಸಾಧ್ಯವಾದ ಸಾಹಸದಲ್ಲಿ ತೊಡಗಿದ್ದ ಶ್ರೀಯವರಿಗೇ, ಬೇರೆ ಯಾರಿಗಿಂತಲೂ ಚೆನ್ನಾಗಿ, ತಮ್ಮ ಅನುವಾದಗಳ ಸೋಲು ಗೆಲುವಿನ ವಿಚಾರ ಗೊತ್ತಿದ್ದಿತು. ಪು. ತಿ. ನ. ಅವರಿಗೆ ತೀ. ನಂ. ಶ್ರೀಯವರು "ಇಂಗ್ಲಿಷ್ ಗೀತಗಳ" ವಾಚನಕೂಟದ

ಸ್ವಾರಸ್ಯವನ್ನು ಬಣ್ಣಿಸಿ ಬರೆದಿದ್ದ ಪತ್ರದ ಭಾಗ ಈ ದೃಷ್ಟಿಯಿಂದ ಉಲ್ಲೇಖಾರ್ಹವಾಗಿದೆ ; 'ನಿನ್ನೊಳೆನಗೊಲವಿಲ್ಲ'—ಈ ಕವನವು ಬಲು ಚಲುವಾಗಿದೆಯೆಂದು ನನ್ನೊಡನೆ ನೀವು ಹೇಳಿದ್ದಿರಿ. ಮೂಲವು ಚೆನ್ನಾಗಿದೆ ; ಆದರೆ ಪರಿವರ್ತನವು ನನಗೊಪ್ಪಲಿಲ್ಲ. ನೀರಸವಾಗಿ (prosaic) ಕಂಡಿತು. ಇದೇ ನನ್ನ ಮನಸ್ಸಿನಲ್ಲಿ ಕೊರೆಯುತ್ತಿತ್ತು. ಶ್ರೀಕಂಠಯ್ಯನವರೇ This may sound prosaic in some places' ಎಂದು ಹೇಳಿದ ಮೇಲೆ ಧೈರ್ಯವಾಯಿತು. ಆದರೆ 'But we are experimenting' ಎಂದು ಹೇಳಿ ತಮ್ಮ ಮಾರ್ಗವನ್ನು ಸಮರ್ಥನೆ ಮಾಡಿಬಿಟ್ಟರು. "ಅಂತೆಯೇ, ವರ್ಡ್ಸ್‌ವರ್ತ್ ಕವಿಯ 'Written in March' ಎಂಬ ಕವನದ—

" The Cattle are Grazing,
Their heads never raising,
There are forty feeding like one!"

—ಎಂಬ ಚರಣಗಳು ಕನ್ನಡ ಅನುವಾದದಲ್ಲಿ :

"ಕೊರಳೆತ್ತಿ ಮೈಮರೆತು
ಪರಡಿದೆಳಹಸುರಾದ
ಗರಿಕೆಯನು ಮೇಯದೆಯೆ ಮಂದೆ ಇಹುದು."

ಎಂದು ಭಾಷಾಂತರ ಹೊಂದಿವೆ. ಈ ಚರಣಗಳು ಅಂದವಾಗಿದ್ದರೂ ಇವು 'False to Wordsworth' ಎಂದು ಶ್ರೀಯವರೇ ಟೀಕಿಸಿದ್ದುಂಟು ಎಂದು ತೀ. ನಂ. ಶ್ರೀ ಉಲ್ಲೇಖಿಸಿದ್ದಾರೆ. ಶ್ರೀಯವರ ಅನುವಾದ ವಿಧಾನದ ಬಗೆಗೂ ತೀ. ನಂ. ಶ್ರೀ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "ಇಂಗ್ಲಿಷಿನಿಂದ ಅನುವಾದ ಮಾಡುವುದರಲ್ಲಿ 'ಶ್ರೀ'ಯವರು ಬಲುಮಟ್ಟಿಗೆ ಕಟ್ಟುನಿಟ್ಟಿನ ಮಾರ್ಗವನ್ನೇ ಅನುಸರಿಸಿದರು. ಅಕ್ಷರಶಃ ಭಾಷಾಂತರ ಮಾಡದೆ ಮೂಲದ ಭಾವ ವೈಖರಿಯನ್ನು ಸಜೀವವಾಗಿ ಆದರೆ ಯಥಾವತ್ತಾಗಿ ಕನ್ನಡದಲ್ಲಿ ತರಲು ಸರ್ವಪ್ರಯತ್ನವನ್ನೂ ಮಾಡಿದರು ; ಈ ಕಾರ್ಯದಲ್ಲಿ ಹೆಚ್ಚಿನ ಯಶಸ್ಸನ್ನು ಪಡೆದರು. ಮೂಲದ ಹೆಸರುಗಳನ್ನೂ ಸಂದರ್ಭಗಳನ್ನೂ ಉಕ್ತಿಗಳನ್ನೂ ನಮ್ಮ ಆವರಣಕ್ಕೆ ಹೊಂದಿಕೊಳ್ಳುವಂತೆ ಅಲ್ಲಲ್ಲಿ ಮಾರ್ಪಡಿಸಿರುವುದುಂಟು ; ಆದರೂ ಮೂಲದ ತಿರುಳಿಗೆ ದ್ರೋಹವಾಗದಂತೆ ಎಚ್ಚರಿಕೆ ವಹಿಸಿದ್ದಾರೆ. ಈ ಮಾತುಗಳು 'ಶ್ರೀ'ಯವರ ಅನುವಾದಗಳನ್ನು ಮೂರು ಬಗೆಯಾಗಿ ವಿಂಗಡಿಸಿಕೊಳ್ಳಬಹುದೆಂಬುದನ್ನು ಸೂಚಿಸುತ್ತವೆ : (i) ಪ್ರಯೋಗಗಳು, (ii) ರೂಪಾಂತರಗಳು ; ಮತ್ತು (iii) ಸೃಜನಾತ್ಮಕ ಅನುವಾದಗಳು ಅಥವಾ ಪುನಸ್ಸೃಷ್ಟಿಗಳು. ಇವುಗಳನ್ನು ಸ್ವಲ್ಪ ವಿವರವಾಗಿ ಪರಿಶೀಲಿಸಬಹುದು.

**ಪ್ರಯೋಗಗಳು :**

ಕಟ್ಟು ನಿಟ್ಟಾದ ಅನುವಾದ ವಿಧಾನವನ್ನು ಆಶ್ರಯಿಸಿ ಮೂಲವನ್ನು ಕನ್ನಡಿಸು ವಾಗಲೂ 'ಶ್ರೀ'ಯವರು ಕನ್ನಡದ ಜಾಯಮಾನದ ಬಗ್ಗೆ ವಿಶೇಷ ಗಮನವಿರಿಸಿದ್ದರು ಎಂಬುದಕ್ಕೆ ಸಾಕ್ಷಿಯಾಗಿ ಷೇಕ್ಸ್‌ಪಿಯರನ 'Under the Green wood Tree'ಯ ಅನುವಾದವನ್ನು ಪರಿಶೀಲಿಸಬಹುದು. ಇದರಲ್ಲಿ Green wood–'ಅಡವಿ ಮರ' 'ವಾಗಿ Winter–'ಕೊರೆವ ಚಳಿ'ಯಾಗಿ rough weather–'ಬಿರುಗಾಳಿ'ಯಾಗಿ Ambition–'ಆಸೆಬಲೆ'ಯಾಗಿ, to live in the sun–'ಬಿಸಿಲಕಾಯುತ ಮಲಗು' ವುದಾಗಿ ಕಾಣಿಸಿಕೊಂಡು, ಶ್ರೀಯವರು ಮೂಲದ ತಿರುಳನ್ನು ಗ್ರಹಿಸಲು ಹೇಗೆ ಶ್ರಮಿಸಿದ್ದಾರೆಂಬುದನ್ನು ಸ್ಪಷ್ಟಪಡಿಸುತ್ತವೆ. ಬಿಡಿ ಬಿಡಿಯಾದ ಈ ಬಗೆಯ ಮಾತು ಗಳ ವಿಷಯದಲ್ಲಿ ಮಾತ್ರವಲ್ಲ, ಇಡಿಯಾದ ಭಾವಗಳ ವಿಷಯದಲ್ಲಿಯೂ ಭಾವದ ಬೆಸುಗೆ ಕನ್ನಡದಲ್ಲಿ ಧೃಡವಾಗಿ ಉಳಿಯುವಂತೆ ನೋಡಿಕೊಂಡಿದ್ದಾರೆ. ಹೀಗಾಗಿ,

"And turn his merry note
Unto the sweet birds throat–"
ಎಂಬುದು–"ಇನಿಯ ಹಕ್ಕಿಯ ಕೊರಲ
ತನ್ನ ಕೊರಲಲಿ ತಂದು ನಲಿವನಾರೈ" ಎಂದೂ,

"Seeking the food he eats
And pleased with what he gets–"

ಎಂಬುದು—

"ಉಣ್ಣುವೂಟವ ಕಂಡು
ತಣ್ಣನೆಯೆ ತಣಿದುಂಡು ನಲಿವನಾರೈ" ಎಂದೂ

"Here shall he see
No enemy
But winter and rough weather" ಎಂಬುದು
"ಎತ್ತ ನೋಡಿಲ್ಲಲ್ಲ,
ಮತ್ತೆ ಹಗೆಯೊಂದಿಲ್ಲ,
ಕೊರೆವ ಚಳಿ ಬಿರುಗಾಳಿಯಲ್ಲದಿಲ್ಲೈ." ಎಂದೂ

ಕನ್ನಡದಲ್ಲಿ ಅವತರಿಸಿದಾಗ, ಈ ಭಾವಗಳು ಸಹಜವಾಗಿ ಮೂಡಿರುವ ಅನುಭವ ನಮಗೆ ಉಂಟಾಗುತ್ತದೆ. ಕನ್ನಡ ಪದಗಳನ್ನು ಎಷ್ಟು ಜೀವಂತರೂಪದಲ್ಲಿ ಅಳವಡಿಸಿ ಕೊಳ್ಳಬಹುದು ಎಂಬುದಕ್ಕೂ ಅವರ ಈ ಪ್ರಯೋಗ ಸಾಕ್ಷಿಯಾಗಿದೆ. ಅನುವಾದಕರು ತುಂಬ ಸುಲಭವಾಗಿ ಬಲಿಬೀಳುವ ಒಂದು ವ್ಯಾಮೋಹವೆಂದರೆ ಅಗತ್ಯವಿಲ್ಲದಿರು ವಾಗಲೂ ಸಂಸ್ಕೃತ ಶಬ್ದಗಳನ್ನು ತಂದುಂ ತುಂಬುವುದು. ಇದು ಆರೋಗ್ಯಕರವಾದ ಪ್ರವೃತ್ತಿಯಲ್ಲವೆಂಬುದನ್ನೂ ಅವರು ಸ್ಥಾಪಿಸಿದ್ದಾರೆ. 'sky,' 'rainbow,' 'old,'

'child'–ಇಂಥ ಶಬ್ದಗಳು ಬಂದಾಗ ಆಕಾಶ–ಗಗನ ; ಕಾಮನ ಬಿಲ್ಲು–ಇಂದ್ರಚಾಪ, ವೃದ್ಧಾಪ್ಯ ಶಿಶು–ಇವೇ ಮೊದಲಾದ ಪರಿಚಿತವೂ, ಸುಲಭವಾಗಿ ಶರಣಾಗಬಹುದಾದವೂ ಆ ಶಬ್ದಗಳನ್ನು ಬದಿಗಿರಿಸಿ, 'ಮುಗಿಲು,' 'ಮಳೆಬಿಲ್ಲು,' 'ಮುಪ್ಪು,' 'ಮಗು' ಇಂಥ ಶಬ್ದಗಳನ್ನು ಬಳಸಿ ಅನುವಾದದಲ್ಲಿ ಜೀವಂತಿಕೆಯನ್ನೂ ಲವಲವಿಕೆಯನ್ನೂ ಹೇಗೆ ಮೈಗೂಡಿಸಿಕೊಳ್ಳಬಹುದೆಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ. ಈ ಮಾತು ಶಬ್ದಗಳಿಗೆ ಮಾತ್ರ ಸೀಮಿತವಾಗಬೇಕಾಗಿಲ್ಲ, 'When my life began' (when) 'I am a man,' 'When I shall grow old' ನಂಥ ಪದಪುಂಜಗಳನ್ನು 'ನನ್ನ ಜೀವನ ಆರಂಭವಾದಾಗ,' 'ನಾನು ಪುರುಷನಾದಾಗ,' 'ನಾನು ಮುದುಕನಾದಾಗ' ಎಂದು ಮೊದಲಾಗಿ ಅನುವಾದಿಸಿಕೊಳ್ಳದೆ 'ಚಿಕ್ಕಂದಿನಂದು,' 'ಯೌವನದಲಿಂದು' 'ಮುಪ್ಪಿನಲಿ ಮುಂದೆ' ಎಂದು ಸಾರ್ಥಕರೂಪದಲ್ಲಿ ಅಳವಡಿಸಿಕೊಂಡು ಭಾಷೆಯ ಸಾಧ್ಯತೆಗಳನ್ನು ಹೇಗೆ ಅರ್ಥಪೂರ್ಣ ರೀತಿಯಲ್ಲಿ ಬಳಸಿಕೊಳ್ಳಬಹುದೆಂಬುದನ್ನೂ ಸಾರಿದ್ದಾರೆ. ಇದರಿಂದ ಅನುವಾದಕ್ಕೆ ಸಹಜತೆ–ಬಿಗಿ ಹೇಗೆ ಬರುತ್ತದೆಂಬುದನ್ನು ಓದುಗರೇ ಅನುಭವಿಸುವಂತಾಗುತ್ತದೆ. ಹೀಗಾಗಿ, ವರ್ಡ್ಸ್‌ವರ್ತನ 'Rainbow' ಕವನದ

> "My heart leaps up when I behold
> A rainbow in the sky ;"

ಎಂಬ ಪಂಕ್ತಿಗಳನ್ನು ಓದಿದಾಗ ಮೂಲದಲ್ಲಿ ನಮಗೆ ದೊರೆಯುವ ಅನುಭವವೇ

> "ಮುಗಿಲಿನಲಿ ಮಳೆಬಿಲ್ಲ ಕಾಣುತಲೆ ನಾನು
> ನೆಗೆದು ಕುಣಿದಾಡುವುದು ಹೃದಯ ತಾನು !"

ಎಂಬ ಪಂಕ್ತಿಗಳನ್ನು ಓದಿದಾಗ ಮರುಕೊಳಿಸಿದಂತಾಗುತ್ತದೆ.

"ಇಡೀ ಕವನವೇ ಅನುವಾದಕಲೆಯ ಪರಿಣತಿಯ ಫಲ" ಎಂದು ಡಾ|| ಪ್ರಭುಶಂಕರ ಅವರು ಮೆಚ್ಚಿಕೊಂಡಿರುವ 'ವಸಂತ' ಎಂಬ ಗೀತ ಶ್ರೀಯವರ ಅನುವಾದ ವಿಧಾನದ ಇನ್ನೊಂದು ಮುಖವನ್ನು ನಮಗೆ ತೆರೆದುತೋರುತ್ತದೆ. ಯಾವುದನ್ನು ಹೇಗೆ ಅನುವಾದಿಸಬೇಕು, ಯಾವುದನ್ನೂ ಬಾರದು ಎಂಬುದನ್ನೂ ಅವರು ಸೂಕ್ಷ್ಮವಾಗಿ ಇಲ್ಲಿ ಸೂಚಿಸಿದ್ದಾರೆ. ನ್ಯಾಷ್‌ಕವಿಯ 'pri ng' ಎಂಬ ಆ ಕವನ ಹೀಗಿದೆ :

> Spring, the sweet Spring, is the year's Pleasant King
> Then blossoms each thing, then maids dance in a ring;
> Cold doth not sting, the pretty birds do sing,
> Cuckoo, jug-jug, pu-we, to-witta-woo!

The Palm and may make country houses gay,
Lambs frisk and play, the shepherds pipe all day.
And we hear aye birds tune this merry day.
Cuckoo, jug-jug, pu-we, to-witta-woo!

The fields breathe sweet, the daisies kiss our feet,
Young lovers meet, old wives a-sunning sit,
In every street these tunes our ears do greet,
Cuckoo, jug-jug, pu-we, to-witta-woo!
Spring! the sweet Spring!

ಅದರ ಕನ್ನಡ ಅನುವಾದ ಹೀಗೆ ಮೂಡಿಬಂದಿದೆ :

ವಸಂತ ಬಂದ, ಋತುಗಳ ರಾಜ ತಾ ಬಂದ,
ಚಿಗುರನು ತಂದ, ಹೆಣ್ಗಳ ಕುಣಿಸುತ ನಿಂದ,
ಚಳಿಯನು ಕೊಂದ, ಹಕ್ಕಿಗಳುಲಿಗಳೆ ಚೆಂದ,
ಕೂವೂ, ಜಗ್‌ಜಗ್, ಪುವ್ವೀ, ಟೂವಿಟ್ಟವೂ!

ಕುರಿನೆಗೆದಾಟ, ಕುರುಬರ ಕೊಳಲಿನೂದಾಟ
ಇನಿಯರ ಬೇಟ, ಬನದಲಿ ಬೆಳದಿಂಗಳೂಟ,
ಹೊಸ ಹೊಸ ನೋಟ, ಹಕ್ಕಿಗೆ ನಲಿವಿನ ಪಾಟ,
ಕೂವೂ, ಜಗ್‌ಜಗ್, ಪುವ್ವೀ, ಟೂವಿಟ್ಟವೂ!

ಮಾವಿನ ಸೊಂಪು, ಮಲ್ಲಿಗೆ ಬಯಲೆಲ್ಲ ಕಂಪು,
ಗಾಳಿಯು ತಂಪು, ಜನಗಳ ಜಾತ್ರೆಯ ಗುಂಪು,
ಕಿವಿಗಳಿಗಿಂಪು ಹಕ್ಕಿಗಳುಲುಹಿನ ಪೆಂಪು,
ಕೂವೂ, ಜಗ್‌ಜಗ್, ಪುವ್ವೀ, ಟೂವಿಟ್ಟವೂ!
ಬಂದ ವಸಂತ–ನಮ್ಮಾ ರಾಜ ವಸಂತ!

ಮೂಲದಲ್ಲಿನ ವಸಂತದಲ್ಲಿ ಆಗುವ ಋತುಪರಿವರ್ತನೆಯ ಚಿತ್ರಕ್ಕೆ ಬದಲಾಗಿ, ಪ್ರಕೃತಿಯಲ್ಲಿ ವಸಂತ ಎಸಗುವ ಪವಾಡಗಳ ಚಿತ್ರ ಅನುವಾದದಲ್ಲಿ ನಮಗೆ ಎದುರಾಗುತ್ತದೆ. ಅಲ್ಲಿ ಹಿನ್ನೆಲೆಯಲ್ಲಿ ನಿಲ್ಲುವ ಪ್ರಕೃತಿಯ ಶಕ್ತಿ ಇಲ್ಲಿ ಚೇತನಾರೋಪಿತವಾದ ವ್ಯಕ್ತಿಯಾಗಿ, ಮಾಂತ್ರಿಕನಾಗಿ ಮಾಡುತ್ತದೆ. ಹೀಗಾಗಿ, ಆ ಋತುವಿನಲ್ಲಿ ಕಾಣುವ ಒಂದೊಂದು ಪರಿವರ್ತನೆಯೂ ಇಲ್ಲಿ ವಸಂತ ಎಸಗುವ 'ಜಾದೂ' ಆಗಿ, ಸಾಹಸವಾಗಿ ಕಾಣಿಸಿಕೊಳ್ಳುತ್ತದೆ. ಇಷ್ಟಾಗಿಯೂ ಮೂಲದ ಭಾವದ ದಾಟಿಗೆ ಇದು ವಿರುದ್ಧವಾಗಿಯೇನೂ ನಿಲ್ಲುವುದಿಲ್ಲ. ಜೊತೆಗೆ ಭಾರತೀಯಕರಣಕ್ಕೂ ಇಲ್ಲಿ ಎಡೆಮಾಡಿಕೊಂಡಿದ್ದಾರೆ–'ಮಾವಿನ ಸೊಂಪನ್ನೂ,' ಮಲ್ಲಿಗೆ ಬಯಲಿನ ಕಂಪನ್ನೂ ತರುವುದರ ಮೂಲಕ_ಮೂಲದ 'fields' ಮತ್ತು 'daisies'ಗೆ ಬದಲಾಗಿ.

ಪ್ರತಿ ಪದ್ಯದ ಕೊನೆಯಲ್ಲಿ ಬರುವ 'Cuckoo jug-jug, pu-we, to-witta-wool' ಎಂಬ ಮಾತಿನಲ್ಲಿ 'Cuckoo' ಎಂಬುದನ್ನು ಮಾತ್ರ 'ಕೂವೂ' ಎಂದು ಬದಲಾಯಿಸಿ, ಉಳಿದುದನ್ನು ಹಾಗೆಯೇ ಉಳಿಸಿಕೊಂಡು ಔಚಿತ್ಯ ಪ್ರಜ್ಞೆಯನ್ನೂ ಮೆರೆದಿದ್ದಾರೆ. 'ಕಕ್ಕೂ'ಗೆ ಬದಲಾಗಿ ಯಾಂತ್ರಿಕವಾಗಿ 'ಕೋಗಿಲೆ' ಎಂದು ಹಾಕಿಲ್ಲ ; ಆದರೂ 'ಕೂವೂ' ಎಂಬ ಅದರ ಸದ್ದಿನ ಮೂಲಕ ಅದನ್ನು ಅಲ್ಲಿ ಜೀವಂತವಾಗಿಸಿದ್ದಾರೆ.

ಎರಡನೆಯ ಪದ್ಯದಲ್ಲಿ 'The palm and may make country houses gay' ಎಂಬುದನ್ನು ಕೈಬಿಟ್ಟು, ಮೂಲದ ಮೂರನೆಯ ಪದ್ಯದ ಎರಡನೆಯ ಪಂಕ್ತಿಯ ''young lovers meet'' ಎಂಬ ತುಣಕನ್ನು ಇಲ್ಲಿಗೆ ವರ್ಗಾಯಿಸಿಕೊಂಡಿದ್ದಾರೆ. ಇಂಥ ಪ್ರಭಾವಶಾಲಿಯೂ, ಔಚಿತ್ಯಪೂರ್ಣವೂ ಆದ ಪಾದಗಳ ಸ್ಥಳಾಂತರದ ಸೊಗಸು-ಸ್ವಾರಸ್ಯಗಳನ್ನು ನಾವು ಮತ್ತೆ ಕಾಣುವುದು ಕಾಳಿದಾಸನ 'ಮೇಘದೂತ'ದ ಬೇಂದ್ರೆಯವರ ಅನುವಾದದಲ್ಲಿಯೇ. ''Old-wives a-sunning sit'' ಎಂಬುದು ಬಿಸಿಲನ್ನು ಅಪರೂಪವಾಗಿ ಕಾಣುವ ದೇಶಕ್ಕೆ ಒಗ್ಗುವ ಚಿತ್ರವಾದ್ದರಿಂದ, ಬಿಸಿಲಿನ ಸಮೃದ್ಧಿಯಿಂದ ಬೇಸತ್ತ ಭಾರತೀಯರಿಗೆ ಹಿತವಾಗುವಂಥ 'ಬನದಲಿ ಬೆಳದಿಂಗಳೂಟ'ದ ಕಲ್ಪನೆಯನ್ನು ಅದರ ಜಾಗದಲ್ಲಿ ಹಾಕುವ ಜಾಣ್ಮೆಯನ್ನು ತೋರಿದ್ದಾರೆ. "ಮಲ್ಲಿಗೆಯ ಬಯಲೆಲ್ಲ ಕಂಪು" ಎಂಬುದು ಡಾ|| ಪ್ರಭುಶಂಕರ ಅವರೆಂದಿರುವಂತೆ, "ಮೂಲದ ಒಂದು ಸೂಚನೆಯನ್ನು ಗ್ರಹಿಸಿ ವಿಸ್ತೃತವಾದದ್ದು." ಅಂತೆಯೇ ಆಂತರಿಕ ಲಯ ಹಾಗೂ ಅಂತ್ಯಪ್ರಾಸದ ಕಾರಣಗಳಿಗಾಗಿ ''In every street these tunes our ears do greet'' ಎಂಬ ಪಂಕ್ತಿಗೆ ಬದಲಾಗಿ "ಜನಗಳ ಜಾತ್ರೆಯ ಗುಂಪು" ಹಾಗೂ "ಕಿವಿಗಳಿಗಿಂಪು ಹಕ್ಕಿಗಳುಲುಹಿನ ಪೆಂಪು" ಎಂಬ ಹೆಚ್ಚಿನ ಮಾತುಗಳು ಹಾಗೂ ಸೂಕ್ಷ್ಮವಾದ ಬದಲಾವಣೆಗಳೂ ಎಡೆದೊರಕಿಸಿಕೊಳ್ಳುತ್ತವೆ.

ಈ ಬಗೆಯ ಬದಲಾವಣೆಗಳು ಮತ್ತಷ್ಟು ತೀವ್ರವಾಗಿ ಪರಿಣಮಿಸಿದಾಗ ಪ್ರಶ್ನಾರ್ಹವೂ ಆಗಬಹುದು. ಉದಾಹರಣೆಗೆ, 'ಬಾನಾಡಿ'ಯನ್ನು ತೆಗೆದುಕೊಳ್ಳಬಹುದು. "ಭಾವಗೀತಾ ಸಾಹಿತ್ಯದಲ್ಲಿ ಅತ್ಯುನ್ನತ ಶ್ರೇಣಿಯ ಕವನವೆಂದು ಹೆಸರಿಸಬಹುದಾದುದು ಷೆಲ್ಲಿಯ ಈ ಕೃತಿ" ಎಂದು ವಿಮರ್ಶಕರು ಭಾವಿಸಿರುವ 'Skylark' ಕವನದ ಮೊದಲ ಪದ್ಯದ ಸಾಲುಗಳು ಹೀಗಿವೆ :

''Hail to thee blithe spirit !
Bird thou never wert,
That from heaven, or near it
Pourest thy full heart
In profuse strains of unpremeditated art.''



ಇದನ್ನು ಶ್ರೀಯವರು ಹೀಗೆ ಅನುವಾದಿಸಿದ್ದಾರೆ :

"ಆರು ನೀನೆಲೆ ಹರುಷ ಮೂರುತಿ ?
ಹಕ್ಕಿಯೆಂಬರೆ ನಿನ್ನನು !
ತೋರಿ ದಿವಿಜರು ಸುಳಿವ ಬಳಿ, ಸುಖ
ವುಕ್ಕಿ ಬಹ ನಿನ್ನೆದೆಯನು
ಹಾರಿ ನೆನೆಯದ ಕಲೆಯ ಕುಶಲದ ಭೂರಿಗಾನದೊಳಿರೆಯುವೆ."

ಇಲ್ಲಿ 'blithe spirit' – ಹರುಷಮೂರುತಿಯಾಗಿರುವುದಕ್ಕಾಗಲೀ, 'heaven or near it' ಎಂಬುದು ಕೇವಲ 'ದಿವಿಜರು ಸುಳಿವ ಬಳಿ'ಯಾಗಿರುವುದಕ್ಕಾಗಲೀ ನಾವು ಆಕ್ಷೇಪಿಸದೇ ಇದ್ದರೂ, ''Hail to thee blithe Spirit !'' ಎಂಬಲ್ಲಿನ ಆಶ್ಚರ್ಯಸೂಚಕ ಚಿಹ್ನೆ "ಆರು ನೀನೆಲೆ ಹರುಷಮೂರುತಿ ?" ಎಂದು ಪ್ರಶ್ನಾರ್ಥಕ ಚಿಹ್ನೆಯಾಗಿ ಮಾರ್ಪಟ್ಟಿರುವುದು ತುಂಬ ಅತೃಪ್ತಿಯನ್ನುಂಟುಮಾಡುತ್ತದೆ. ಬಾಗಿಲು ತಟ್ಟಿದ ಬಂಧುವನ್ನೋ ಗೆಳೆಯನನ್ನೋ "ಹಾ! ನೀವಾ, ಬನ್ನಿ, ಬನ್ನಿ !" ಎಂದು ಆಶ್ಚರ್ಯ-ಸಂತೋಷಗಳೊಡನೆ ಸ್ವಾಗತಿಸುವುದಕ್ಕೆ ಬದಲಾಗಿ "ಯಾರು ನೀವು ? ಯಾರು ಬೇಕು ?" ಎಂದು ಕೇಳಿದಾಗ ಬಂದ ಆಗಂತುಕನ ಮನಸ್ಸಿನಲ್ಲಾಗಲೀ, ಮನೆಯೊಡೆಯನಲ್ಲಾಗಲೀ ಇರುವಂಥ ಅಸಂತೃಪ್ತ ಹಾಗೂ ಅಸಂಪೃಕ್ತ ಭಾವನೆಯೇ ಇಲ್ಲಿಯೂ ಉಂಟಾಗುತ್ತದೆ. ಎರಡನೆಯ ಪಂಕ್ತಿಯಂತೂ ಇನ್ನೂ ಅಸಮಾಧಾನವನ್ನು ಉಂಟುಮಾಡುತ್ತದೆ. 'Bird thou never wert !' ಎಂಬುದರಲ್ಲಿನ ಖಚಿತ ನಿಷೇಧಾತ್ಮಕ ಭಾವ ಅನುವಾದದಲ್ಲಿ ಮರೆಯಾಗಿ, "ಹಕ್ಕಿಯೆಂಬರೆ ನಿನ್ನನು !" ಎಂಬಲ್ಲಿನ ಆಶ್ಚರ್ಯಸೂಚಕ ಭಾವವೂ ಅಸಮರ್ಥಿತವಾಗಿ ಬಿಡುವಂಥ ಸನ್ನಿವೇಶ ಒದಗುತ್ತದೆ.

"ಸೊಗೆಯಿಸ್ಸೆ ಸುಖಜೀವಿ !
ನೆಗೆವಕ್ಕಿ ನಿನಲ್ಲ ;
ಗಗನದಿಂದಲೊ ಗಗನದರುಗಿಂದಲೊ
ಮೊಗೆವೆ ತುಂಬೆದೆಯ ಮುಂ
ಬಗೆದಿಲ್ಲದಿಹ ಬಿನ್ನಣಗೆಯುಗುವುದಾರಗಾಯನದ ಝುರಿಯಿಂ"

ಎಂಬ ಗೋವಿಂದಪೈಗಳ ಇವೇ ಪಂಕ್ತಿಗಳ ಅನುವಾದವನ್ನು ನೋಡಿದಾಗ, ಮೂಲದ ಮೊದಲ ಮೂರು ಪಂಕ್ತಿಗಳು ಅನುವಾದದಲ್ಲಿ ಕಾಣಿಸಿಕೊಳ್ಳಬೇಕಾಗಿದ್ದ ರೀತಿ ಯಾವುದೆಂಬುದೂ ಸ್ಪಷ್ಟವಾಗುತ್ತದೆ. 'Pourest thy full heart in profuse strains of un-premeditated art' ಎಂಬ ಕೊನೆಯ ಎರಡು ಪಂಕ್ತಿಗಳೇನೋ ಶ್ರೀಯವರಲ್ಲಿ ಸುಂದರವಾಗಿಯೇ ಕಾಣಿಸಿಕೊಂಡಿವೆ.

ಮುಂದಿನ ಪಂಕ್ತಿಗಳ ಅನುವಾದದಲ್ಲಿಯೂ 'cloud of fire, ('ದಳ್ಳುರಿ') ,unbodied joy' ('ಕಳಚಿ ದೇಹವ ದಿವಕೆ ಹರಿಯುವ ಭೋಗಿಯೋಲಾಟ'), 'Golden lighting of the *sunken sun*' (ಬಿಳಿಯು ಮುಗಿಲನು ಬಣ್ಣವೇರಿಸಿ ಕೆಳಗೆ **ಹೊರಳುವ ಹೊತ್ತಿನ**) ಇವೇ ಮೊದಲಾದವುಗಳನ್ನು ಮೂಲಕ್ಕಿಂತ ಭಿನ್ನವಾದ ಪರಿಪ್ರೇಕ್ಷ್ಯದಲ್ಲಿ ಹಿಡಿದಿರುವುದು, ಬದಲಾದ ಭಾವನೆಗಳನ್ನು ಅಳವಡಿಸಿಕೊಂಡಿರುವುದು ಯಾರಿಗೇ ಆದರೂ ಮೆಚ್ಚಿಗೆಯಾಗುವ ಸಂಭವವಿಲ್ಲ. ಈ ಸಂದರ್ಭಗಳಲ್ಲಿ ಗೋವಿಂದ ಪೈಗಳು ಬಳಸಿರುವ 'ಕೆಂಡದುರಿ ಮೋಡದಂತೆ', 'ನೇಸರು ಮುಳುಂಗಿದಾ ಕಾಂಚನದ ಮಿಂಚಿನಲ್ಲಿ', 'ಅಂಗವಡೆಯದ ಸೊಗ' ಮೊದಲಾದ ಮಾತುಗಳು ಮೂಲಕವಿಯ ಆಶಯಕ್ಕೆ ಎಷ್ಟು ಹತ್ತಿರವಾಗಿವೆ ಎಂಬುದನ್ನು ಗಮನಿಸಿದಾಗಲಂತೂ, ಶ್ರೀಯವರ ಅನುವಾದದ ಅಸಮರ್ಪಕತೆ ಎದ್ದು ಕಾಣುತ್ತದೆ.

ಇಷ್ಟಾಗಿಯೂ, ಮುಂದೆ ಸಾಗುತ್ತ ಬಂದಂತೆ, ಡಾ. ಪ್ರಭುಶಂಕರ ಅವರೆಂದಿರುವಂತೆ, "ಶ್ರೀಯವರ ಅನುವಾದ ಹೆಚ್ಚು ಹೆಚ್ಚು ಮೋಹಕವಾಗುತ್ತ ಹೋಗುತ್ತದೆ." ಹಾಗೂ "ಒಟ್ಟಿನಲ್ಲಿ ಶ್ರೇಷ್ಠ ಕವನವೊಂದನ್ನು ಬಹುಮಟ್ಟಿಗೆ ಸಮರ್ಪಕವಾಗಿ ಅನುವಾದ ಮಾಡಿರುವ ಯಶಸ್ಸಿಗೆ ಭಾಜನರಾಗಿದ್ದಾರೆ ಶ್ರೀಕಂಠಯ್ಯನವರು" ಎಂಬ ಅನಿಸಿಕೆಯೂ ನಮ್ಮದಾಗುತ್ತದೆ.

## (ii) ಅಳವಡಿಕೆ ಅಥವಾ ರೂಪಾಂತರ :

ಭಾರತೀಯ ಪರಿಸರಕ್ಕೆ' ಅನುಗುಣವಾಗಿ ಇಂಗ್ಲಿಷ್ ಗೀತೆಗಳನ್ನು ಅಳವಡಿಸಿಕೊಂಡಿರುವುದರಲ್ಲಿಯಂತೂ ಶ್ರೀಯವರು ಎಣೆಯಿಲ್ಲದ ಸಿದ್ಧಿಯನ್ನೆ ಸಾಧಿಸಿದ್ದಾರೆ. ಪೂರ್ವ-ಪಶ್ಚಿಮಗಳನ್ನೂ ಅವರ ಹೃದಯ ಎಷ್ಟು ಸುಂದರವಾಗಿ ಬೆಸೆಯಬಲ್ಲದು ಎಂಬುದಕ್ಕೆ ಈ ಅಳವಡಿಕೆಗಳು ಸಾಕ್ಷಿಯಾಗಿವೆ. ಹೆಸರುಗಳನ್ನು ಬದಲಾಯಿಸುವುದಷ್ಟರಿಂದಲೇ ಇದನ್ನು ಅವರು ಸಾಧಿಸಿರುವುದುಂಟು. ಉದಾಹರಣೆಗೆ : 'ಪದುಮ', 'ಅಳಿನಿ' ಇತ್ಯಾದಿ. ಆಲೋಚನೆಗಳನ್ನೂ ಭಾವನೆಗಳನ್ನೂ ಅಲ್ಲಿ ಇಲ್ಲಿ ಕೊಂಚ ಮಾರ್ಪಡಿಸಿ, ಅವು ಸ್ವತಃ ಕನ್ನಡದಲ್ಲಿಯೇ ಮೂಡಿ ಬಂದ ರಚನೆಗಳೋ ಎಂಬಂತೆ ಮಾಡಿರುವುದೂ ಉಂಟು. ಉದಾಹರಣೆಗೆ : ರಾಬರ್ಟ್ ಬರ್ನ್ಸ್‌ನ ಡಂಕನ್ ಗ್ರೇಯ ಈ ಪಂಕ್ತಿಗಳನ್ನು ನೋಡಿ :

"Duncan fleech'd, and Duncan pray'd ;
Meg was deaf as Ailsa craig ;
Duncan righ'd baith out and in,
Grat his een baith bleer't and blin'
Spak O' lowpin ower a linn !"

ಇದನ್ನು ಶ್ರೀಯವರು ಹೀಗೆ ರೂಪಾಂತರಿಸಿದ್ದಾರೆ :

ಕಯ್ಯಮುಗಿದ, ಕಾಲಹಿಡಿದ. ಪಪ್ಪ ! ಏನು ಬೇಟವೋ !
ರೊಯ್ಯನೊದೆಯೆ, ಹಲ್ಲ ಕಡಿದ,
ಬೆಚ್ಚಗುಸಿರ ಬಿಟ್ಟ ಪಾದ, ಅತ್ತ "ಕಂಗೆಡುತ್ತ" ಸೀದ,
ಹೊಳೆಯ ಬೀಳಲೆಂದು ಹೋದ ! ಪಪ್ಪ ! ಏನು ಬೇಟವೊ !

ಇಂಥ ಸಂದರ್ಭಗಳಲ್ಲಿ ಹೀಗೆ ಸ್ವಲ್ಪ ಸ್ವಾತಂತ್ರ್ಯವಹಿಸಿ, ಶ್ರೀಯವರು ವಿದೇಶೀಯತೆಯ, ಅಪರಿಚಿತತ್ವದ ಕವಚವನ್ನು ಕಳಚಿಹಾಕುತ್ತಾರೆ : ಮುಸುಕನ್ನು ತೆಗೆದುಹಾಕುತ್ತಾರೆ. ಆದರೆ, ಇಷ್ಟು ಸ್ವಾತಂತ್ರ್ಯವಹಿಸದೆಯೂ ಅವರು ಇದನ್ನು ಸಾಧಿಸಬಲ್ಲರೆಂಬುದಕ್ಕೆ, 'ಮುದಿಯ ರಾಮಗೌಡ' ಒಂದು ನಿದರ್ಶನ. ಲೇಡಿ ಲಿಂಡ್ಸೆಯ 'Auld Robin Gray' ಎಂಬ ಈ ಮೂಲಕವನ ತುಂಬ ಪ್ರಖ್ಯಾತವಾದುದು. ಪಾಲ್‌ಗ್ರೇವ್ ಹೀಗೆಂದಿದ್ದಾನೆ : "There can hardly exist a poem more truly tragic in the highest sense than this; nor, perhaps, Sappho excepted, has any poetess equalled it". ದುರಂತಕ್ಕೆ ಕಾರಣವಾದ ಪರಿಸ್ಥಿತಿಯನ್ನು ವರ್ಣಿಸುವ ಈ ಸನ್ನಿವೇಶವನ್ನು ನೋಡಿ :

"My father could na work, and my mother could na spin;
I toil'd day and night, but their bread I could na win;
Auld Rob maintain'd them baith, and wi' tears in his e'e
Said, Jennie, for their sakes, O, marry me!"

ಕನ್ನಡದಲ್ಲಿ ಇದು ಹೇಗೆ ಮೂಡಿದೆ ಎಂಬುದನ್ನು ನೋಡಿ :

"ಅಪ್ಪ ಹೊರಗೆ ಗೆಯ್ಯಲಾರ, ಅವ್ವ ಒಳಗೆ ನೆಯ್ಯಲಾರಳು :
ಹಗಲು ಇರುಳು ನಾನು ದುಡಿದೂ ನಮಗೆ ಹಿಟ್ಟು ಹುಟ್ಟದು.
ರಾಮಗೌಡ ಕಷ್ಟಕಾದ : ಕೈಯ ಹಿಡಿದು ಕಣ್ಣ ನೆನಸಿ,
ಅವರ ಸಲುವಾಗೆನ್ನ, ಚೆನ್ನಿ, ಮದುವೆಯಾಗು, ಎಂದನು."

'ಕನಕಾಂಗಿ'ಯಂತೂ ಭಾರತೀಯ ಪರಿಸರವನ್ನೇ ಮೈಗೂಡಿಸಿಕೊಂಡ ಅದ್ಭುತ ರಚನೆಯಾಗಿ ಮೈವಳಿದಿದೆ. ಶ್ರೀಯವರ ಅಸದೃಶ ರೂಪಾಂತರ ಶಕ್ತಿ ನಮ್ಮನ್ನು ಬೆರಗುಗೊಳಿಸುತ್ತದೆ. 'ಕೋಲ್‌ರಿಜ್‌ನ ಲವ್' ಎಂಬ ಗೀತೆಯ

"All thoughts, all passions, all delights,
Whatever stirs this *mortal frame*
All are but *ministers of Love*
And feed his *sacred flame."*

ಈ ಪಂಕ್ತಿಗಳು ಶ್ರೀಯವರಲ್ಲಿ ಸ್ಪಂದಿಸಿರುವುದು ಹೀಗೆ :

"ಭಾವಗಳು, ರಾಗಗಳು, ಬಗೆಬಗೆಯ ಭೋಗಗಳು
ಅದಾವಲೆಯುವುದು ಮನುಜನೆದೆಯ
ಕಾಮರಾಯಂಗೆಲ್ಲ ಕುಲಪುರೋಹಿತರಾಗಿ
ಹೋಮಾಗ್ನಿಯನ್ನು ಬೀಸಿ ಕೆರಳಿಸುವುವು."

"ಎಂಥ ಸೊಗಸಾದ ಅನುವಾದ ಮೂಡಿದೆ" ಎಂದು ಡಾ. ಪ್ರಭುಶಂಕರ ಅವರೊಡನೆ ನಾವೂ ತಲೆದೂಗಬೇಕಾಗುತ್ತದೆ–(ಮುಂದೆ ತೋರಿಸಿರುವಂತೆ) ಎಲ್ಲೋ ಒಂದೆರಡು ಪಂಕ್ತಿಗಳು ಮೂಲದಿಂದ ಭಿನ್ನವಾಗಿದೆ ಎಂದೆನಿಸಬಹುದು—ಅದೂ ಮೂಲವನ್ನೇ ಎದುರಿಗಿಟ್ಟುಕೊಂಡು ನೋಡಿದಾಗ. ಆದರೆ ಒಟ್ಟಿನಲ್ಲಿ ಇದು ಅನುವಾದದ ಒಂದು ಅಪೂರ್ವ ಸಾಧನೆ ಎಂಬ ಅಭಿಪ್ರಾಯವಂತೂ ಬದಲಾಗಬೇಕಿಲ್ಲ.

### (iii) ಸರ್ಜನಾತ್ಮಕ ಅನುವಾದಗಳು :

ರೂಪಾಂತರ ವಿಧಾನವನ್ನು ಆಶ್ರಯಿಸದೆ, ಶ್ರೀಯವರ ಸರ್ಜನಾತ್ಮಕ ಪ್ರತಿಭೆ ಮೂಲಕ್ಕೆ ಎಲ್ಲ ರೀತಿಯಲ್ಲೂ ಸಂವಾದಿಯಾಗಿರುವಂಥ, ಮೂಲವೇ ಮರುಹುಟ್ಟು ಪಡೆದಿದೆಯೋ ಎನ್ನುವಂಥ ಉತ್ತಮ ಗೀತಗಳನ್ನು ನಮಗೆ ಕೊಟ್ಟಿದ್ದಾರೆ. ಇದಕ್ಕೆ ಅತ್ಯುತ್ತಮ ನಿದರ್ಶನವೆಂದರೆ 'ಪ್ರಾರ್ಥನೆ'. ಇದು Newmanನ 'Lead, Kindly Light' ಎಂಬ ಗೀತೆಯ ಅನುವಾದ. "ಈ ಉತ್ಕೃಷ್ಟ ಗೀತೆಯು ಮೂಲದ ಗಾಂಭೀರ್ಯ, ಆಳವಾದ ಭಕ್ತಿಭಾವ, ಇವುಗಳನ್ನೂ ಧ್ವನಿಯನ್ನೂ ಚೆನ್ನಾಗಿ ಹಿಡಿದಿದೆ" ಎಂದೂ, "ಈ ಕವಿತೆಯಲ್ಲಿ ಅನುವಾದ ಸಿದ್ಧಿಯನ್ನು ಕಾಣಬಹುದು" ಎಂದೂ, "ಇಲ್ಲಿಯ ನಡೆಯೂ ಇಂಗ್ಲಿಷಿನ ಮೂಲದ ಗಂಭೀರ ನಡೆಯಷ್ಟೇ ಗಂಭೀರವಾಗಿದೆ" ಎಂದೂ, "ಛಂದಸ್ಸಿನಲ್ಲಿ ಮೂಲದ ಸಾಮೀಪ್ಯ ಎಷ್ಟು ಬರಬಹುದೋ ಅಷ್ಟೂ ಬಂದಿದೆ" ಎಂದೂ—ಹೀಗೆ ಬಗೆಬಗೆಯಾಗಿ ವಿಮರ್ಶಕರು ಕೊಂಡಾಡುವಂಥ 'ಅಪರಾ ಸೃಷ್ಟಿ'ಯಾಗಿ ಮೂಡಿಬಂದಿದೆ—'ಪ್ರಾರ್ಥನೆ'. ಮೂಲದ ಕೆಲವು ಪಂಕ್ತಿಗಳನ್ನು ಇಲ್ಲಿ ನೆನಪುಮಾಡಿಕೊಡಬಹುದು.

"Lead, Kindly Light, amid the encircling gloom
Lead thou me on!
The night is dark, and I am far from home—
Lead thou me on!
Keep thou my feet; I do not ask to see
The distant scene,—one step enough for me."

ಇದು ಕನ್ನಡದಲ್ಲಿ ಪುನಸ್ಸೃಷ್ಟಿಗೊಂಡಿರುವುದು ಹೀಗೆ :

"ಕರುಣಾಳು, ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ,
ಕೈ ಹಿಡಿದು ನಡೆಸೆನ್ನನು.

ಇರುಳು ಕತ್ತಲೆಯ ಗವಿ ; ಮನೆದೂರ ; ಕನಿಕರಿಸಿ,
ಕೈ ಹಿಡಿದು ನಡೆಸೆನ್ನನು.
ಹೇಳಿ ನನ್ನಡಿಯಿಡಿಸು ; ಬಲುದೂರ ನೋಟವನು
ಕೇಳೆನೊಡನೆಯೆ—ಸಾಕು ನನಗೊಂದು ಹೆಜ್ಜೆ."

ಉತ್ತಮ ಕವಿತೆಯಲ್ಲಿ ಹೇಗೆ ಒಂದು ಶಬ್ದವನ್ನಾಗಲಿ ಕಿತ್ತುಹಾಕುವುದು ಸಾಧ್ಯವಿಲ್ಲವೋ ಹಾಗೆಯೇ ಉತ್ತಮ ಅನುವಾದದಲ್ಲಿಯೂ. ಇಲ್ಲಿ ಒಂದು ಮಾತನ್ನು ಕಿತ್ತುಹಾಕುವುದಿರಲಿ, ಬದಲಾಯಿಸಲೂ ಸಾಧ್ಯವಿಲ್ಲ. ಅಷ್ಟು ಭಾವಸಾಂದ್ರವಾಗಿ, ಧ್ವನಿಪೂರ್ಣವಾಗಿ ಇಡೀ ಗೀತವೆ ಇಲ್ಲಿ ಮರುಹುಟ್ಟು ಪಡೆದಿದೆ ಎಂಬ ಭಾವನೆ ಮೂಡುತ್ತದೆ.

ಶ್ರೀಯವರು ಹೊಸದಾಗಿ ಸೇರಿಸಿರುವ "ನಿರಿಹಿಡಿದು... ಮಗುವಿಲ್ಲವೇನೋ ?" ಎಂಬ ನಾಲ್ಕು ಪಂಕ್ತಿಗಳನ್ನು ಹೊರತು ಪಡಿಸಿದರೆ, ಥಾಮಸ್‌ಹುಡ್‌ನ 'Bridge of Sighs' ನ ಕನ್ನಡ ರೂಪವಾಗಿರುವ 'ದುಃಖ ಸೇತು'ವೂ ಸರ್ಜನಾತ್ಮಕ ಅನುವಾದದ ಉದಾಹರಣೆಯೇ ಆಗುತ್ತದೆ. ಎಸ್. ಅನಂತನಾರಾಯಣ ಅವರೆಂದಿರುವಂತೆ ಈ ಅನುವಾದ ದುರ್ಭರ ದುರಂತವನ್ನು, ಕರುಣೆಯನ್ನು ಇಳಿಯಷ್ಟೂ ಕೊಂಕದಂತೆ ತಂದಿದೆ." ಶ್ರೀಯವರು ಪ್ರಾಸದ ಕಟ್ಟನ್ನು ತೊರೆದಿದ್ದರೂ, ತೀ. ನಂ. ಶ್ರೀ ಅವರೆಂದಿರುವಂತೆ,

"ಏನು ಕೋಮಲ ಕಾಯ !
ಹೊಳಪು ಹೊಸ ಪ್ರಾಯ !" —ಇಂಥ ಕಡೆ ಅಂತ್ಯಪ್ರಾಸವೂ
"ಮೆಲ್ಲಗಿವಳನು ಮುಟ್ಟು,
ಮರುಗಿ ಹಿಡಿದೆತ್ತು—" ಇಂಥ ಕಡೆ 'ವಡಿ'ಯ ಸೊಗಸೂ
"ಊರಮನೆ ಬೆಳಕುಗಳು
ದೂರ ಸರಿಯುತ್ತ
ಕತ್ತಲೆಯ ಹೊಳೆ ಹರಿದು
ಹತ್ತಿರಕೆ ಬರುತ—" ಇಂಥ ಕಡೆ ಆದಿಪ್ರಾಸವೂ

ಮನೋಹರವಾಗಿ, ಅಪ್ರಯಾಸವಾಗಿ ಬರುತ್ತವೆ. ಈ ಕವನದ ಭಾಷೆಯಂತೂ ಬಲು ಲಲಿತವಾಗಿದೆ." ಅದರಲ್ಲಿಯೂ—

''Alas for the rarity
of Christian charity
under the sun'' ಎಂಬ ಸಾಲುಗಳು ಕನ್ನಡದಲ್ಲಿ
"ಅಹ ಎಲ್ಲಡಗಿತೋ ಆರ್ಯಧರ್ಮದ ಕರುಣ
ಆರ್ಯ ಜನಗಳ ಮರುಕ ಉರಿಯುವನೆ ಬಲ್ಲ"

ಎಂಬಂತೆ ಮೈದಳೆದಿರುವುದರಲ್ಲಿ ತೀ. ನಂ. ಶ್ರೀಯವರು 'sun'ಗೆ ಸಂವಾದಿಯಾಗಿ 'ಉರಿಯುವವನು' ಎಂದು ಬಳಸಿರುವುದನ್ನು ಮೆಚ್ಚಿಕೊಂಡಿದ್ದರೆ, ಅನಂತನಾರಾಯಣ

ಅವರು 'ಆರ್ಯ' ಪದದ ಧ್ವನಿಪೂರ್ಣತೆಯನ್ನು ಎತ್ತಿ ತೋರಿಸಿದ್ದಾರೆ. ಒಟ್ಟಿನಲ್ಲಿ 'ರಸಸಿದ್ಧಿ'ಯ ಅನುಭವವನ್ನು ತಂದುಕೊಡುವ ಈ ಕವನ "ಕನ್ನಡ ಸಾಹಿತ್ಯದ ಅತ್ಯುತ್ತಮ ಕವಿತೆಗಳಲ್ಲಿ ಒಂದೆಂದು ಧಾರಾಳವಾಗಿ ಒಪ್ಪಬಹುದು". ಇಂಥ ವಿಕ್ರಮ ವನ್ನೂ ಶ್ರೀಯವರು 'ಇಂಗ್ಲಿಷ್ ಗೀತೆ'ಗಳಲ್ಲಿ ಮೆರೆದಿದ್ದಾರೆ.

ಅನೇಕ ಕವನಗಳ ಅನುವಾದದಲ್ಲಿ ಶ್ರೀಯವರು ಲೋಪ, ವಿಸ್ತಾರ ಹಾಗೂ ಪರಿವರ್ತನೆಗಳಿಗೂ ಎಡೆಗೊಟ್ಟಿದ್ದಾರೆ. ಭಾರತೀಯಕರಣವೆಸಗಿರುವುದು ಅಪೇಕ್ಷಣೀಯ ವಾಗಿದೆ ಎಂದೆನಿಸಿದ ಸಂದರ್ಭಗಳಲ್ಲಿಯೂ, ಈ ಲೋಪ, ವಿಸ್ತಾರ ಹಾಗೂ ಪರಿವರ್ತನಗಳು ನಮ್ಮ ಮನಸ್ಸಿಗೆ ಒಪ್ಪಿಗೆಯಾಗದೆ ಇರುವುದುಂಟು. ಉದಾಹರಣೆಗೆ : ಸ್ಕಾಟ್ ಕವಿಯ 'ಗ್ಯಾದರಿಂಗ್ ಸಾಂಗ್'ನ ಅನುವಾದವಾದ 'ಕಾಳಗದ ಪದ'ದಲ್ಲಿ ''Come in your war array'' ಎಂಬ ಬಹು ಮುಖ್ಯವಾದ ಪಂಕ್ತಿಯೇ ಮಾಯ ವಾಗಿಬಿಟ್ಟಿರುವುದರಿಂದ, ಅದು ಕಾಳಗದ ಸಂದರ್ಭವೆಂಬ ಕಲ್ಪನೆಯೇ ಮೊದಲಿಗೆ ಮೂಡುವುದಿಲ್ಲ. ಅದಕ್ಕೆ ಬದಲಾಗಿ,

"ಕಾಳೆ, ಹರೆ, ಕೊಂಬುಗಳ
ಏಳಿ, ಮೊಳಗಿ, ಏಳಿ,
ನಾಡುಗಳ ಕುಳಗಳನು
ಕೂಡಿಕೊಳ ಹೇಳಿ.

ಬನ್ನಿರಣ್ಣ, ಬನ್ನಿರಣ್ಣ
ಅದೊ ಕೂಗು, ಕೇಳಿ,
ಮನ್ನೆಯರ, ಬಂಟರಿರ,
ಒದಗಿ, ಏಳಿ, ಏಳಿ."

ಎಂಬ ಮಾತುಗಳು ಯಾವುದೋ ಉತ್ಸವದ, ಉತ್ಸಾಹದ, ಆನಂದದ ಸನ್ನಿವೇಶ ವೇನೋ ಎಂಬ ಭ್ರಮೆಯನ್ನೂ ಮೂಡಿಸುತ್ತವೆ–ತಾತ್ಕಾಲಿಕವಾಗಿಯಾದರೂ. ಮೊದಲಿಗೇ ಬರಬೇಕಾಗಿದ್ದ ಈ ಭಾವವನ್ನು ನಾಲ್ಕನೆಯ ಪದ್ಯದಲ್ಲಿ ತಂದು ತೂರಿಸಿ ದಾಗ, ಅದಕ್ಕಾಗಿ ಹೊಸ ಮಾತುಗಳನ್ನು ತಂದು ಸೇರಿಸಬೇಕಾಗುತ್ತದೆ.

ಕೆಲವೊಮ್ಮೆ ಅಗತ್ಯಕ್ಕಿಂತ ಹೆಚ್ಚಾಗಿಯೂ ಶ್ರೀಯವರು ಮೂಲವನ್ನು ಸಂಕ್ಷೇಪಿಸಿ ಬಿಡುತ್ತಾರೆ ಎಂಬ ಭಾವನೆ ನಮ್ಮಲ್ಲಿ ಮೂಡುತ್ತದೆ. ಇದಕ್ಕೆ ನಿದರ್ಶನವಾಗಿ 'ವೀರಗಲ್ಲು' ಗೀತದ ಕೆಲವು ಪಂಕ್ತಿಗಳನ್ನು ಗಮನಿಸಬಹುದು :

''He is gone on the mountain,
He is lost to the forest,
Like a summer-dried fountain,
When our need was the sorest.''

ಇದು, "ಕಾಡಿನೊಳು ನೀನಿಲ್ಲ, ಬೀಡಿನೊಳಗಿಲ್ಲ.
ಬಯಸುವೊಡೆ ಬೇಸಗೆಯ ತೊರೆಯಾದೆಯಲ್ಲ." ಎಂದಾಗಿದೆ.

ಈ 'ಬೀಡು' ಎಲ್ಲಿಂದ ಬಂತು ? ಅವನು ಬೆಟ್ಟದ ಮೇಲೆ ಕಟ್ಟಿಕೊಂಡಿದ್ದ ಮನೆಯೆ ? ಅಥವಾ ಅನುವಾದಕರೇ ಅವನಿಗಾಗಿ ಅಲ್ಲಿ ಕಟ್ಟಿದರೊ ? ಹೋಗಲಿ ; ಬೇಸಗೆಯ ತೊರೆ ಮತ್ತೆ ತುಂಬಿಕೊಳ್ಳಬಹುದು. ಆದರೆ ಆ ವೀರನಿಗೆ ನಾಳೆ ಎಂಬುದೇ ಇಲ್ಲ ಎಂಬ ಮುಂದಿನ ಭಾವವಾದರೂ ಸಂಗತವಾಗಿ ಬಂದಿದೆಯೆ ? ಮೂಲ ಹೇಗಿದೆ, ನೋಡಿ :

''The font reappearing from the rain drops shall borrow,
But to us Comes no Cheering, To Duncan no morrow!''

ಅನುವಾದದಲ್ಲಿ ಮೂಲದ ಈ ವಿಷಾದಭಾವ ಮರೆಯಾಗಿಬಿಡುತ್ತದೆ—"ಮತ್ತೆ ಮಳೆ ಕೊಳ್ಳುತಲೆ ಏನದರ ಮೊಳಗು !" ಎಂಬ ಆಶ್ಚರ್ಯಸೂಚಕ ಪಂಕ್ತಿಯಿಂದಾಗಿ, ಮುಂದಿನ ಪಂಕ್ತಿಗಳಲ್ಲಿ "ಇನ್ನು ಜಯ ನಮಗೆಲ್ಲಿ ? ನಿನಗೆಲ್ಲಿ ಬೆಳಕು ?" ಎಂಬ ಪ್ರಶ್ನಾರ್ಥಕ ವಾಕ್ಯಗಳ ಮೂಲಕ ವೈದೃಶ್ಯಾತ್ಮಕ ಪರಿಣಾಮವನ್ನುಂಟುಮಾಡುವ ಪ್ರಯತ್ನ ಅಷ್ಟಾಗಿ ಯಶಸ್ವಿಯಾಗುವುದಿಲ್ಲ–ಉದ್ದಕ್ಕೂ ಮಿಡಿಯಬೇಕಾಗಿದ್ದ ವಿಷಾದ ಭಾವ ಈ ಬಗೆಯ ಭಾವಪರಿವರ್ತನೆಯ ದೊಂಬರಾಟವನ್ನು ಅಂಗೀಕರಿಸುವುದೇ ಇಲ್ಲವೆಂದೆನಿಸುತ್ತದೆ.

ಅವನ ಸಾಹಸಾತಿಶಯವನ್ನು, ನಿಶ್ಚಿಂತತೆ-ನಿರ್ಲಿಪ್ತತೆಗಳನ್ನು ಸೂಚಿಸುವ

''Red hand in the foray,
*How sound is thy slumber!''*

ಎಂಬ ಮಾತುಗಳು,

ಅವನು ಮರೆಯಾದುದನ್ನು ವರ್ಣಿಸುವ ಕೊನೆಯ ಪದ್ಯದಲ್ಲಿ ಶ್ರೀಯವರು ಉಪಮೆಗಳನ್ನು ಬದಲಾಯಿಸಿರುವುದು, ಹೊಸದನ್ನು ತಂದು ಸೇರಿಸಿರುವುದು ಕಂಡು ಬರುತ್ತದೆ. ಕನ್ನಡಿಗರು ಬೆಟ್ಟದ ಮೇಲೆ ಮಂಜು ಕರಗುವುದನ್ನು, ಚಿಲುಮೆಯಲ್ಲಿ ನೀರಗುಳ್ಳೆ ಒಡೆದುಹೋಗುವುದನ್ನು ಅರ್ಥಮಾಡಿಕೊಳ್ಳಲಾರರೆಂದು ಶ್ರೀಯವರು ಕನಿಕರಿಸಿದರೆ ? ಎಂದು ಪ್ರಶ್ನಿಸಬೇಕಾಗುತ್ತದೆ—

"ಹಗಲೆದಿರ ಮಂಜೆಂತು, ತೆರೆಯ ನೊರೆಯಂತು,
ಮುಗಿಲ ಕುಡಿ ಮಿಂಚೆಂತು, ಮರೆಯಾದೆಯಂತು !"

ಎಂಬುದು ಮೂಲದ ಈ ಪಂಕ್ತಿಗಳ ಅನುವಾದವಾಗಿರುವುದನ್ನು ಗಮನಿಸಿದಾಗ :

Like the dew *on the mountain*
Like the foam on the river,
Like the bubble *on the fountain,*
Thou art gone ; and for ever !

"ಬೇಟೆಯಲಿ ಬರಸಿಡಿಲು, ಆಟದಲಿ ನವಿಲು."

ಎಂದು ಅನುವಾದಗೊಂಡಿರುವುದನ್ನು ನೋಡಿದಾಗ ಆಶ್ಚರ್ಯವಾಗುತ್ತದೆ; ವಿಷಾದವೂ ಉಂಟಾಗುತ್ತದೆ.

ಅಂತೆಯೇ, ಸರ್ ಜಾನ್ ಮೂರನ್ನು ಹೂಳಿದ್ದು, ಗೀತದ ''No *useless* coffin enclosed his breast'' ಎಂಬ ಪಂಕ್ತಿಯಲ್ಲಿ ಶವದ ಪೆಟ್ಟಿಗೆಯ ನಿರರ್ಥಕತೆ ನಮ್ಮ ಮನಮುಟ್ಟುತ್ತದೆ. ಆದರೆ "ಒಡಲ ಪೇಳಿಗೆಯಲಿ ಒಪ್ಪಮಾಡಲು ಇಲ್ಲ" ಎಂಬ ಅನುವಾದವನ್ನು ನೋಡಿದಾಗ, ಆ ವೀರನ ಅಂತಿಮ ಸಂಸ್ಕಾರದಲ್ಲಿ ಈ ಒಂದು ಕೊರತೆ ಉಳಿಯಿತೇನೋ ಎಂಬ ಭಾವನೆ ಅನಿವಾರ್ಯವಾಗಿ ಮೂಡುತ್ತದೆ. ಈ ಗೀತ ಉಳಿದಂತೆ ಯಶಸ್ವಿಯಾಗಿದ್ದರೂ, ಈ ಒಂದು ಕೊರತೆ ಇದರಲ್ಲಿ ಉಳಿದುಹೋಗಿದೆ.

'ರಾಯಲ್ ಜಾರ್ಜ್ ಮುಳುಗಿ ಹೋದದ್ದು'–ಇನ್ನೊಂದು ತುಂಬ ಪ್ರಸಿದ್ಧವಾದ ಕವಿತೆ. ಇದರ ಬಗ್ಗೆ ಬರೆಯುತ್ತಾ ಪಾಲ್‌ಗ್ರೇವ್ ಹೀಗೆ ಹೇಳಿದ್ದಾನೆ: ''This little poem might be called one of our trial pieces, in regard to taste!'' ಇದರ ಅನುವಾದದಲ್ಲಿಯೂ ಅಷ್ಟೆ: ಮೂಲದ ಪ್ರಭಾವಶಾಲಿ ಆರಂಭ ಕಾಣೆಯಾಗಿ, ಅದರ ವಿಷಾದಭಾವ ಮಾತ್ರ ಉಳಿದುಕೊಂಡಿದೆ.

''Toll for the Brave!
The brave that are no more!
All sunk beneath the wave
Fast by their native shore!'' ಎಂಬುದು

"ಅಳಿದರೇ ಹಾ ಧೀರರು! ಕಳೆದುಹೋದರೆ ಧೀರರು!
ತಮ್ಮ ನಾಡಿನ ಕರೆಯೊಳೆಲ್ಲರು ಮುಳುಗಿ ಹೋದರು ತೆರೆಯೊಳು."

ಎಂದು ಮಾತ್ರವಾಗಿ ಕಾಣಿಸಿಕೊಂಡಿರುವುದರಿಂದ. ಅಂತೆಯೇ ''*Brave* Kempenfelt is gone'' ಮತ್ತು ''But Kempenfelt is gone'' – ಇವೆರಡೂ "ಹೋದ ಕೆಂಪೆನ್‌ಫೆಲ್ಟನು!" ಎಂದು ಮಾತ್ರವಾಗಿ ಅನುವಾದಗೊಂಡಿವೆ. ಅರ್ಥಪೂರ್ಣ ವಿಶೇಷಣವೂ ಛಂದಸ್ಸಿನ ಅಗತ್ಯಗಳಿಗೆ ಬಲಿಯಾಗಬೇಕೆ? ಎಂಬುದಷ್ಟೇ ನನ್ನ ಪ್ರಶ್ನೆ. ಅಂತೆಯೇ 'Work of glory'ಗೆ 'ಸಾಹಸ' ಎಂಬುದು ಉಚಿತ ಪರ್ಯಾಯವಲ್ಲ ಎಂದೆನಿಸುತ್ತದೆ.

ಇಂಥ ವೀರನಿಗೆ ಒದಗಿದ ದುರ್ಮರಣದ ಬಗ್ಗೆ ವಿಷಾದವನ್ನು ವ್ಯಕ್ತಪಡಿಸುವ ಪಂಕ್ತಿಗಳಲ್ಲಿ ಬರುವ 'tempest,' 'fatal leak' ಮೊದಲಾದ ಶಬ್ದಗಳು 'ಗಾಳಿ' ಮತ್ತು 'ಒಡಕು'ನಂಥ ಶಬ್ದಗಳನ್ನು ಪರ್ಯಾಯವಾಗಿ ಪಡೆದಿರುವುದರಿಂದ, ಅನುವಾದದ ಆ ಭಾಗ ದುರ್ಬಲವಾಯಿತೇನೋ ಎಂದೆನ್ನಿಸುತ್ತದೆ.

It was not in the battle ;
No *tempest* gave the *shock* ;
She sprang no *fatal leak,*
She ran upon no rock.

ಇದು "ಕಾಳಗದೊಳದು ಆಗಲಿಲ್ಲ ;
ಗಾಳಿ ಎರಗಿ ಒದರಲಿಲ್ಲ
ಒಡಕು ಕಿತ್ತದು ಮುಳುಗಲಿಲ್ಲ ;
ಅಡಗಿದರೆಯನ್ನು ಹಾಯಲಿಲ್ಲ."

ಎಂಬಂತೆ ಕನ್ನಡವಲ್ಲಿ ಕಾಣಿಸಿಕೊಂಡಿರುವುದು ಇದಕ್ಕೆ ಕಾರಣ.

ಈ ಗೀತದಲ್ಲಿ ಬಹುಮಟ್ಟಿಗೆ ಶಬ್ದಶಃ ಅನುವಾದದಲ್ಲಿ ತೊಡಗಿದ್ದರೂ, ಕನ್ನಡ ಭಾಷೆಗೆ ಹೊಸ ಆಯಾಮಗಳನ್ನು ಹೇಗೆ ಕಲ್ಪಿಸಬಹುದೆಂಬುದನ್ನೂ ಸೂಚಿಸಿದ್ದಾರೆ. ಉದಾಹರಣೆಗೆ, ''When Kempenfelt went down with *twice four* hundred men'' ಎಂಬುದನ್ನು 'ಎಂಟುನೂರು' ಎಂದಿರಿಸಿಕೊಳ್ಳದೆ 'ಎರಡು ನಾನೂರ್ ದಳದಲಿ' ಎಂದೇ ಇರಿಸಿಕೊಂಡಿದ್ದಾರೆ : (ವಾಸ್ತವವಾಗಿ ಇದು ಕನ್ನಡ ಭಾಷೆಗೆ ಹೊಸದೇನೂ ಅಲ್ಲ : ಹಳೆಯ ಕಾವ್ಯಗಳಲ್ಲಿಯೇ ಈ ಬಗೆಯ ಗಣನೆ ಕಾಣ ಬರುತ್ತದೆ ; ಆದರೆ ಹೊಸಗನ್ನಡದಲ್ಲಿಯೂ ಇದನ್ನು ಬಳಸಿದ್ದು, ಅವರು ತೋರಿದ ಹೊಸತನ.) ಅಂತೆಯೇ ''Weigh the vessel up–once dreaded by our foes'' ಎಂಬುದನ್ನು ಅನುವಾದಿಸಿಕೊಳ್ಳುವಾಗ 'ನಡುಗು' ಶಬ್ದವನ್ನು ನಾಮರೂಪದಲ್ಲಿ ಬಳಸಿ ಅನುವಾದವನ್ನು ಮಾರ್ಮಿಕವಾಗಿಸಿದ್ದಾರೆ : "ಎತ್ತಿ ಮೇಲಕೆ ಹಡಗನು ! ನಮ್ಮ ಹಗೆಯೆದೆ ನಡುಗನು" ಎಂಬಲ್ಲಿ 'ನಡುಗನು' ಎಂಬುದು ಪ್ರಾಸಕ್ಕಾಗಿ ಮಾತ್ರವೇ ಬಂದಿರುವಂಥ ಶಬ್ದವಲ್ಲ.

ಇನ್ನೂ ಕೆಲವು ಬಗೆಯ ಸೂಕ್ಷ್ಮತೆಗಳು ಶ್ರೀಯವರ ಅನುವಾದವಲ್ಲಿ ಅಳವಡದೆ ಹೋಗಿವೆ. ಉದಾಹರಣೆಗೆ : 'ಇಂಗ್ಲೆಂಡ ನಾವಿಕರು' ಎಂಬ ಗೀತದಲ್ಲಿ ಮೂಲದಲ್ಲಿ ಕಾಣದೊರೆಯುವ ಸಂಬೋಧನೆ ಮತ್ತು ವಿಶೇಷಣಗಳ ಸಾಪಯುವ ಸಂಬಂಧ ಕಾಣೆಯಾಗಿ, ವಿಶೇಷಣ ಬರಿಯ ಒಂದು ಹೇಳಿಕೆಯಾಗಿ ಉಳಿದುಬಿಡುತ್ತದೆ. ಏಕೆಂದರೆ,

''Ye Mariners of England
*That* guard our native seas !
whose flag has braved a thousand years
The battle and the breeze !

ಎಂಬುದು, "ಇಂಗ್ಲೆಂಡ ನಾವಿಕರಿರಾ–ಕಾಯುವಿರಿ
ನೀವೆಮ್ಮ ಕಡಲಂಗಳನು ;
ನಿಮ್ಮ ಬಾವುಟ ತಡೆಯಿತೊಂದು ಸಾವಿರ ವರುಷ
ಗಾಳಿಯನು ಕಾಳಗವನು."

ಎಂದು ಮೊದಲಾಗಿ ಅನುವಾದಗೊಂಡಾಗ, ಅಡ್ಡಗೀಟೊಂದು ಆ ಸಂಬಂಧವನ್ನು ಉಳಿಸಿಕೊಳ್ಳಲಾರದೆ ಹೋಗುತ್ತದೆ.
ಇದೇ ರೀತಿ ಲ್ಯಾಂಡರನ 'Rose Aylmer' ಗೀತದ ಅನುವಾದದಲ್ಲಿಯೂ

"A Night of memories and sighs
I Consecrate to thee."

ಎಂಬುದನ್ನು "ನೆನಸಿಕೊಳುವೆ, ಬಿಸುಸುಯ್ಯುವೆ, ಇರುಳನು
ನಿನಗೆಯೆ ಮಿಾಸಲು ತೆಗೆದಿಡುವೆ."

ಎಂದು ಕನ್ನಡಿಸಿದಾಗ ನೆನೆಯುವ ಮತ್ತು ಬಿಸುಸುಯ್ಯುವ ಕ್ರಿಯೆಗಳಿಗೂ ಇರುಳಿಗೂ ಇರುವ ಮೂಲದ ಅವಿನಾಭಾವ ಸಂಬಂಧ ಮರೆಯಾಗುತ್ತದೆ. ಹೀಗಾಗಿ, ಮೂಲದ ಭಾವವೇ ವ್ಯತ್ಯಸ್ತಗೊಳ್ಳುತ್ತದೆ.

ಮೂಲದ ವಿವರಣಕ ಅಥವಾ ಅವಾಂತರ ರಚನೆ–ಅಂದರೆ, paranthetic structure–ಅನುವಾದದಲ್ಲಿ ಸ್ಪಷ್ಟವಾಗಿ ಗೋಚರಿಸದೆ ಹೋಗಿ, ಭಾವ ಅಸ್ಪಷ್ಟವಾಗಿ ಬಿಡುವಂಥ ಸಂದರ್ಭಗಳೂ ನಮಗೆ ಅಲ್ಲಲ್ಲಿ ಎದುರಾಗುತ್ತವೆ. ಉದಾಹರಣೆಗೆ, 'ಗಾನ ಮೆಲುಪಿನ ಕೊರಲು ಕುಗ್ಗಲು' ಗೀತದ

"ಕಳಚಿದೆಸಳು, ಗುಲಾಬಿ ಕಂದಲು,
ತಳಿವುದಿನಿಯಳ ಶಯನವ."

ಮೂಲದಲ್ಲಿಯಾದರೋ ಅರ್ಥ, ಭಾವ ಮತ್ತು ಸಂಬಂಧಗಳ ಸಂದಿಗ್ಧತೆಯೇನೂ ಇಲ್ಲ :

"Rose leaves, when the rose is dead,
Are heap'd for the beloved's bed."

ಮೂಲವನ್ನು ಆಂಶಿಕವಾಗಿ ಬದಲಾಯಿಸುವುದಲ್ಲದೆ, ಸಂಪೂರ್ಣವಾಗಿಯೂ ಬದಲಾಯಿಸಿಬಿಡುವುದು 'ಇಂಗ್ಲಿಷ್ ಗೀತ'ಗಳಲ್ಲಿ ನಾವು ಕಾಣುವ ಇನ್ನೊಂದು ಲಕ್ಷಣ. ಹೀಗಾಗಿ, ಶ್ರೀಯವರ ಅನುವಾದ ಭಾಗಗಳು 'false to wordsworth' ಆದಂತೆ, 'false to other poets' ಕೂಡ ಆಗಿಬಿಡುತ್ತವೆ. ಉದಾಹರಣೆಗೆ : 'Burial of Sir John Moore' ಗೀತದ

"Not a soldier discharged his farewell shot."

ಎಂಬಲ್ಲಿನ "ಯಾವೊಬ್ಬ ಸೈನಿಕನೂ ಅಂತಿಮ ಬೀಳ್ಕೊಡುಗೆಯ ಗುಂಡನ್ನು ಹಾರಿಸಲಿಲ್ಲ" ವೆಂಬ ಭಾವವನ್ನು

"ಒಬ್ಬ ಸಿಪಾಯಿಯು ಕಳುಹುವ ಸುರುಟಿಲ್ಲ" ಎಂಬ ಅನುವಾದದಲ್ಲಿ ಕಷ್ಟದಿಂದ ಕಾಣಬೇಕಾಗುತ್ತದೆ.

ಅಂತೆಯೇ ಬರ್ನ್ಸ್‌ಕವಿಯು 'Fair Lesley' ಯಲ್ಲಿನ

"Thou art divine, Fair lesley,
The hearts, of men adore theee"

ಎಂಬ ಪಂಕ್ತಿಯಲ್ಲಿ ಸೂಚಿತವಾಗಿರುವ ಆರಾಧನಾ ಭಾವ

". ನೀನೇ ದೇವಿಕಣಾ,
ದಾಸರು, ಸೇವಿಸಿ ಬೇಡುವೆವು"

ಎಂಬ ಅನುವಾದದಲ್ಲಿ ತನ್ನ ಸ್ವರವನ್ನೇ ಬದಲಾಯಿಸಿತೇಸೋ ಎಂಬ ಅನುಮಾನವನ್ನು ಮೂಡಿಸುತ್ತದೆ.

ಕೋಲ್‌ರಿಜ್ ಕವಿಯು 'Love' ಗೀತದ ಅನುವಾದದಲ್ಲಿ ಬರುವ

"ಮಲ್ಲಿಗೆಯ ಬಿರಿಮುಗುಳ ಮೇಲೆ ಬರುವೆಲರಂತೆ
ಮೆಲ್ಲನುಲಿದಳು ಕಡೆಗೆ ನನ್ನ ಹೆಸರ."

ಎಂಬ ಕಲ್ಪನೆಗೂ, "And like the murmur of a dream,
I heard her brea he my name."

ಎಂಬ ಮೂಲದ ಕಲ್ಪನೆಗೂ 'ಅಜಗಜಾಂತರ' ವ್ಯತ್ಯಾಸವೇ ಏರ್ಪಡುತ್ತದೆಯಲ್ಲವೆ ?

ಅಂತೆಯೇ, "ಅಡವಿಯ ಮುಳ್ಳಲಿ ಮಿಂಚಿನ ಹುಳುಗಳು ಪಂಜನು ಹಿಡಿಯುವ ದೃಶ್ಯ ಎಷ್ಟೇ ಚೇತೋಹಾರಿಯಾಗಿದ್ದರೂ, ಅನುವಾದಕರು ಕಂಡುಂಡ ಅನುಭವವೇ" ಆಗಿದ್ದರೂ, 'ಬಿಂಕದ ಸಿಂಗಾರಿ'ಯ ಹಮ್ಮನ್ನು ಗಾಳಿಗೆ ತೂರುವ ಸನ್ನಿವೇಶದಲ್ಲಿ ಉಚಿತವಾಗಲಾರದು. "ಅವಳ ಸಮಾಧಿಗಾಗಿ ಮಣ್ಣಿನಲ್ಲಿ ಆಳವಾದ ಕುಳಿಯನ್ನು ತೋಡುವ" ಚಿತ್ರದ ಅನಂತರ ಬರಬೇಕಾದ ಚಿತ್ರ ಸಹಜವಾಗಿಯೇ ಶ್ಮಶಾನದ್ದು. ಆದ್ದರಿಂದಲೇ, ಸ್ಕಾಟ್

"The glowworm o'er grave and stone
Shall light thee steady ; " ಎಂದಿರುವುದು.

ತುಂಬ ಪ್ರಸಿದ್ಧವಾದ ಈ ಪದ್ಯದಲ್ಲಿ, "Scott has given us nothing more complete and lovely than this little song which unites simplicity and dramatic power to a wild-wood music of the rarest quality. No moral is drawn far less any conscious analysis of feeling attempted :– *the pathetic meaning is left to be suggested by the mere presentment of the situation.*" ಎಂದು ವಿಮರ್ಶಕರು ಎಚ್ಚರಿಸಿರುವಾಗಲಂತೂ ಮೂಲದ ಕಲ್ಪನೆಗಳನ್ನು ಬದಲಾಯಿಸುವುದು ಅಪೇಕ್ಷಣೀಯವಲ್ಲವೆಂದೆನ್ನಿಸುತ್ತದೆ.

ಹೀಗೆ ಕಲ್ಪನೆಗಳನ್ನು ಬದಲಾಯಿಸುವ ಅಗತ್ಯವೇ ಉಂಟಾಗುವುದಿಲ್ಲವೆನ್ನುವುದು ನನ್ನ ವಾದವಲ್ಲ. ಶೆಲ್ಲಿಯ 'Music when soft voices die' ಗೀತದ "When

sweet violets sicken" ಎಂಬುದನ್ನು "ಮೊಲ್ಲೆಯ ಸೊಂಪು ಸೊರಗಲು" ಎಂದು ಬದಲಾಯಿಸಿಕೊಂಡಿರುವುದು ಸಹ್ಯವೇ ಆಗಿದೆ. ಆದರೆ, ಲ್ಯಾಂಬ್‌ನ ಗೀತದ ಅನುವಾದದಲ್ಲಿ ಮಾಡಿರುವಂತೆ,

> "*I have had playmates,* I have had companions,
> *In my days of childhood,* in my joyful school days;"

ಅನ್ನು. "ಕಂದ ಬಿದ್ದೆಯ ಎಂದು ಮುದ್ದಿಸಿ ನನಗೆ ಮರುಗುವರಿದ್ದರು" ಎಂದು ಸಂಪೂರ್ಣವಾಗಿ ಬದಲಾಯಿಸುವುದಾಗಲೀ, ಅದೇ ಗೀತದ

> "*I Loved a Love once, fairest among women ;*
> closed are her doors on me, I must not see–her".

ಎಂಬುದಕ್ಕೆ ಬದಲಾಗಿ ತಮ್ಮದೇ ಆದ ಕಲ್ಪನೆಗೆ ಅನುಗುಣವಾದ

> "ಹರಸಿ ಪಡೆದೆನು ಹೆಣ್ಣನೊಂದನು– ಹೇಳಲರಿಯೆನು ಹಿತುವನು.
> ಉರಿದು ಹೋದಳು, ಬೂದಿಯಾದಳು, ಹಿಡಿವುದಿನ್ನಿಲ್ಲವಳನು ."

ಎಂಬ ಚಿತ್ರವನ್ನು ಕೊಟ್ಟರೆ ಹೇಗೆ ?

ಹಲವು ಕಡೆಗಳಲ್ಲಿ ಪ್ರಾಸಕ್ಕಾಗಿಯೂ ಶ್ರೀಯವರು ಮೂಲದ ಮಾತುಗಳನ್ನು ಬದಲಾಯಿಸಿರುವುದುಂಟು. ಉದಾಹರಣೆಗೆ: ಕ್ಲೋನ ಗೀತದ– 'Say not the struggle naught availeth' ನ– ಕೊನೆಯ ಎರಡು ಪಂಕ್ತಿಗಳ ಅನುವಾದ ಶ್ರೀಯವರಲ್ಲಿ ಹೀಗೆ ಬಂದಿದೆ :

> "ಮುಂದೆ ಮೆಲ್ಲಗೆ ಮೆಲ್ಲಗೇರುವುದು ಹೊತ್ತು–
> ಹಿಂದೆ ಪಡುವಲು ನೋಡು– ನೆಲದ ಸಂಪತ್ತು."

ಆದರೆ ಮೂಲ ಹೀಗಿದೆ : But westward look, the Land is *bright!*

ಮೂಲದ ಭಾವವನ್ನು ವಿಸ್ತರಿಸಿಕೊಂಡು ಹೋಗುವುದು ಶ್ರೀಯವರ ಇನ್ನೊಂದು ಸ್ವಭಾವ. ಈ ವಿಸ್ತಾರ ಒಂದೆರಡು ಮಾತುಗಳಿಂದ ಹಿಡಿದು ಹಲವು ಪಂಕ್ತಿಗಳ ವರೆಗೆ ವಿಸ್ತರಿಸಿಕೊಳ್ಳುವುದೂ ಉಂಟು. ಉದಾಹರಣೆಗೆ : ಈಗಾಗಲೇ ಹೆಸರಿಸಿದ ಸ್ಕಾಟ್‌ನ 'ಗ್ಯಾದರಿಂಗ್ ಸಾಂಗ್'ನ ಈ ಅನುವಾದ ಭಾಗವನ್ನು ನೋಡಿ :

> "ಬಿಡಿ ಇರಲಿ ಮಂದೆಗಳು, ಹೊಸ ಉತ್ತ ಮಣ್ಣು.
> ಬಿಡಿ ಇರಲಿ ಸತ್ತ ಹೆಣ, ಹಸೆ ಮಣೆಯ ಹೆಣ್ಣು."

ಇದರ ಮೂಲ ಹೀಗಿದೆ :

> Leave untended the herd,
> The flock without shelter ;
> Leave the corpse un-interred,
> The bride at the altar."

ಬಹುಶಃ ಮೊದಲ ಎರಡು ಪಂಕ್ತಿಗಳಲ್ಲಿರುವ ಪ್ರಾಣಿಗಳನ್ನೆಲ್ಲ ಒಂದೇ 'ಮಂದೆ' ಯಲ್ಲಿ ಸೇರಿಸಿದ ಶ್ರೀಯವರು, 'ಹೊಸ ಉತ್ತಮಣ್ಣು' ಇಲ್ಲಿ ಹೊಸದಾಗಿ ಬಂದು ಸೇರಿಕೊಳ್ಳುವಂತೆ ಮಾಡಿದ್ದಾರೆ.

ಸದೆಯ 'ಬ್ಲೆನ್ ಹೀಮ್ ಕದನ'ದಲ್ಲಿಯೂ ಹೀಗೇ ಆಗಿದೆ : ಅದರ ಈ ನಾಲ್ಕು ಪಂಕ್ತಿಗಳನ್ನು–

''And many a childing mother then
And new-born baby died ;
But things like that, you know, must be
At every famous victory.''

ಶ್ರೀಯವರು, 'ತುಂಬು ಬಸಿರಿಯರು, ಹಾಲು ಮಕ್ಕಳು ಸತ್ತ
ಲೆಕ್ಕವ ದೇವರೆ ಬಲ್ಲ
ಆದರಂತಹುದೆಷ್ಟೊ ಆಗಲೇಬೇಕಲ್ಲ
ಲೋಕಪ್ರಸಿದ್ಧಿಯ ಜಯದಲಿ ಎಂದ."

ಎಂಬುದಾಗಿ ಅನುವಾದಿಸಿಕೊಂಡಿದ್ದಾರೆ. ಇಲ್ಲಿಯು "ಲೆಕ್ಕವ ದೇವರೆಬಲ್ಲ" ಎಂಬ ಪಂಕ್ತಿಗೆ ಮೂಲದಲ್ಲಿ ಇರುವ ಆಧಾರವೆಲ್ಲ 'many' ಎಂಬ ಮಾತು, ಅಥವಾ ಆಧಾರವೇ ಇಲ್ಲವೆಂದರೂ ಸಲ್ಲುತ್ತದೆ. ಅಂತೆಯೇ ಶೆಲ್ಲಿಯು 'Loves philosophy' ಯ ಈ ಪಂಕ್ತಿಗಳನ್ನು ನೋಡಿ :

''See the mountains kiss high heaven,
And the waves clasp one another ;

ಇದನ್ನು ಶ್ರೀಯವರು–

"ಮಳೆ ಮುಗಿಲ ಮುಟ್ಟುವುದು ಬೆಟ್ಟಗಳು ನೆಗೆದು ;
ಬೆಳದಿಂಗಳಿಳಿತಂದು ಸೋಕುತಲೆ ಹೊಮ್ಮಿ
ಸೆಳೆದಲೆಗಳಪ್ಪುವುವು ಹಿಗ್ಗಿ ಚಿಮ್ಮಿ."

ಇಲ್ಲಿಯು "ಬೆಳದಿಂಗಳಿಳಿತಂದು ಸೋಕುತಲೆ ಹೊಮ್ಮಿ" ಎಂಬ ಮಾತುಗಳಿಗೂ ಶ್ರೀಯವರ ಅನುಭವವೇ ಆಧಾರವೆಂಬುದು ಸ್ಪಷ್ಟವಾಗಿದೆ.

ಇಂಥ ಪ್ರಸಂಗಗಳಲ್ಲಿ ಶ್ರೀಯವರ ಸೇರ್ಪಡೆಗಳು ನಮಗೆ ಹಿತವಾಗಿಯೂ ತೋರಬಹುದು. ಕನಿಷ್ಠಪಕ್ಷ ಅಸಂಗತವಾಗಿಯಂತೂ ಇಲ್ಲವೆನ್ನಿಸಬಹುದು. ಆದರೆ, ಇವು ಪ್ರಶ್ನಾರ್ಹವಾಗುವಂಥ ಅಥವಾ ವಿವಾದಾಸ್ಪದವಾಗುವಂಥ ಸಂದರ್ಭಗಳೂ ಇವೆ. ಉದಾಹರಣೆಗೆ : 'ದುಃಖಸೇತು'ವಿನಲ್ಲಿ ಸೇರ್ಪಡೆಯಾಗಿರುವ,

"ನಿರಿಹಿಡಿದು, ನಡುವೇರಿ,
ತೊದಲು ಮಾತನು ಬೀರಿ,
ಕೊರಗ ನಗಿಸಲು ಬಲ್ಲ
ಮಗುವಿಲ್ಲವೇನೋ ?"

ಎಂಬ ಪಂಕ್ತಿಗಳು. ಇವು "ಕರುಣ ರಸದ ಮಿನುಗನ್ನು ಹೆಚ್ಚಿಸಿವೆ" ಎಂದು ತೀ. ನಂ. ಶ್ರೀಯವರು ಭಾವಿಸಿದರೆ, "ಮೂಲದ ಧ್ವನಿಗೆ ಕೊಂಚ ಕುಂದನ್ನೇ ತರುವುವು ಎಂಬ ಭಾವನೆ ಬರುತ್ತದೆ. ಹೆಣ್ಣು ಯಾವನೋ ಒಬ್ಬ ಕಾಮಿಯ ಬಲೆಗೆ ಸಿಕ್ಕಿ ಮೋಸ ಹೋಗಿದ್ದಾಳೆ. ತನ್ನ ಪಾಪದ ಫಲವಾದ ಅವಮಾನವನ್ನು ತಡೆಯಲಾರದೆ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಅವಳ ಪಾಪದ ಬಗ್ಗೆ ನಾವು ಮಾತನಾಡುವುದು ಸಲ್ಲದು. ದೇವರೇ ಅವಳನ್ನು ಕ್ಷಮಿಸಲೆನ್ನುವ ಧ್ವನಿ ಮೂಲದಲ್ಲಿದೆ. ಮಗುವಿದ್ದಿದ್ದರೆ ಎಂಬ ಯೋಚನೆಯಿಂದ ಈ ಧ್ವನಿ ಕುಗ್ಗುವುದೆಂಬುದು ಸ್ಪಷ್ಟ" ಎನ್ನುತ್ತಾರೆ ಎಸ್. ಅನಂತನಾರಾಯಣ.

ಶ್ರೀಯವರ ಅನುವಾದ ವಿಧಾನದಲ್ಲಿ ಹೀಗೆ ಅಲ್ಲಲ್ಲಿ ಕೆಲವು ಲೋಪ-ದೋಷಗಳು ಕಾಣಿಸಬಹುದಾದರೂ, ಈ ಸಂಗ್ರಹದ ಬಹುಪಾಲು ಕವನಗಳಲ್ಲಿ ಅವರು ತಮ್ಮ ಸಿದ್ಧಹಸ್ತವನ್ನೇ ಮೆರೆದಿದ್ದಾರೆ. 'ಮುದ್ದಿನ ಕುರಿಮರಿ', 'ರಾವುತರ ದಾಳಿ', 'ಮಾದ, ಮಾದಿ', 'ಕನಕಾಂಗಿ', 'ಮುದಿಯ ರಾಮಗೌಡ', 'ದುಃಖಸೇತು' 'ಕಾರಿಹೆಗ್ಗಡೆಯ ಮಗಳು', 'ಪ್ರಾರ್ಥನೆ' (ಕರುಣಾಳು, ಬಾ, ಬೆಳಕೆ) ಇವೇ ಮೊದಲಾದ ರಚನೆಗಳು ಸರ್ಜನಾತ್ಮಕ ಅನುವಾದದ, ರೂಪಾಂತರದ ಅತ್ಯುತ್ತಮ ನಿದರ್ಶನಗಳಾಗಿ ಉಳಿಯುವಂಥವು. ಶ್ರೀಯವರ ಮಾಂತ್ರಿಕ ಸ್ಪರ್ಶದಿಂದ ಆಂಗ್ಲ ಸಾಹಿತ್ಯದಲ್ಲಿ 'ಸಾಮಾನ್ಯ' ವೆನಿಸಿಕೊಂಡಿರುವಂಥ ರಚನೆಯೂ ಕನ್ನಡದಲ್ಲಿ ಅಸಾಮಾನ್ಯವಾಗಿ ಪರಿಣಮಿಸಿರುವುದೂ ಉಂಟು. ಉದಾ: 'ದುಃಖಸೇತು' ವಿನ ಬಗ್ಗೆ ಡಾ. ಪ್ರಭುಶಂಕರ ಹೀಗೆಂದಿದ್ದಾರೆ: "ಇಂಗ್ಲಿಷಿನಲ್ಲಿ ಅಷ್ಟೇನೂ ಪ್ರಸಿದ್ಧವಲ್ಲದ ಕವನ ಇದು. ಕನ್ನಡದಲ್ಲಾದರೋ ಮೂಲವನ್ನು ಮೀರಿದ ಪ್ರಖ್ಯಾತಿಯನ್ನು ಪಡೆದಿದೆ." ಕ್ರಾಂತಿಯನ್ನು ಬೀರಿದ ಇಂಥ ಅನುವಾದಗಳ ಸಂಕಲನವನ್ನುಳ್ಳ ಭಾಷೆ ಬಹುಶಃ ಇನ್ನೊಂದಿಲ್ಲ. ಈ ದೃಷ್ಟಿಯಿಂದಲೂ 'ಇಂಗ್ಲಿಷ್ ಗೀತಗಳು' ಕನ್ನಡದ ಅಪೂರ್ವ ಸಾಧನೆ.

## ಅಶ್ವತ್ಥಾಮನ್

ಅಶ್ವತ್ಥಾಮನ್ ರೂಪಾಂತರ ಅನುವಾದ ವಿಧಾನದ ಅತ್ಯುತ್ತಮ ನಿದರ್ಶನವಾಗಿ ಉಳಿದುಕೊಂಡಿದೆ. ಕನ್ನಡ ನಾಟಕಗಳ ಕ್ಷೇತ್ರದಲ್ಲಿ ಕ್ರಾಂತಿಯನ್ನು ಉಂಟುಮಾಡಿದ ನಾಟಕವೂ ಇದು ಹೌದು. ಇದರ ಬಗ್ಗೆ ಎ. ಎನ್. ಮೂರ್ತಿರಾಯರು

ಹೀಗೆ ಹೇಳಿದ್ದಾರೆ : "ಅಶ್ವತ್ಥಾಮನ್ ಕನ್ನಡ ರಂಗಭೂಮಿಯ ಮೇಲೆ ಆಳವಾದ ಪ್ರಭಾವ ಬೀರಿದೆ. ಶ್ರೀಕಂಠಯ್ಯನವರು ಇದನ್ನು ವಿಧೆಯ ಭಾಷಾಂತರವಾಗಿಸಿದ್ದರೆ- ಹೀಗೆ ಮಾಡುವುದು ಅವರಿಗೆ ಸುಲಭವಾಗಿತ್ತು- ಇದು ಸಾಧ್ಯವಾಗುತ್ತಿರಲಿಲ್ಲ."

ಇದಕ್ಕೆ ಮೂಲ ಪ್ರೇರಣೆ ದೊರೆತಿರುವುದು ಸೊಫೋಕ್ಲಿಸನ 'ಎಜಾಕ್ಸ್'ಅಥವಾ 'ಅಯಾಸ್' ನಾಟಕದಿಂದ. ಶ್ರೀಯವರು ಗ್ರೀಕ್ ಸಾಹಿತ್ಯದತ್ತ ಆಕರ್ಷಿತರಾಗಿದ್ದರು ಹಾಗೂ ಗ್ರೀಕ್ ಭಾಷೆಯನ್ನು ಅಭ್ಯಾಸ ಮಾಡುವ ಪ್ರಯತ್ನವನ್ನು ನಡೆಸಿದ್ದರು. ಈ ಅಭ್ಯಾಸದಲ್ಲಿ ಕ. ವೆಂ. ರಾಘವಾಚಾರ್ಯರೂ ಅವರೊಡನೆ ಸೇರಿದ್ದರೆಂಬುದನ್ನು ವಿ. ಸೀತಾರಾಮಯ್ಯನವರು ತಮ್ಮ ಇತ್ತೀಚಿನ ಬರೆಹವೊಂದರಲ್ಲಿ ಉಲ್ಲೇಖಿಸಿದ್ದಾರೆ. ರಂಗಣ್ಣನವರಂತೂ ಹೀಗೆ ಹೇಳಿದ್ದಾರೆ : "No part of literature, Western or Eastern, exercised such a magnetic pull over Professor Srikantia as ancient Greek tragedy. Perhaps he regarded it as the acme of poetry. He very much longed to pay it an appropriate tribute which would be consummate and matchless. After sufficient brooding meditation he contrived to hatch a strange extra-ordinary and astonishing winged verse drama. He Christened it Asvatthaman"– ಇದಕ್ಕೆ ಸಿದ್ಧತೆಯಾಗಿ ಶ್ರೀಯವರು 'ಮಹಾಭಾರತ'ವನ್ನು ಆಳವಾಗಿ ಅಧ್ಯಯನ ಮಾಡಿದರು. ದ್ರೋಣ ಪರ್ವ, ಕರ್ಣಪರ್ವ, ಶಲ್ಯಪರ್ವ ಮತ್ತು ಸಾಪ್ತಿಕ ಪರ್ವಗಳನ್ನು ಶ್ರೀಕಂಠಯ್ಯನವರಿಗೆ ತಾವು ಓದಿ ಹೇಳಿದುದಾಗಿಯೂ, ಆಗ ಅವರು ವ್ಯಾಪಕವಾಗಿ ಟಿಪ್ಪಣಿಗಳನ್ನು ಸಿದ್ಧಪಡಿಸಿಕೊಂಡರೆಂಬುದಾಗಿಯೂ ಡಿ. ವಿ. ಜಿ. ಯವರು ಉಲ್ಲೇಖಿಸಿದ್ದಾರೆ.

ಈ ಎಲ್ಲ ಅಧ್ಯಯನ ಮತ್ತು ಚಿಂತನಗಳ ಫಲವಾಗಿ 'ಅಯಾಸ್'ನ ರೂಪಾಂತರವೆಂಬಂತೆ 'ಅಶ್ವತ್ಥಾಮನ್' ನಾಟಕವನ್ನು ಅವರು ಸೃಜಿಸಿದರು. ಅಲ್ಲಿಯ ಪಾತ್ರಗಳಿಗೆ ಸಂವಾದಿಯಾಗಿ ಅವರು ಆರಿಸಿಕೊಂಡ ಪಾತ್ರಗಳು ಇವು : 1) ಅಶ್ವತ್ಥಾಮನ್ –ಅಯಾಸ್ ; 2) ಏಕಲವ್ಯ–ಟ್ಯೂಸರ್ ; 3) ರುದ್ರಶಕ್ತಿ–ಯೂರಿಸೇಕ್ಸ್ ; 4) ಭಾರ್ಗವಿ–ಟೆಕ್‌ಮೆಸ್ಸ ; 5) ಭೀಮ–ಮೆನೆಲೌಸ್ ಮತ್ತು ಅಗಮೆಮ್‌ನನ್ ; 6) ಕೃಷ್ಣ-ಒಡ್ಸೆಸ್ಯೂಸ್ ; ಮತ್ತು 7) ರುದ್ರ–ಅಥೀನೆ.

ತನ್ನನ್ನು ಮೀರಿ ಒಡ್ಸೆಸ್ಯೂಸ್‌ಗೆ ಗೌರವವನ್ನು ಸಲ್ಲಿಸಿದ್ದಕ್ಕಾಗಿ ಅಯಾಸ್ ತನ್ನ ಪಕ್ಷದವರ ವಿರುದ್ಧವಾಗಿಯೇ ತಿರುಗಿಬಿದ್ದ ಹಾಗೂ ಶತ್ರುಗಳ ನಾಡಿನಲ್ಲಿ ತಮ್ಮ ಸೈನ್ಯ ಬೀಡುಬಿಟ್ಟಿದ್ದ ಅವಧಿಯಲ್ಲಿಯೇ ತನ್ನ ಪ್ರತೀಕಾರ ಕ್ರಮಗಳನ್ನು ಕೈಗೊಂಡ–ಈ ಎರಡು ಅಂಶಗಳಲ್ಲಿ 'ಅಯಾಸ್' ನಾಟಕದ ಕಥಾನಕಕ್ಕಿಂತ 'ಅಶ್ವತ್ಥಾಮನ್' ನಾಟಕದ ಕಥಾನಕ ಭಿನ್ನವಾಗಿದೆ ಎಂಬುದನ್ನು ಬಿಟ್ಟರೆ, ಉಳಿದಂತೆ ಅಂಕದಿಂದ ಅಂಕಕ್ಕೆ 'ಅಯಾಸ್' ನಾಟಕವನ್ನೇ ಶ್ರೀಯವರು ಯಥಾವತ್ತಾಗಿ ಅನುಸರಿಸಿದ್ದಾರೆ : ದೈವವನ್ನು

ನಿರ್ಲಕ್ಷಿಸಿ ಅಶ್ವತ್ಥಾಮ ಸೆಟೆದು ನಿಲ್ಲುವುದು. ಉನ್ಮಾದವಶನಾಗಿ ಹತ್ಯೆಯಲ್ಲಿ ತೊಡಗುವುದು, ಅರಿವು ಮೂಡಿದಾಗ ಅವನಲ್ಲಿ ಜುಗುಪ್ಸೆ ಮೂಡುವುದು. ಆತ್ಮಹತ್ಯೆ, ಶವಕ್ಕೆ ಅಂತಿಮ–ಸಂಸ್ಕಾರಗಳನ್ನು ಎಸಗುವ ವಿಷಯದಲ್ಲಿನ ವಿವಾದ, ಅಶ್ವತ್ಥಾಮನ ಹಿರಿಮೆಯನ್ನು ಗುರುತಿಸಿ ಸಂಸ್ಕಾರಗಳನ್ನೆಸಗುವುದು–ಹೀಗೆ ಘಟನೆಗಳ ಈ ಕ್ರಮ 'ಅಯಾಸ್' ನಾಟಕದ ಹಾದಿಯಲ್ಲೇ ಸಾಗುತ್ತದೆ.

ರೂಪಾಂತರ ವಿಧಾನವನ್ನು ಆಶ್ರಯಿಸಿದ್ದರಿಂದ ಶ್ರೀಯವರು ಮೂಲಕ್ಕೇ ಸಂಪೂರ್ಣವಾಗಿ ಜೋತು ಬೀಳಬೇಕಾದ ನಿರ್ಬಂಧವಿರಲಿಲ್ಲ. ಮೂಲದ ಧಾಟಿಯಲ್ಲಿ ಮೂಲದ ಆಶಯವನ್ನು ಗ್ರಹಿಸಿ, ಮೂಲದ ಮಾತುಗಳನ್ನೂ ಬಳಸಿಕೊಂಡು ಮುಂದೆ ಸಾಗುವ ಸೌಲಭ್ಯ–ಸ್ವಾತಂತ್ರ್ಯ ಅವರಿಗಿತ್ತು. ಇದನ್ನು ಅವರು ಅನುಪಮವಾದ ರೀತಿಯಲ್ಲಿ ನಿರ್ವಹಿಸಿದ್ದಾರೆ. ಉದಾಹರಣೆಗೆ ಮೂಲದ ಮೊದಲ ಅಂಕದಲ್ಲಿನ ಹಲವು ಮಾತುಗಳು ಶ್ರೀಯವರ ರೂಪಾಂತರದಲ್ಲಿ ಹೇಗೆ ನುಸುಳಿಕೊಳ್ಳುತ್ತವೆ ಎಂಬುದನ್ನು ನೋಡಬಹುದು :

1) ಒಡ್ಡೈಸ್ಯೂಸ್ : "Voice of Athena, dearest to me of the Immortals I hear thy call and seize it in my soul....'

ಕೃಷ್ಣನ್ : "ಎನ್ನೊಡೆಯ ಅಮರರೊಳ್ ನನಗೆ ಪರಮ ಪ್ರೇಮಿ, ಓ ರುದ್ರ, ನಿನ್ನಾತ್ಮಮ್ ಎನ್ನುಸಿರ್ ;..."

2) ಒಡ್ಡೈಸ್ಯೂಸ್ : "Some times I recognise the foot-prints as his, but some times I am bewildered, and cannot read whose they are.

ಕೃಷ್ಣನ್ : "...ಒರ್ಮೆ ಸಾಣ್ಬುದು ಪಜ್ಜೆ, ಒರ್ಮೆ ಕಾಣದು.

3) ಒಡ್ಡೈಸ್ಯೂಸ್ : "And why was his insensate hand put-forth so fiercely ?"

ಕೃಷ್ಣನ್ : "ಏಕೆ ಕೈಯಿಟ್ಟನೋ ಇಂತಪ್ಪ ಘೋರದೊಳ್ !"

4) ಅಥೀನೆ : "Twas in your blood, as he deemed, that he was dyeing his hand."

ರುದ್ರ : "ನಿಮ್ಮೆಲ್ಲರನ್ ಕೊಂದೆನ್ ಎಂಬುದೇ ಅವನೆಣಿಕೆ."

5) ಒಡ್ಡೈಸ್ಯೂಸ್ : "What cause, then, stayed his eager hand from murder?"

ಕೃಷ್ಣನ್ : "ಆರ್ ತಡೆದರ್ ಆ ಕೊಲೆಯ ಕಯ್ಯನ್ ?"

6) ಅಥೀನೆ : ["…. Then he fell on, and dealt death among the horny throng, as he hewed them to the earth around him ; … And while the man raved in the throes of frenzy, I still urged him, hurled him into the toils of doom. … he bound together the living oxen, with all the sheep, and brought them home, as though his captives were men, not goodly kine. And now he torments them, bound together, in the house….] *But to thee also will I show this madness openly….*

[ರುದ್ರನ್ : "ಮೇಲ್ವಿಟ್ಟು ತುಱುಗಳನ್ ತಱಿದಿನ್. ಕುದುರೆಯುನ್ ಕೊರಲೊಂಕೆ ಕೊಱಿದನ್. ಆನೆಯೊಂದನ್ ತಟ್ಟಿ….ಅದರ ಕಾಲ್‌ಮುಱಿದು, ಬಲ್ವಿಣಿಸನ್ ಒದೆದೊವೆಮು ಬಿಸುಟನ್…. ಕಾಂಕುಟಿಯೊಳ್ ಕುಱಿಯೊಂದನ್ ಇಱುಕಿ….ಬೀಡಿಂಗುಯು ಓಸಿಸುತ್ತಿರ್ಪನ್. ಸುತ್ತಲುಂ ಬೀರರೆಂದಟ್ಟಿ ತಂದುವು ಪಶುಗಳ್ ಇಱಿದು ಕೆಡೆದಿರ್ಪುಂ……..] **ತೋರುವೆನ್ ಪೆರ್ಚಿದಾ ಪುರ್ಚನ್.**

7) ಒಡ್ಯೆಸ್ಸ್ಯೂಸ್ : "What dost thou Athena ? Never call him forth.
ಕೃಷ್ಣನ್ : "ಏನ್ ಮಾಟ್ಟಿ, ಓರುದ್ರ, ಕರೆಯುದಿರ್, ಕರೆಯುದಿರ್.

8) ಅಥೀನೆ : "What is danger ? was he not a man before ?
ರುದ್ರನ್ : "ಏನ್ ಭಯಂ ? ಮರ್ತ್ಯನ್ ಅಪನ್ ಈಗಳುಂ ?"

9) ಒಡ್ಯೆಸ್ಸ್ಯೂಸ್ : "yea a foeman to thy servant, and still is."
ಕೃಷ್ಣನ್ : "ಮರ್ತ್ಯನೇ–ಆದೊಡೆನಗರಿಯ ಪಗೆ."

10) ಅಥೀನೆ : "And to mock at foes-is not that the sweetest mockery."
ರುದ್ರನ್ : "ನಗೆ ಇನಿದು–ಪಗೆಗಳನ್ ನಗುವ ನಗೆ."

ಇದೇ ರೀತಿ, ಅಂತಿಮ ದೃಶ್ಯದಲ್ಲೂ ಮೂಲದ ಹೆಜ್ಜೆಯನ್ನೇ 'ಅಶ್ವತ್ಥಾಮನ್' ಹೇಗೆ ಅನುಸರಿಸುತ್ತದೆಂಬುದನ್ನು ನೋಡಿ :

1) ಒಡ್ಯೆಸ್ಸ್ಯೂಸ್ : "… hence forth I am ready to be his friend as staunch as I was once a foe. And I would join in the burying of your dead, and part-take your

cares, and omit no service which mortals should render to the noblest among men."

ಕೃಷ್ಣನ್ : "ಪಿಂದೆ ಪಗೆ. ಮುಂದೆ ಕೆಳೆ. ನಿಮ್ಮೊಡನೆ ಕೂಡುವೆನೆ ಸಂಸ್ಕಾರ ಕರ್ಮದೊಳ್ ? ವೀರಂಗೆ, ಧೀರಂಗೆ, ರುದ್ರಾವತಾರಂಗೆ ಸೇವೆಯೆನ್ ಸಲಿಸುವಂ."

2) ಓಡ್ಯೆಸ್ಯೂಸ್ : " I accept thy decision, and depart."

ಕೃಷ್ಣನ್ : "....ನಿನ್ನ ತೀರ್ಪಿಂಗಿದೋತಲೆವಾಗಿ ಪೋಗುವೆನ್."

3) ಟ್ಯೂಸರ್ : "Enough, alredy the delay hath been long drawn out. Come, haste some of you dig the hollow grave; place, some, the high set caldron girt with fire in readyness for holy ablution, and let another band bring the body-armour from the tent. And thou, too, child.... lay a loving. hand up-on thy sire ...for still the warm channels are spouting upword their dark tide: come, each one here who owns the name of friend, haste, away. in service to this man of perfect prowess;

ಏಕಲವ್ಯನ್ ; "ಏೞಿಮಿನ್, ಪೊೞ್ತೀಱಿತಾಗಳೇ, ಏೞಿಂ. ಎಡೆಯಾಯ್ತು ಕಲ್ಲಜಿಗೆ ಭೂಮಿಯನ್ ಕೀೞಿಂ. **ಗಂಗೆಗೊರ್ವನ್ ಪರಿಗೆ– ಅಗ್ನಿಗಿನ್ನೊರ್ವನ್.** ಆಯುಧಮನ್ ಎಲ್ಲಮನ್ ಬೀಡಿಂದೆ ತನ್ನಿಂ. ಬಾ, ಮಗುವೆ ; ಕೆಳೆಯರಿರ ಬನ್ನಿಂ. ಮೆಯ್ಯಿಟ್ಟು, ಕುರುಳಿಟ್ಟು ಭಕ್ತಿಯನ್ ತೋರ್ಪಂ."

ಇನ್ನುಮ್ ಆಹಾ ! ಇವನ್ ರಕ್ತಮನೆ ಸೋರ್ವನ್.
 ವೀರರೊಳ್ ವೀರಂಗೆ, ರುದ್ರಾವತಾರಂಗೆ
ಸೇವೆಯನ್ ಮಾಳ್ಪಂ, ಪೂಜೆಯನ್ ಮಾಳ್ಪಂ,"

4) Chorus : "Many things shall mortals learn by seeing: but, before he sees, *noman may read the future, or his fate.*"

ಮೇಳನಾಯಕನ್ : **"ಇಂದೇನೊ, ಮುಂದೇನೊ, ಮುನ್ನೆ ಆಳ್ ಕಾಣನ್.**
ಬಂದುದನೆ ಕೊಂಡುಂಡು ತಾಳ್ದವನೆ ಜಾಣನ್...."

ಮೂಲದ ಅನೇಕ ವಿವರಗಳನ್ನು ಪ್ರಸಂಗಾನುಗುಣವಾಗಿ ಕೈಬಿಡುತ್ತಾರೆ, ಬದಲಾಯಿಸುತ್ತಾರೆ, ಹೊಸ ಮಾತುಗಳನ್ನು ಸೇರಿಸುತ್ತಾರೆ, ಕಥಾನಕಕ್ಕೆ ಅನುಗುಣ

ವಾಗಿ ಪಾತ್ರಗಳ ಹೆಸರುಗಳನ್ನು ತಂದು ಸೇರಿಸುತ್ತಾರೆ, ಭಾರತೀಯ ಸಂಸ್ಕೃತಿಗೆ ಅನುಗುಣವಾದ ಮಾರ್ಪಾಟುಗಳನ್ನೂ ಮಾಡುತ್ತಾರೆ-ಉದಾ: "ಗಂಗೆಗೊರ್ವನ್ ಪರಿಗೆ ಅಗ್ನಿಗಿ ಸ್ನೋರ್ವನ್" ಇತ್ಯಾದಿ-ಹೀಗೆ ಮಾಡುವುದರ ಮೂಲಕ ನಮ್ಮ ಪರಿಸರದಲ್ಲಿಯೇ ಸಹಜವಾಗಿ ನಾವು ಕಾಣಬಹುದಾದಂಥ ಚಿತ್ರಗಳನ್ನೆ ಮುಂದಿರಿಸುತ್ತ ಹೋಗುತ್ತಾರೆ.

ಮೂಲನಾಟಕದಲ್ಲಿ ಬರುವ ಯಾವೊಂದು ಸುಂದರ ಸೂಕ್ತಿಯಾಗಲಿ, ಸಂವಾದವಾಗಲಿ, ವರ್ಣನೆಯಾಗಲಿ ಶ್ರೀಯುವರ ರಸದೃಷ್ಟಿಗೆ ಬೀಳದೆ ಹೋಗುವುದಿಲ್ಲ. ಅತ್ಯಂತ ಸಹಜವಾದ ರೂಪದಲ್ಲಿ ಅವನ್ನು ಅಳವಡಿಸಿಕೊಂಡು ಬಿಡುತ್ತಾರೆ. ಉದಾಹರಣಾರ್ಥವಾಗಿ ಇಂಥ ಒಂದೆರಡು ಪ್ರಸಂಗಗಳನ್ನು ನೋಡಬಹುದು:

1) "Well, all is possible when a god contrives."
ಅನು: "ಬಗೆಯೆ ದೇವತೆ ಆಮದಾಗದೋ!"

2) "what, thou askest me of that accursed fox?"
ಅನು: "ಏನಾದನ್ ಆ ಗುಳ್ಳೆನರಿ ಎಂದು ಕೇಳ್ದಿಯಾ?"

3) "In all else, Athena, I say, have thy will; but his doom shall be none but this."
ಅನು: "ಮತ್ತೇನೆ ಕೇಳ್. ರುದ್ರ. ಕೊಟ್ಟಪೆನ್. ಇಂದೊಂದಿಲ್ಲಂ! ಇಂತೆ ಸಾಯಲ್‌ವೇಳ್ಕುಂ ಆ ತಂತ್ರಿ."

4) "For a day can humble all human things, and a day can lift them up; but the wise of heart are loved of the gods, and the evil are abhorred."
ಅನು: "ಒಂದು ಪಗಲ್ ಎತ್ತುವುದು, ಒಂದು ಪಗಲ್ ಉರುಳಿಪುದು ಮಾನುಷಮನ್. ಮಿತಿಯಱಿದು ನೆಗಟ್ವಿರ್ಗೆ
ದೇವರ್ಕಳ್ ಒಸೆದಪರ್-ಮುಳಿದಪರ್‌ಮಿಕ್ಕರನ್."

5) "silence graces women"
ಅನು: "ಬಾಯ್ ಮುಚ್ಚಿರಲ್ ಚೆಲ್ವು ಪೆಣ್..."

6) "cure not ill by ill."
ಅನು: "ಮರ್ದಲ್ತು ಪೊಲೆಗೆ ಪೊಲೆ."

7) "Speak no proud word: seest thou not to
What a plight thou hast come."
ಅನು: "ಸೊರ್ಕು ನುಡಿ ನುಡಿಯದಿರ್. ಕಾಣದೇ ಈ ಪಾಡು?"

8) "but if a god send harm, verily e'en the base man can elude the worthier."

ಅನು : "ದೈವಂ ತಪ್ಪಾಗಿ ನಡಸುವೊಡೆ, ಕಲಿ ಎಡಪುವನ್,
ಪೇಡಿ ಬರ್ದುಕುವನ್, ನಗುವನ್."

9) "The Gifts of enemies are no gifts, and bring no good."

ಅನು : "ಪಗೆಯ ಮೆಚ್ಚೊಂದು ಮೆಚ್ಚಲ್ತು, ಒಳ್ಳಿತಾಗದು."

10) "For to most men the haven of friendship is false."

ಅನು : "ಮನುಜಂಗೆ ಸ್ನೇಹವೆಂಬುದು ಪುಸಿಯ ನಚ್ಚು."

ಮೂಲದಲ್ಲಿ ಗ್ರೀಕರಿಗ ಪ್ರಿಯವಾದ ಸೆಲಾಮಿಸ್‌ನ ಸುಂದರವಾದ ವರ್ಣನೆ "O famous Salamis, thou hast thy happy seat among the waves that lash thy shore .." ಎಂದು ಮೊದಲಾಗಿ ಕಾಣಿಸಿಕೊಳ್ಳುವ ಭಾಗದಲ್ಲಿ ಶ್ರೀಯವರ ಹೃದಯದಲ್ಲಿ ಅಡಗಿರುವ ಕವಿ ಚೇತನ ಗರಿಗೆದರಿ ಬನವಾಸಿಯ ಮನಮೋಹಕ ವರ್ಣನೆಯನ್ನು ಸೂರೆ ಗೊಡುತ್ತದೆ : ಆ ಮೂಲಕ ಕಥಾನಕ್ಕೆ ಸ್ಥಳೀಯ ಬಣ್ಣವನ್ನು ಲೇಪಿಸಿ ಕಂಗೊಳಿಸುವಂತೆ ಮಾಡುತ್ತದೆ. ಆ ವರ್ಣನೆ ಹೀಗಿದೆ :

"ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖದೊಱತೆಯ ಬನವಾಸೀ,
ಬಳಿದಲೆದಾ ಕಾನ್‌ಮಲೆಗಳನ್ ಆನ್ ಮಱೆವೆನೆ, ಬನವಾಸೀ !
ಭಾರತದೀ ಸುೞಿಗಾಳಿಗೆ ಸಿಲ್ಕುತೆ ನಾನ್ ತರಗಾದೆನ್ ;
ಪೆಱೆ ತುಂಬುತೆ, ಪೆಱೆ ತೇಯುತೆ, ಮನೆಗಾಣದೆ ಬಡವಾದೆನ್ ;
ನಿನ್ನನೆ ನೆನೆನೆನೆದೋ ತಾಯ್, ಪಂಬಲಿಸುವ ನೋವೆಂದೇ !
ಇನ್ನೆನಗೇನ್ ಆಸೆಗಳೋ, ಪಾರ್ವುದು ನಾನ್ ಸಾವೊಂದೇ !"

ಇದೇ ರೀತಿ, ಸಂದರ್ಭಗಳು ಅವಕಾಶವನ್ನೊದಗಿಸಿದಾಗ, ಶ್ರೀಯವರ ಕವಿ ಚೇತನ ತನ್ನ ಕಾಣ್ಕೆಯ. ಸುಂದರ ಸೂಕ್ತಿಗಳನ್ನು ಮೂಲದೊಡನೆ ಬೆಸೆದು ನಿಲ್ಲಿಸುತ್ತದೆ. ಸನ್ನಿವೇಶ ಮತ್ತಷ್ಟು ಪ್ರಭಾವಶಾಲಿಯಾಗುವಂತೆ ಮಾಡುತ್ತದೆ. ಉದಾಹರಣೆಗೆ, ಭೀಮ ಮತ್ತು ಏಕಲವ್ಯರ ಈ ಸಂವಾದವನ್ನು ನೋಡಿ :

ಮೂಲ : Menelaus : "The bowman, me thinks, hath no !ittle pride."

Teucer : "Even so; 'tis no sordid craft that I profess."

ಅನು : ಭೀಮನ್ : "ಏನ್ ಬಿಂಕಂ, ಕಾಡ ಬಿಲ್ಲಾೞಿನದು !"

ಏಕಲವ್ಯನ್ : "ಗದೆ ಬೀಸುವಂತಲ್ತು, ಭೀಮ, ಬಿಲ್ವೆಸನ್,
**ನುಡಿಯಿಸಲ್ ಬಲ್ಲಂಗೆ ಬಿಲ್ಲೊಂದು, ನೋಣ್**
**ಬೀಣೆಯೊಂದು."**

ಅಂತೆಯೇ ಮೇಳನಾಯಕನ ಮಾತಿನಲ್ಲಿ ಬರುವ,

"ಕರ್ಮಮ್ ಈ ಪರಿ ಮಱುಗೆ ಮಱು ಇಕ್ಕುತಿರ್ಕುಂ.
ಕ್ಷಮೆಯಿಂದೆ ಸಮೆಯದಿರೆ ಮಱುಕೊಳಿಸುತಿರ್ಕುಂ"

ಎಂಬ ಮಾತುಗಳು ಮೂಲದಲ್ಲಿಲ್ಲದ, ಶ್ರೀಯವರ ಮೌಲಿಕ ಸುಭಾಷಿತ.

ಮೂಲವನ್ನು ಅಲ್ಲಲ್ಲಿ ಶ್ರೀಯವರು ಸಂಕ್ಷೇಪಿಸಿರುವುದುಂಟು ; ಅಗತ್ಯಾನುಗುಣವಾಗಿ ವಿಸ್ತರಿಸುವುದೂ ಉಂಟು. ಆದರೆ, ಇಲ್ಲೆಲ್ಲ ಅವರ ಔಚಿತ್ಯಪ್ರಜ್ಞೆ ಜಾಗೃತವಾಗಿ ಉಳಿದುಕೊಂಡಿದ್ದು, ಒಟ್ಟಿನಲ್ಲಿ ನಮಗೆ ಮನಮೋಹಕ ಸೃಷ್ಟಿಯೊಂದನ್ನ ನೀಡಿದೆ.

ಅಶ್ವತ್ಥಾಮನ ಪಾತ್ರದಲ್ಲಿ ಮಾಡಿರುವ ಬದಲಾವಣೆಗಳು, 'ಅಶ್ವತ್ಥಾಮನ್' ಆ ಕಾಲದಲ್ಲಿ ಉಂಟುಮಾಡಿದ ತೀಕ್ಷ್ಣ ಪ್ರತಿಕ್ರಿಯೆ, ನಡೆದ ವಾದವಿವಾದಗಳು, ಕೃಷ್ಣನನ್ನು ಚಿತ್ರಿಸಿರುವ ಬಗೆ – ಇವೇ ಮೊದಲಾದ ಅಂಶಗಳನ್ನಾಗಲೀ, 'ಅಶ್ವತ್ಥಾಮನ್' ನಾಟಕದ ಇತರ ಸಾಧನೆಗಳನ್ನಾಗಲೀ ನಾನಿಲ್ಲಿ ಪ್ರಸ್ತಾವಿಸಲು ಹೋಗಿಲ್ಲ. ಅನುವಾದದ ಒಂದು ಪ್ರಕಾರವಾಗಿ ಅಶ್ವತ್ಥಾಮನ್ ಹೇಗೆ ಒಂದು ಅಭೂತಪೂರ್ವ ಸೃಷ್ಟಿಯಾಯಿತು, ತೀಕ್ಷ್ಣ ಸಂವೇದನೆಯ ಕವಿ, ಅಧ್ಯಯನ ಶೀಲನಾದ ವಿದ್ವಾಂಸ ಹಾಗೂ ಪ್ರತಿಭಾವಂತನಾದ ಅನುವಾದಕ–ಈ ಮೂರು ಶಕ್ತಿಗಳ ಸಂಗಮದಿಂದ ಹೇಗೆ ಒಂದು ಅಪೂರ್ವಕಳೆಯ ಕಲಾಕೃತಿಯೊಂದು ಮೂಡಿತು ಎಂಬುದನ್ನಷ್ಟೆ ಇಲ್ಲಿ ನಿರೂಪಿಸಲು ಪ್ರಯತ್ನಿಸಿದ್ದೇನೆ. ಶ್ರೀಯವರು ಇಚ್ಛಿಸಿದ್ದರೆ ಸೊಫೋಕ್ಲೀಸನ ಈ ನಾಟಕದ ಯಥಾವತ್ತಾದ, ಸೃಜನಾತ್ಮಕವಾದ ಭಾಷಾಂತರವನ್ನೇ ಕೊಡಬಹುದಾಗಿತ್ತು ಹಾಗೂ ಹಾಗೆ ಮಾಡುವುದು ಅವರಿಗೆ ಸುಲಭವೂ ಆಗುತ್ತಿತ್ತು. ಆದರೆ, ಹಾಗೆ ಮಾಡದೆ, ರೂಪಾಂತರ ವಿಧಾನದಲ್ಲಿ ಅನುವಾದಕ ವಹಿಸಬಹುದಾದಷ್ಟು ಸ್ವಾತಂತ್ರ್ಯವನ್ನೇ, ಔಚಿತ್ಯಪೂರ್ಣವಾಗಿ ಬಳಸಿಕೊಂಡು ಅನುವಾದಗಳ ಇತಿಹಾಸದಲ್ಲಿ–ಅಷ್ಟೇ ಏಕೆ, ಕನ್ನಡ ನಾಟಕ ಸಾಹಿತ್ಯದ ಇತಿಹಾಸದಲ್ಲಿ — ಅಜರಾಮರವಾಗಿ ಉಳಿಯುವಂಥ ಅಪೂರ್ವ ಕೃತಿಯೊಂದನ್ನೇ ಕನ್ನಡಿಗರಿಗೆ ನೀಡಿ ಕೃತಾರ್ಥರಾಗಿದ್ದಾರೆ. ಕಾಲವನ್ನೇ ಮೀರಿ ನಿಂತು ಅದು ತನ್ನ ಸತ್ವವನ್ನೇ ಸಾರಿದೆ. ಇಂಥ ಕೃತಿ ದೊರೆತದ್ದು ಕನ್ನಡದ ಪುಣ್ಯ ಎಂದರೂ ಅತಿಶಯೋಕ್ತಿಯಾಗಲಾರದು.

## ಪಾರಸಿಕರು

ಗ್ರೀಕ್ ನಾಟಕಗಳ ಬಗೆಗಿನ ಬಿ. ಎಂ. ಶ್ರೀಯವರ ವಿಶೇಷ ಒಲವು ಈ ಬಾರಿ ಅವರನ್ನು ಈಸ್ಕಿಲಸ್ ಮಹಾಕವಿಯತ್ತ ಎಳೆದು ತಂದಿತು. ಇಂಗ್ಲಿಷ್ ಗೀತಗಳನ್ನು

ಅನುವಾದಕ್ಕೆ ಆಯುವಾಗ ಶ್ರೀಯವರು ಯಾದೃಚ್ಛಿಕವಾಗಿ ವರ್ತಿಸಿದಂತೆಯೇ. ಈಸ್ಕಿಲಸ್ ಮಹಾಕವಿಯ ಕೃತಿಯೊಂದನ್ನು ಅನುವಾದಕ್ಕೆ ಆಯ್ದುಕೊಳ್ಳುವಾಗಲೂ ಉತ್ತಮ ಆಯ್ಕೆಯ ಅಭಿರುಚಿಯನ್ನು ತೋರಲಿಲ್ಲ ಎಂದು ವಿಮರ್ಶಕರು ಆಕ್ಷೇಪಿಸಿರು ವುದುಂಟು : ಆಶ್ಚರ್ಯಪಟ್ಟಿರುವುದುಂಟು : ಸೋಫೋಕ್ಲೀಸನ 'ಅಯಾಸ್' (ಅಥವಾ 'ಎಜಾಕ್ಸ್') ನಾಟಕದ ವಿಷಯದಲ್ಲಿ ಮಾಡಿದಂತೆ, ಇದನ್ನು ಏಕೆ 'ರೂಪಾಂತರ'ದ ರೂಪದಲ್ಲಿ ಕೊಡಲು ಯತ್ನಿಸಲಿಲ್ಲ ಎಂದು ಪ್ರಶ್ನಿಸಿರುವುದೂ ಉಂಟು.

'ಪಾರಸಿಕರು' ಈಸ್ಕಿಲಸನ ಉತ್ತಮ ಕೃತಿಯೇ ಅಲ್ಲವೆಂಬುದರಲ್ಲಿ ಅನುಮಾನ ವೇನೂ ಇಲ್ಲ. ಅದನ್ನು ನೋಡಿದಾಗ "*Persae* is unredeemed weeping and wailing, breast beating and lachrymation ; it is a long-drawn plaintive dirge rather than an emboldening and inspiriting tragic, drama" ಎಂಬ ಅನುಭವ ಓದುಗರಿಗೆ ಉಂಟಾಗುವುದು ಸಹಜವೆ. ಇಂಥ ಒಂದು ಕೃತಿಯನ್ನು ಅನುವಾದಕ್ಕೆ ಆಯ್ದುಕೊಳ್ಳು ವುದಕ್ಕೆ ಬಿ. ಎಂ. ಶ್ರೀಯವರ ಪ್ರಯೋಗಶೀಲತೆಯ ಒಲವೇ ಕಾರಣವಾಗಿದ್ದರ ಬೇಕೆಂದು ನಾನು ಭಾವಿಸಿದ್ದೇನೆ. 'ಇಂಗ್ಲಿಷ್ ಗೀತಗಳ' ಮೂಲಕ ಹೊಸ ದಿಗಂತ ಗಳನ್ನು ತೆರೆದು ತೋರಿದ ಹಾಗೂ 'ಅಶ್ವತ್ಥಾಮನ್' ಮೂಲಕ ರೂಪಾಂತರ ಅನು ವಾದ ವಿಧಾನದ ಅತ್ಯುತ್ತಮ ಆದರ್ಶವನ್ನು ಸ್ಥಾಪಿಸಿದ ಶ್ರೀಯವರು ಹೊಸ ಬಗೆಯ ಐತಿಹಾಸಿಕ ಕೃತಿಯೊಂದನ್ನು ಸೃಜನಾತ್ಮಕ ಸ್ವರೂಪದಲ್ಲಿ ಕನ್ನಡಿಸಿಕೊಡುವ ಪ್ರಯತ್ನವನ್ನು ಕೈಗೊಳ್ಳಲು ಇಚ್ಛಿಸಿದಾಗ ಈಸ್ಕಿಲಸನ 'ಪಾರಸಿಕರು' ಅವರ ಗಮನ ವನ್ನು ಸೆಳೆಯಿತು. ಉತ್ತಮೋತ್ತಮ ಕೃತಿಯನ್ನೇ ಆಯ್ದುಕೊಳ್ಳಬೇಕೆಂಬ ಛಲವೇನೂ ಅವರಲ್ಲಿ ಇದ್ದಂತೆ ತೋರುವುದಿಲ್ಲ. *persae* (ಅಥವಾ *persians*) ನಂಥ ಕೃತಿ ಯೊಂದಿಗೆ ತಮ್ಮ ಪ್ರಯೋಗವನ್ನು ಆರಂಭಿಸಬಹುದೆಂದು ಅವರು ಭಾವಿಸಿದರೇನೊ. ಮಾಡಿದ್ದನ್ನೆ ಮಾಡುವ ಜಾಯಮಾನದವರು ಅವರಾಗಿಲ್ಲದೆ ಇದ್ದುದರಿಂದ, ಮತ್ತೆ ಬಹುಶಃ *persae* ಯನ್ನು ರೂಪಾಂತರವಾಗಿ ಮುಂದಿರಿಸುವ ಯೋಜನೆಯನ್ನು ಅವರು ಇಟ್ಟುಕೊಳ್ಳಲಿಲ್ಲವೇನೊ. ಅಥವಾ, ಪೌರಾಣಿಕ ಸ್ವರೂಪದ 'ಅಯಾಸ್' ಅನ್ನು ರೂಪಾಂತರಿಸಿದಂತೆ, *persae* ಯನ್ನು ರೂಪಾಂತರಿಸುವುದು ಉಚಿತವಲ್ಲ ವೆಂದೂ ಅವರಿಗೆ ಅನ್ನಿಸಿರಬಹುದು. ಏಕೆಂದರೆ *persae* ಹೇಳಿ ಕೇಳಿ ಒಂದು ಐತಿಹಾಸಿಕ ನಾಟಕ. ಹೀಗಾಗಿ "ಶ್ರೀಯವರು ಇಲ್ಲಿಯ ಹೆಸರುಗಳನ್ನೂ ಆವರಣ ವನ್ನೂ ಬದಲಾಯಿಸುವ ಸ್ವಾತಂತ್ರ್ಯವನ್ನು ವಹಿಸಲಿಲ್ಲ." ಅಂತೂ, ಕಾರಣಗಳು ಏನಾದರೂ ಆಗಿರಲಿ, ಶ್ರೀಯವರು ಮತ್ತೊಮ್ಮೆ ಅನುವಾದಕರಾಗಿ ಕಾಣಿಸಿ

ಕೊಂಡಿದ್ದಾರೆ. ಅಷ್ಟೇ ಅಲ್ಲ ಇದು ಸರ್ಜನಶೀಲ ಅನುವಾದಕರಾಗಿ ಅವರ ಕೊನೆಯ ಮಹತ್ವದ ಪ್ರಯತ್ನವೂ ಹೌದು.

'ಪಾರಸಿಕರು' ಶ್ರೀಯವರ ಗ್ರೀಕ್ ಭಾಷಾ–ಸಾಹಿತ್ಯಗಳ ಪರಿಚಯವನ್ನು ಸ್ಪಷ್ಟಪಡಿಸುವ ನಾಟಕವೂ ಆಗಿದೆ. ಈ ನಾಟಕದಲ್ಲಿನ ಪಾತ್ರಗಳ ಹೆಸರನ್ನು ಇಂಗ್ಲಿಷ್ ಮೂಲದಿಂದ ತೆಗೆದುಕೊಳ್ಳದೆ ಬಹುಶಃ ಗ್ರೀಕ್ ಮೂಲದಿಂದಲೇ ತೆಗೆದುಕೊಂಡಿರ ಬಹುದೆಂಬುದನ್ನು ಇಂಗ್ಲಿಷ್ ಉಚ್ಚಾರಣೆ ಹಾಗು ಶ್ರೀಯವರು ಅಂಗೀಕರಿಸಿರುವ ಉಚ್ಚಾರಣೆಗಳ ನಡುವಣ ವ್ಯತ್ಯಾಸದಿಂದ ಅರಿಯಬಹುದಾಗಿದೆ.

| ಇಂಗ್ಲಿಷ್ ಉಚ್ಚಾರಣೆ | ಶ್ರೀಯವರು ಅಂಗೀಕರಿಸಿರುವಂತೆ |
|---|---|
| Atossa (ಅತೋಸ) | ಹುತೌಶ |
| Darius (ಡೇರಿಯಸ್) | ದರ್ಯವುಷ್ |
| Xerxes (ಕ್ಸರ್ಕ್ಸಸ್) | ಕ್ಷಯಾರ್ಷ |

ಈ ನಾಟಕವನ್ನು ಕೈಗೆತ್ತಿಕೊಳ್ಳುವ ಹೊತ್ತಿಗೆ ಅನುವಾದಕರಾಗಿ ಶ್ರೀಯವರು ಸಿದ್ಧಹಸ್ತರೆನ್ನಿಸಿಕೊಂಡಿದ್ದುದರಿಂದ, ಈ ನಾಟಕದ ಅನುವಾದವೂ ತುಂಬ ಸುಂದರ ವಾಗಿಯೇ ಮೂಡಿಬಂದಿದೆ. ಆದರೆ, 'ಅಶ್ವತ್ಥಾಮನ್' ಕಡೆಗೆ ವಿಮರ್ಶಕರ ಗಮನ ಹರಿದಷ್ಟು 'ಪಾರಸಿಕರ' ಕಡೆಗೆ ಹರಿದಿಲ್ಲ. ನಾಟಕದ ಗುಣಮಟ್ಟವೂ ಇದಕ್ಕೆ ಕಾರಣ ವಾಗಿರಬೇಕು. ಆದರೂ, ಶ್ರೀಯವರು ತಾವು ಆಯ್ದುಕೊಂಡ ಕೃತಿಗೆ ಅನ್ಯಾಯ ವನ್ನೇನೂ ಎಸಗಿಲ್ಲವೆಂಬುದನ್ನು, ತೌಲನಿಕ ಅಧ್ಯಯನ ನಿಸ್ಸಂದೇಹವಾಗಿ ಸ್ಪಷ್ಟ ಪಡಿಸುತ್ತದೆ.

ಮೊದಲಿಗೆ ಮೇಳದವರ ಸೂಚನೆ ಹಾಗೂ ಅದಕ್ಕೆ ಹುತೌಶ ತೋರುವ ಪ್ರತಿಕ್ರಿಯೆಯ ಭಾಗಗಳನ್ನು ನೋಡಬಹುದು. ಮೂಲ ಹೀಗಿದೆ :

Chorus : Words of Counsel, reverend mother, neither to
affright thy heart
Nor to hearten thee unduly, would we speak.
Even as thou art,
Go and pray the Gods to extinguish aught
that thou has seen of ill ;

* * *

Atossa : Surely with a loyal meaning to myself
and house and son,
Thus interpreting my vision, thou the
auspice hast begun.
May full-filment crown thy pre'sage! I,
within my chambers hid,

To the gods and loved ones vanished
will perform what thou dost bid.
Yet one doubt, dear friends, resolve me.
Tell me, persians, if yè may,
Where about on Earth's wide bosom
Athens lies, as travellers say.''

ಕಾವ್ಯತ್ವದ ಒರತೆಯೇನೂ ಉಕ್ಕದಿರುವಂಥ ಹಾಗೂ ಕೇವಲ ಒಣಮಾಹಿತಿಯನ್ನು ಒಳಗೊಂಡಿರುವಂಥ ಈ ಭಾಗವನ್ನು ಅನುವಾದಿಸುವಲ್ಲಿ ಶ್ರೀಯವರು ಸಂಕ್ಷೇಪ ವಿಧಾನವನ್ನು ಅನುಸರಿಸಿದ್ದಾರೆ : ಆದರೂ ಪೆಚ್ಚಿನ ವಿವರಗಳು, ಯಾವುವೂ ತಪ್ಪಿಹೋಗದಂತೆ ನೋಡಿಕೊಂಡಿದ್ದಾರೆ- ಎಂಬುದನ್ನು ಅವರ ಈ ಭಾಗದ ಅನುವಾದ ಸ್ಪಷ್ಟಪಡಿಸುತ್ತದೆ :

ಮೇಳ : "ನಾವು ಪೇಳ್ವುದಿನಿತೆ ತಾಯೆ-ಬೇಡ ಪೆಚ್ಚು ಪೆದರಿಕೆ :
ಪೆಚ್ಚು ನೆಚ್ಚಿಕೆಯುಂ ಬೇಡ : ಪೋಗು ಬೇಡು ದೇವರನ್-
ಕೇಡ ಕೆಡಸಿ, ಒಳ್ಪನಿತ್ತು....ಮಾಡಲೆಂದು ಶ್ರದ್ಧೆಯಿಟ್ಟು ಬೇಡುವ."

* * *

ಹುತೌಶ : ಒಳ್ ಬಗೆಯೊಳು. ಮಗನ, ನನ್ನ ಮನೆಯ. ಹರಸಿ ನುಡಿದಿರಿ.
ನಿಮ್ಮ ಪ್ರರುಳು ನಡೆಯಲಣ್ಣ. ಹರಕೆ ಇಡಲು ತೆರುಳುವೆ.
ತಣಿದು ದೇವತೆಗಳು ಪಿತೃಗಳೆಮ್ಮ ಪೊರೆದು ತಣಿಸಲಿ-
ಒಂದು ಮಾತು, ಓ ಕೆಳೆಯರೆ : ಎತ್ತಲಿಹುದು ನೆಲದಲಿ,
ಆ ಪೆಸರಿನ. ಆ ಪೆರ್ಜಿನ ಅಥೆನ ಪುರಿತಾನದು."

ಕೆಟ್ಟ ಸುದ್ದಿಯನ್ನು ತಳಮಳಿಸುವ ಹುತೌಶಳ ಬಗೆಯನ್ನು ಚಿತ್ರಿಸುವ ಈ ಸನ್ನಿವೇಶವನ್ನು ನೋಡಿ :

''I am stunned to silence ; for such weight of woe.
Baffles expression, making question dumb.''

ಮೂಲದಷ್ಟೇ ಬಿಗಿಯಾದ ಹಾಗೂ ಪರಿಣಾಮಕಾರಿಯಾದ ರೀತಿಯಲ್ಲಿ ಶ್ರೀಯವರು ಇದನ್ನೆ ಕನ್ನಡಿಸಿದ್ದಾರೆಂಬುದನ್ನು ಇದರ ಅನುವಾದ ನಮಗೆ ಖಂಡಿತವಾಗಿಯೂ ಮನಗಾಣಿಸುತ್ತದೆ :

"ಸಾಕು ಸಾಕೀ ಅಳಲು–ಈ ಪರಿಯ ಕೇಡಿಂಗೆ
ಮಾತು ಹೊಮ್ಮದೆ ಬಿಗುತು ಮೂಗಿಯಾದನು ನಾನು."

ದೈವಬಲ ಇಲ್ಲವಾಗಿದ್ದುದರಿಂದ ಯುದ್ಧದಲ್ಲಿ ಸೋಲು ಅನಿವಾರ್ಯವಾಯಿತೆಂಬುದನ್ನು ಚಿತ್ರಿಸುವ ದೂತನ,

"For numbers, be assured, our Asian fleet
Lacked not pre-eminence. The Greeks that day
Had *ten times thirty ships*, Where of were ten
Renowned for swiftness. Xerxes, well I wot,
*Led full a thousand,*—and, of noted speed,
Two hundred sail and seven. From such account
Judge if we seemed un equal for that fight.
Some power unearthly swayed the balance there
To countervail advantage for our loss."

ಈ ವರದಿಯನ್ನು ಶ್ರೀಯವರು ಎಷ್ಟು ಸುಂದರವಾಗಿ ಕನ್ನಡಿಸಿದ್ದಾರೆಂಬುದಕ್ಕೆ ಬೇರೆ ಸಾಕ್ಷಿ ಬೇಕೆ ? ಭಾವವನ್ನು ಹಿಡಿದು ಅವರ ಅನುವಾದ ಹೇಗೆ ಸಾಗುತ್ತದೆಂಬುದಕ್ಕೆ ಈ ಭಾಗದ ಮೊದಲ ಪಂಕ್ತಿಯ ಅನುವಾದವೇ ಸಾಕು :

"ಸಂಖ್ಯೆಯಲಿ ಗೆಲ್ಲುವೊಡೆ, ಓ ತಾಯ್, ನಮ್ಮದೇಗೆಲ್ಲಂ !
ಹೆಲನರಿಗೆ ಮುನ್ನೂರು ಹಡಗುಗಳು, ಹತ್ತು
ಅದರೊಳಗೆ ಬಲುವೇಗ **ಒಂದು ನೂರರನೂರು** ಶ್ರೀಕ್ಷಯಾಕ್ಷಗೆ,
ಕಡುವೇಗ ಇನ್ನೂರು ಹಾಯಿಗಳು, ಮೇಲೇಳು, ಸಾಲದೇ ನೋಡು.
ಕಾಳಗಕೆ ಈ ಮೊತ್ತ ; ಆಳ್ ಮಾಳ್ಪುದೆಲ್ಲವುಂ ಮಾಡಿದೆವು. ದೈವಂ
ಕೆಡಿಸಿದುದು ಸಮಯಾಗಿ ತೂಗದೆಯೆ ತ್ರಾಸಿಯನ್. ಪಲ್ಲಸ್ ಅಥೀನೆ
ಕಾಪಾಡಿದಳು ತನ್ನ ಪೊಳಲನ್."

'ನೂರರನೂರು' ಎಂಬ ಮಾತಿನಲ್ಲಿ ಸ್ವಲ್ಪ ಗೊಂದಲವಿದೆಯಾದರೂ, ಉಳಿದಂತೆ ಮೂಲದ ಯಥಾವತ್ತಾದ ಅನುವಾದ ಇಲ್ಲಿದೆ. "ಆಳ್ ಮಾಳ್ಪುದೆಲ್ಲವುಂ ಮಾಡಿದೆವು" ಎಂಬ ವಾಕ್ಯವೊಂದು ಹೊಸದಾಗಿ ಬಂದು ಸೇರಿಕೊಂಡಿದೆ ಎನ್ನಬಹುದು. ಆದರೆ ಅದು ಅಲ್ಲಿಯ ಭಾವದ ಧಾಟಿಗೆ ವಿರುದ್ಧವಾಗಿಯೇನೂ ಇಲ್ಲ ; ಬದಲಾಗಿ ಆ ಭಾವನೆಯನ್ನು ಮತ್ತಷ್ಟು ಬಲಪಡಿಸುವಂಥವೇ ಆಗಿದೆ.

ದೂತನ "Never here to fore,
Died in one day so vast a number of men."

ಎಂಬ ಮಾತನ್ನು, "ಅನಿತೊಂದು ಜನಮೊಂದುದಿವುವರೆಗೆ ಸತ್ತುದನ್ **ಕಾಣನಾ ಸೂರ್ಯನ್** ಎಂದು ಅನುವಾದಿಸಿಕೊಂಡಿರುವಲ್ಲಿಯೂ ಇದೇ ಅಂಶ ಎದ್ದು ಕಾಣುತ್ತದೆ. ಶ್ರೀಯವರ ಕಾವ್ಯ ಹೃದಯದ ಸಂಸ್ಪರ್ಶಪಡೆದು ನೀರಸ ವರದಿಯೂ ಪರಿಣಾಮಕಾರಿ ನುಡಿಯಾಗಿ ಪರಿಣಮಿಸಿದೆ. ಇಂಥಲ್ಲಿ ಚೇತನಾರೋಪಣವೂ ಅಪೇಕ್ಷಣೀಯವೆಂದೇ ಮನಸ್ಸು ನುಡಿಯುತ್ತದೆ.

ಪಾರಸಿಕರ ಪಡೆ ಶತ್ರುಗಳ ನಡುವೆ ಸಿಕ್ಕಿಕೊಂಡು ಹೇಗೆ ನಲುಗಿತು ಎಂಬುದರ ಕರುಳಿರಿಯುವ ಚಿತ್ರಣ ಎಷ್ಟು ಸಹಜವಾಗಿ ಬಂದಿದೆ :

> "ಅಲ್ಲಿ ಆ ರಾಯಗುವರನ್ ನಿಲಿಸಿದನ್ ಕೈಬೀಟಿ—ನಮ್ಮವರು.
> ....**ಮುಂದಪ್ಪುದನ್ ತಪ್ಪುಗಂಡನ್...**
> ಸಂಜೆ ಕವಿಯುದ ಮುನ್ನ, ಮೈಜೋಡುಗಳ ತೊಟ್ಟು, ಹಡಗಿಂದ ನೆಗೆದು
> ದ್ವೀಪವನ್ ಸುತ್ತಿರಿದು ಮುತ್ತಿದರ್ ಎತ್ತತಿರುಗಲು ಮಿಲ್ಲದೆಮ್ಮೋರ್ ;
> ಜೀರುಗಲ್ಗಳ್, ಜಿಲ್ಲ ತಿರುಮಿಂದ ಜೀವಮುನುಣಲ್ ಬರ್ಪ ಕೋಲ್ಗಳ್
> ನೆರನಿರೆಯೆ, ತೊಪ್ಪತೊಪ್ಪನೆ ಕುಪ್ಪೆಯೊಟ್ಟಿದರ್...."

ಮೂಲದ 'Helpless prey' 'Badly he saw futurity' ಮೊದಲಾದ ಮಾತುಗಳೆಲ್ಲ ಎಷ್ಟು ಪ್ರಭಾವಪೂರ್ಣವಾಗಿ ಆಳವಟ್ಟಿವೆ ಎಂಬುದನ್ನು ವಿವರಿಸಲೇ ಬೇಕಾಗಿಲ್ಲ.

ಅನುವಾದ ಒಟ್ಟಿನಲ್ಲಿ ಹೀಗೆ ಸುಂದರವಾಗಿಯೇ ಬಂದಿದೆಯಾದರೂ ಅಲ್ಲಲ್ಲಿ ಶ್ರೀಯವರು ವಿಸ್ತಾರಾನುವಾದಕ್ಕೂ ಎಡೆಗೊಟ್ಟಿದ್ದಾರೆ. ಭಾವ ಮೈದುಂಬಿ ಬರ ಬೇಕೆಂಬ ಅವರ ಆಶಯುವೇ ಇವಕ್ಕೆ ಕಾರಣವಾಗಿರಬೇಕೆಂದು ತೋರುತ್ತದೆ. ಉದಾಹರಣೆಗೆ, ಪಡೆ ಸಶಿಸಿದುದರ ಬಗೆಗಿನ ದೂತನ "Meantime the escaping army suffered loss...." ಎಂಬ ವರದಿ ಶ್ರೀಯುವರಲ್ಲಿ,

> "ದಿನದಿನಕೆ ಸೋರಿದುದು ಸಿರಿಯುಪಡೆ, **ಹಿಂದೆ ಬೆನ್ನಟ್ಟುವರ್**
> **ಪಗೆವರ್ : ಮೇಲೆರಗಿ ಕುಟ್ಟುವರು.**"

ಎಂದೆಲ್ಲ ವಿಸ್ತಾರವನ್ನು ಪಡೆದಿದೆ.

ಕೆಲವೊಮ್ಮೆ ಮೂಲವನ್ನು ಅತಿಯಾಗಿ ಸಂಕ್ಷೇಪಿಸಿರುವುದು ಉಂಟು. ಉದಾಹರಣೆಗೆ,

> "Know thou, the grief of griefs is yet to come.
> Such dire calamity befell them there,
> That more than twice out-weighed what hath been told."

ಎಂಬುದು "ಇನ್ನು ಮಿರ್ಪುದು ಕೇಳು ; ಕತೆಯೊಳರೆ ಮುಗಿದಿಲ್ಲ ಇಮ್ಮಡಿಯ ದುಃಖ" ಎಂದು ಸಂಕುಚಿತಗೊಂಡಿದೆ ಶ್ರೀಯುವರ ಅನುವಾದದಲ್ಲಿ.

ಅಂತೆಯೇ, ಗೋರಿಯಿಂದೆದ್ದು ಬಂದ ದರ್ಯವುಷ (ನ ಪ್ರೇತ) ಹೇಳುವ ಮಾತುಗಳು ಕೂಡ ಇದೇ ಬಗೆಯ ಸಂಕ್ಷೇಪಕ್ಕೆ ಒಳಗಾಗಿವೆ. ಮೂಲ ಹೀಗಿದೆ :

> "Nay, since your lament hath drawn me upward from my place of rest,
> *Be not awed,* but *clear and briefly let your trouble be expressed*
> *Nor prolong the tale unduly,* wherefore are ye sore distressed."

ಇದೆಲ್ಲ "ಅಂಜಬೇಡ–ಅಳಲಪಾಡು ಕರೆಯೆಬಂದೆ ಕೆಳಗಣೆನ್
ನೀಡು ಹೊತ್ತು ನಿಲ್ಲಲಾರೆ : ಹೇಳಿ ಬೇಗ–ಏನಳಲ್ ?"

ಎಂದು ಕಾಣಿಸಿಕೊಂಡಿರುವಲ್ಲಿ ಭಾವಸಾಂದ್ರತೆ ಸಾಧಿಸಿದೆಯಾದರೂ, ಸಂಕ್ಷೇಪಣ ಪ್ರಶ್ನಾರ್ಹವಾಗಿಯೇ ಉಳಿಯುತ್ತದೆ. ಏಕೆಂದರೆ ಭಾವವೂ ಸೂಕ್ಷ್ಮವಾಗಿ ಬದಲಾದ ಅನುಭವ ಉಂಟಾಗಬಹುದು.

ಹೀಗೆಯೇ ಇನ್ನು ಕೆಲವು ಕಡೆಗಳಲ್ಲಿ ಅಲ್ಪ-ಸ್ವಲ್ಪ ಬದಲಾವಣೆಗಳನ್ನು ಗುರುತಿಸಬಹುದಾಗಿದೆ. ಆದರೆ, ಸಂತೋಷದ ಸಂಗತಿಯೆಂದರೆ, ಮೂಲದ ಆಶಯಕ್ಕೆ ಎಲ್ಲಿಯೂ ಭಂಗವುಂಟಾಗಿಲ್ಲ ಎಂಬುದು.

'ಪಾರಸಿಕರು' ಸಾಹಿತ್ಯಿಕವಾಗಿ ಯಾವ ನೆಲೆ ಬೆಲೆಗಳನ್ನೆ ಪಡೆಯುತ್ತ ದೆಂಬುದು ಸಂದೇಹಾಸ್ಪದವಾಗಬಹುದಾದರೂ, ಅನುವಾದವಾಗಿ ಅದು ಉತ್ತಮ ಗುಣಮಟ್ಟದ ಕೃತಿಯೇ ಆಗಿ ನಿಲ್ಲುತ್ತದೆಂಬುದರಲ್ಲಿ ಸಂದೇಹವಿಲ್ಲ.

'ಇಸ್ಲಾಂ ಸಂಸ್ಕೃತಿ' ಅಂಥ ರೋಚಕ ಬರೆವಣಿಗೆಯನ್ನು ಹೊಂದಿಯೇ ಇಲ್ಲ ವಾದ್ದರಿಂದ, ಅದರ ಅನುವಾದದಲ್ಲಿ ಸಾಹಿತ್ಯಿಕ ಗುಣಗಳನ್ನು ಅಪೇಕ್ಷಿಸುವುದು ಅನುಚಿತವೇ ಆಗುತ್ತದೆ. ಒಟ್ಟಿನಲ್ಲಿ, ಅನುವಾದ ಯಥಾವತ್ತಾಗಿದ್ದು, ಉತ್ತಮ ರೀತಿಯಲ್ಲಿ ಓದಿಸಿಕೊಳ್ಳುತ್ತದೆಂಬುದು ಶ್ರೀಯವರು ಅದರ ಬಗ್ಗೆ ತೋರಿರುವ ಶ್ರದ್ಧೆಗೆ ಸಾಕ್ಷಿಯಾಗಿದೆ.

ಒಟ್ಟಿನಲ್ಲಿ, ಅನುವಾದ ಮಾಧ್ಯಮದ ಮೂಲಕ ಸಾಹಿತ್ಯದಲ್ಲಿ ಕ್ರಾಂತಿಯನ್ನುಂಟು ಮಾಡಿದ, ಪರಿಮಾಣದಲ್ಲಿ ಕಡಿಮೆಯಾದರೂ ಗುಣದಲ್ಲಿ ಉತ್ತಮವಾಗಿರುವ ಅನುವಾದಗಳನ್ನು ನೀಡಿ ಅನುವಾದಗಳಿಗೆ, ಅನುವಾದಕರಿಗೆ ಆದರ್ಶವೊಂದನ್ನು ಮುಂದಿರಿಸಿದ ಅಪರೂಪದ ಸಾಹಿತಿ–ಅನುವಾದಕಾರ ಎಂದು ಬಿ. ಎಂ. ಶ್ರೀಯವರ ಹೆಸರು ಅನುವಾದದ ಇತಿಹಾಸದಲ್ಲಿಯೂ ಕೆಂಡರಣೆಗೊಳ್ಳುತ್ತದೆಂಬುದರಲ್ಲಿ ಅನುಮಾನವಿಲ್ಲ.

# ಬಿ. ಎಂ. ಶ್ರೀ ಅವರ ಕೆಲವು ವಿಚಾರಗಳು

— ಸಿ. ಆರ್. ಶ್ರೀನಿವಾಸ ಅಯ್ಯಂಗಾರ್

'ಶ್ರೀ' ಅವರು ಮಂಡ್ಯ ಜಿಲ್ಲೆಯ ಬೆಳ್ಳೂರಿನವರು. ಬೆಂಗಳೂರಿಂದ ಬರುವಾಗ ದಾರಿಯಲ್ಲಿ ಬೆಳ್ಳೂರಿಗೆ ಹೋಗಲಿಲ್ಲವೇ ಎಂದು ಕೇಳಿದಾಗ ಅವರು ಹೇಳಿದ್ದು: "ಹೆಸರಿಗೆ ಮಾತ್ರ ಬೆಳ್ಳೂರು ನನ್ನದು. ಆದರೆ ನಮ್ಮ ಹಿರಿಯರು ಯಾವಾಗಲೋ ಅದನ್ನು ಬಿಟ್ಟರು" ಎಂದು. ಮಂಡ್ಯಕ್ಕೆ ಅತಿ ಸಮೀಪದಲ್ಲಿರುವ ಶ್ರೀರಂಗಪಟ್ಟಣಕ್ಕೂ ಶ್ರೀ ಅವರಿಗೂ ನಿಕಟ ಸಂಬಂಧ ಇದ್ದಿತು. "ಶ್ರೀ ರಂಗನಾಥನ ದರ್ಶನದಿಂದ ಕಾವೇರಿಯ ಸಾನ್ನಿಧ್ಯದಿಂದ ನನ್ನ ಬದುಕು ಪಾವನವಾಯಿತು" ಎಂದು ಹೇಳಿದ್ದರು. 'ಶ್ರೀ' ಅವರ ಬಾಲ್ಯಜೀವನ ಶ್ರೀರಂಗಪಟ್ಟಣದಲ್ಲಿಯೇ ಕಳೆಯಿತು.

೧೭ನೇ ಶತಮಾನದಲ್ಲಿ ಶ್ರೀರಂಗಪಟ್ಟಣ ಒಂದು ಸಾಹಿತ್ಯ ಕ್ರಾಂತಿಗೆ ಜನ್ಮಭೂಮಿ ಯೆನಿಸಿತ್ತು. ಮಹಾರಾಜ ಶ್ರೀ ಚಿಕ್ಕದೇವರಾಜ ಒಡೆಯರು ಆಳುತ್ತಿದ್ದ ಕಾಲ. ಸುದೀರ್ಘವಾದ ತಮ್ಮ ಆಡಳಿತದಲ್ಲಿ ಅವರು ಹಲವು ರಾಜಕೀಯ, ಆಡಳಿತಾತ್ಮಕ ಮತ್ತು ಸಾಂಸ್ಕೃತಿಕ ಸುಧಾರಣೆಗಳಿಗೆ ಹೆಸರಾದವರು. ಶ್ರೀರಂಗಪಟ್ಟಣವನ್ನು ಮುತ್ತಿದ ಹಗೆಗಳನ್ನು ಸದೆಬಡಿದು ರಾಜರ ಭಯವನ್ನು ನಿವಾರಿಸಿದರು. ದೇವತಾ ಪ್ರಸಾದದಿಂದ ಮಳೆ-ಬೆಳೆಗಳಾದುದರಿಂದ ಪ್ರಜೆಗಳಿಗೆ ದೈವಿಕ ಭಯವೂ ಇಲ್ಲವಾಯಿತು. ಅವರು ಶಾಂತಿ-ಸುಭಿಕ್ಷಗಳಿಂದ ಬಾಳುವಂತಾಯಿತು. ಇಂತಹ ಒಳ್ಳೆಯ ಶಾಂತ ವಾತಾವರಣದಲ್ಲಿ ಪ್ರಜೆಗಳ ಆತ್ಮಕಲ್ಯಾಣಕ್ಕೂ ಪ್ರಾಮಾಣಿಕ ಪ್ರಯತ್ನ ಮಾಡಿದರು. "ಅಕ್ಕರ ಮನರಿಯದೊಕ್ಕಲಿಗರ್ಗಂ, ಪೆಣ್ಗಳ್ಗಂ ಸಕ್ಕದದೊಳ್ ತತ್ವಜ್ಞಾನ ಮಪ್ಪುದರಿಂದು ಎಲ್ಲರು ಮಯಂತೆ ಅಖಿಲ ತತ್ವಾರ್ಥಂಗಳಂ ಕನ್ನಡ ನಾಡಿನೊಳಂ" ಮೆಲ್ನುಡಿಗಳಿಂದೆ ಸಂಗತಿಗೊಳಿಸಿ ಕೃತಿಗಳ ರಚನೆ ಮಾಡಿದರು ; ಮಾಡಿಸಿದರು.

ಚಿಕ್ಕದೇವರಾಜರ ಓಲಗದಲ್ಲಿ ಸದಾ ಕವಿಗಳ ಗೋಷ್ಠಿ. ಒಮ್ಮೆ ರಾಜಸಭೆ ಯನ್ನು ಪ್ರವೇಶಿಸಿದರೆ ಸಾಕು ; ಮನಸ್ಸಿನ ಜಡತೆ ನೀಗಿ, ಅದನ್ನು ಉಲ್ಲಾಸಗೊಳಿ ಸುತ್ತಿತ್ತು. ಸಮಸ್ತ ಸರಸ ಕಲೆಗಳಿಗೂ ಅಲ್ಲಿ ಮಹದಾಶ್ರಯ. ಈ ಅಭಿಪ್ರಾಯ ವನ್ನು ಪ್ರಧಾನಿ ತಿರುಮಲಾರ್ಯನ ಮಾತಿನಲ್ಲೇ ಹೇಳಿದರೆ ಉತ್ತಮ :

ಶಮಯತಿ ಜಡಿಮಾನಂ ಸೌಮನಸ್ಯಂ ಪ್ರಸೂತೆ
ಸರಸ ಸಕಲ ವಿದ್ಯಾ ಕೌಶಲಾನಿ ವ್ಯನಕ್ತಿ;
ಸಕೃದಪಿ ಚಿಕದೇವಷ್ಮಾ ಭೃದಾಸ್ಥಾನ ಸೀಮಾ
ಪಂಗತಿ ಬುಧಗೋಷ್ಠೀ ಪ್ರಾಂತಪಂಕ್ತಿ ಪ್ರವೇಶಃ.

೧೯೪೦ನೇ ಜೂನ್ ತಿಂಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ 'ಬೆಳ್ಳಿಯ ಹಬ್ಬ ನಗರಭವನದಲ್ಲಿ ನಡೆಯಿತು. ಸಮಾರಂಭದಲ್ಲಿ ಕನ್ನಡ ನಾಡಿನ ಎಲ್ಲ ಭಾಗಗಳಿಂದಲೂ ಕನ್ನಡ ಬಂಧುಗಳು ಕಿಕ್ಕಿರಿದು ತುಂಬಿದ್ದರು. ಉತ್ಸವವನ್ನು ಉದ್ಘಾಟಿಸಿದವರು ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರು. ಸಮಾರಂಭಕ್ಕೆಂದೇ ಸ್ವಾಗತ ಪದ್ಯವನ್ನು ಸ್ವತಃ ಶ್ರೀ ಅವರೇ ರಚಿಸಿದ್ದರು. ಅದನ್ನೋದಿದವರು ಪ್ರಸಿದ್ಧ ಗಮಕಿ ಶ್ರೀ ಕಳಲೆ ಸಂಪತ್ಕುಮಾರಾಚಾರ್ಯರು. ಚಿಕ್ಕುಪಾಧ್ಯಾಯನ ಒಂದು ಪದ್ಯವನ್ನು ಶ್ರೀ ಅವರು ತಮ್ಮ ಸ್ವಾಗತ ಪದ್ಯಮಾಲೆಯಲ್ಲಿ ಸೇರಿಸಿಕೊಂಡಿದ್ದರು. ಅದರಲ್ಲಿ ಚಿಕ್ಕದೇವರಾಜ ಒಡೆಯರ ಸಂಗೀತ, ಸಾಹಿತ್ಯ ಪ್ರೇಮ, ಕಲಾಭಿಮಾನ, ಇನ್ನೂ ಕೆಲವು ವೈಯುಕ್ತಿಕ ಗುಣಗಳು ಇವುಗಳನ್ನೆಲ್ಲಾ ವಿವರಿಸಿದೆ. ಶ್ರೀಯವರು ಆ ಪದ್ಯದಲ್ಲಿ ಸ್ವಲ್ಪ ಬದಲಾವಣೆ ಮಾಡಿ ನಾಲ್ವಡಿ ಕೃಷ್ಣರಾಜ ಒಡೆಯರ ಪರವಾಗಿ ಉಪಯೋಗಿಸಿಕೊಂಡಿದ್ದರು. ಇಬ್ಬರು ರಾಜರಲ್ಲಿಯೂ ಸಮಾನವಾಗಿರುವ ಗುಣಗಳಲ್ಲಿ ಒಂದೇ ಒಂದು ಬದಲಾವಣೆ ಅಗತ್ಯವಾಗಿತ್ತೆಂದು ಶ್ರೀಯವರು ಭಾವಿಸಿದರು. ಈ ಬದಲಾವಣೆ ಶ್ರೀ ಅವರ ಲೋಕಾನುಭವಕ್ಕೂ, ದೂರದೃಷ್ಟಿಗೂ ಒಳ್ಳೆಯ ನಿದರ್ಶನವಾಗಿದೆ. ಪದ್ಯವನ್ನು ಗಮನಿಸಿ ;

ಚದುರಂ ಚಾಗಿಯಲಂಪ್ರಗಾರ ನೆರೆಯುಂ ಸಂಗೀತ ಸಾಹಿತ್ಯ ಕೋ
ವಿದನುತ್ಸಾಹಿ ವಿವೇಕಶಾಲಿ ನಯಶೀಲಂ ನೇಮಗಾರಂ ಕಲಾ
ವಿದ ನೊಳ್ಪಾತುಗ ನುಚಿತಜ್ಞಂ ಭಾವುಕಂ ಧಾರಿಣೀ
ಹೃದಯಗ್ರಾಹಿ ದಯಾ ಪಯೋಧಿ ಶ್ರೀ ಕೃಷ್ಣಂ ಮಹೀಚಂದ್ರಮಂ ||

ಇದರಲ್ಲಿ 'ಭಾಮಿನೀ ಹೃದಯನಾಹಿ' ಎಂಬುದನ್ನು ಧಾರಿಣೀ ಹೃದಯಗ್ರಾಹಿ ಎಂದು ಬದಲಾಯಿಸಿಕೊಂಡಿರುವುದು ಎಷ್ಟು ಉಚಿತವಾಗಿದೆ ನೋಡಿ. ಮೈಸೂರು ಶ್ರೀ ಕೃಷ್ಣರಾಜ ಒಡೆಯರ ಕಾಲದಲ್ಲಿ ವಿಶ್ವ ವಿಖ್ಯಾತಿ ಗಳಿಸಿತ್ತು. ಮೈಸೂರಿನ ಮಹಾರಾಜರ ಬಗೆಗೆ ಜಗತ್ತಿನಲ್ಲಿ ದೊಡ್ಡ ಗೌರವವಿದ್ದಿತು. ಅಲ್ಲದೆ ಅವರು ಮಹಾ ತಪಸ್ವಿಗಳು. ಪ್ರಜಾರಂಜನೈಕತತ್ಪರರು. ಅಂತಹ ಶ್ರೀ ಕೃಷ್ಣರಾಜ ಒಡೆಯರ ಬಗೆಗೆ 'ಶ್ರೀ' ಅವರು ಮಾಡಿಕೊಂಡಿರುವ ಬದಲಾವಣೆ ನಿಜವಾಗಿಯೂ ಮೆಚ್ಚತಕ್ಕದ್ದು.

ಒಟ್ಟಿನಲ್ಲಿ ಮಂಡ್ಯ ಜಿಲ್ಲೆಯ ಜನ ಭಾಗ್ಯಶಾಲಿಗಳು. ಕೇವಲ ಮುನ್ನೂರು ವರ್ಷಗಳ ಅವಧಿಯಲ್ಲಿ ಎರಡು ಸಾಹಿತ್ಯ ಕ್ರಾಂತಿಗಳಿಗೆ ಕಾರಣ ಪುರುಷರನ್ನು ಒದಗಿಸಿ

ಕೊಟ್ಟ ಭಾಗ್ಯಶಾಲಿ ಜಿಲ್ಲೆ ಮಂಡ್ಯ. ಈ ವಿಚಾರವಲ್ಲಿ ಮಂಡ್ಯದ ಜಿಲ್ಲೆಯ ಜನ ಹೆಮ್ಮೆಪಟ್ಟುಕೊಳ್ಳಬೇಕಲ್ಲವೆ ?

ಆಚಾರ್ಯ ಬಿ. ಎಂ. ಶ್ರೀ ಅವರ ಜೀವನಕ್ಕೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಹೇಳಬೇಕೆಂದು ನನ್ನ ಇಷ್ಟ. ನನ್ನ ಪ್ರಬಂಧದ ಉದ್ದೇಶವೂ ಅದೇ. ಶ್ರೀ ಅವರಿಗೂ ನನಗೂ ಸುಮಾರು ಹತ್ತು-ಹನ್ನೆರಡು ವರ್ಷಗಳ ನಿಕಟ ಪರಿಚಯ. ಬೆಂಗಳೂರನ್ನು ಬಿಡುವ ತನಕ ಅವರ ನನ್ನ ಭೇಟಿ ನಡೆಯುತ್ತಲೇ ಇತ್ತು. ಕ್ಷೇಮ ಸಮಾಚಾರದ ಪತ್ರಗಳ ವಿನಿಮಯವೂ ನಡೆಯುತ್ತಿತ್ತು. ಸಭೆ ಸಮಾರಂಭಗಳಲ್ಲಿ ಆಗಾಗ ನಾವು ಭೇಟಿಯಾಗುತ್ತಿದ್ದೆವು. ೧೯೩೬ ರಿಂದ ೧೯೪೧ರವರೆಗೆ ಸುಮಾರು ಆರೇಳು ಭಾರಿ ಅವರು ನಮ್ಮ ಊರಿಗೂ ಭೇಟಿಕೊಟ್ಟರು. ಬೆಂಗಳೂರಿಗೆ ಬಂದಾಗಲೆಲ್ಲ ಅವರನ್ನು ನಾನು ಸಂದರ್ಶಿಸುತ್ತಿದ್ದೆ. ಎರಡು ಮೂರು ಬಾರಿ ಅವರ ಅತಿಥಿಯಾಗಿ ಅವರಲ್ಲಿ ಉಳಿಯುವ ಭಾಗ್ಯವೂ ನನ್ನ ಪಾಲಿಗೆ ಲಭಿಸಿತ್ತು,

ನಾನು ಶ್ರೀ ಅವರ ಶಿಷ್ಯನಾಗಿರಲಿಲ್ಲ. ಅಂತಹ ಭಾಗ್ಯ ನನ್ನ ಪಾಲಿಗೆ ಬರಲಿಲ್ಲ. ಆದರೆ ಅವರ ಶಿಷ್ಯರಾಗಿದ್ದ ನನ್ನ ಸ್ನೇಹಿತರನೇಕರು, 'ಶ್ರೀ' ಅವರು ಇಂಗ್ಲಿಷ್ ಕನ್ನಡ ಸಾಹಿತ್ಯಗಳಲ್ಲಿ ಪಾಠ ಹೇಳುತ್ತಿದ್ದ ವೈಖರಿಯನ್ನು ಕುರಿತು ತಮ್ಮ ತಮ್ಮಲ್ಲೇ ಹೆಮ್ಮೆಯಿಂದ ಮಾತಾಡಿಕೊಳ್ಳುವುದನ್ನು ಕೇಳಿದ್ದೆ. ಅವರ ಅದೃಷ್ಟವನ್ನು ಕಂಡು ನನಗೆ ಅಸೂಯೆಯೂ ಉಂಟಾಗುತ್ತಿತ್ತು. ಈ ಒಂದು ಕೊರತೆಯನ್ನು ತುಂಬಿಕೊಳ್ಳುವ ತವಕದಲ್ಲಿ ನಾನು ಅವರೊಡನೆ "ನಾನು ತಮ್ಮ ಶಿಷ್ಯನಾಗಲಿಲ್ಲ ಎಂಬ ಕೊರತೆ ನನ್ನನ್ನು ಬಾಧಿಸುತ್ತಿದೆ. ಈಗಲೂ ತಮ್ಮ ಶಿಷ್ಯನೆಂದೇ ಭಾವಿಸಿದ್ದೇನೆ" ಎಂದರೆ, ಅವರು ನಗುತ್ತಾ "ಆ ಕೊರತೆ ಬಿಡಿ. ನೀವು ಸ್ನೇಹಿತರೇ ಆಗಿದ್ದೀರಲ್ಲ" ಎಂದು ಸಮಾಧಾನ ಮಾಡಿದರು. ನನ್ನ ಅವರ ವಯಸ್ಸಿನ ಅಂತರ ಬಹಳ. ೧೯೩೬ರಲ್ಲಿ ನನಗಿನ್ನೂ ೨೨ ವರ್ಷ ವಯಸ್ಸು. ನಾನು ಶ್ರೀ ಅವರ ಸ್ನೇಹಿತನಂತೆ! ಅವರ ದೊಡ್ಡತನವನ್ನು ಕಂಡು ನನಗೆ ಆನಂದವಾಗುತ್ತಿತ್ತು. ರಾತ್ರಿ ಅವರು ಊಟ ಮಾಡುತ್ತಿರಲಿಲ್ಲ. ಆದರೂ ನಾನು ಊಟ ಮಾಡುತ್ತಿರುವಾಗ ನನ್ನ ಜತೆ ಕುಳಿತು ಮಾತಾಡುತ್ತ ಅನಂತರ ಹೊರಗೆ ಹೋಗುತ್ತಿದ್ದರು. ನಾವು ಊಟ ಮಾಡುತ್ತಿರುವಾಗ, ನಾನು ಅವರ ಮಗ ತಮ್ಮಯ್ಯನವರು ಊಟ ಮಾಡುವ ತನಕ ಏಳುತ್ತಿರಲಿಲ್ಲ. "ನೀವು ಅವನಿಗಾಗಿ ಕಾಯುವುದು ಬೇಡ. ಹುಡುಗ ನಿಧಾನವಾಗಿ ಊಟ ಮಾಡುತ್ತಾನೆ. ನೀವು ಏಳಿ" ಅನ್ನುತ್ತಿದ್ದರು.

ಕನ್ನಡನಾಡಿಗೆ, ಕನ್ನಡ ನುಡಿಗೆ ಶ್ರೀ ಅವರ ಸೇವೆ ಅಮೋಘವಾದುದು, ಚಿರಸ್ಮರಣೀಯವಾದುದು. ಇಂಗ್ಲಿಷ್, ಕನ್ನಡ, ಸಂಸ್ಕೃತ, ತಮಿಳು, ಗ್ರೀಕ್ ಮುಂತಾದ ಭಾಷೆಗಳಲ್ಲಿ ಅವರು ದೊಡ್ಡ ವಿದ್ವಾಂಸರು. ಬೆಳಗಿನ ಜಾವಕ್ಕೆ ಎದ್ದು ತಮಿಳು ಪದ್ಯಗಳನ್ನು ಸುಶ್ರಾವ್ಯವಾಗಿ ಹೇಳಿಕೊಳ್ಳುತ್ತಿದ್ದರು. ಸರಳತೆ, ವಿನಯ,

ಅವರ ಹುಟ್ಟುಗುಣ. ಮುಖದಲ್ಲಿ ಸದಾ ಮೆಲುನಗೆಯ ಲಾಸ್ಯ. ಅವರು ಮಾತಾಡುತ್ತಿದ್ದಾಗ ಒಂದಾದರೂ ಕಠಿಣಪದಗಳನ್ನು ಬಳಸುತ್ತಿರಲಿಲ್ಲ. ಅವರಿಗೆ ನಿಜವಾಗಿ ಇಂಗ್ಲಿಷ್ ಭಾಷೆ ಬರುತ್ತದೆಯೇ ಎಂದು ಸಂದೇಹವಾಗುತ್ತಿತ್ತು. ತಮ್ಮ ಕೊರಳಲ್ಲಿದ್ದ ಹಾರದ ಜರತಾರೀ ಎಳೆಯನ್ನು ಬೆರಳಲ್ಲಿ ಹಿಡಿಯುತ್ತ, ಮೃದುವಾಗಿ ಮಾತಾಡುತ್ತಿದ್ದರು. ಮಾತಿನ ಓಟ ಹೊಳೆಯ ನೀರಿನಂತೆ ಒಂದೇ ಸಮನಾಗಿ ಸಾಗುತ್ತಿತ್ತು. ಕೆಲವು ಸಲ ಎರಡು ಮೂರು ಗಂಟೆಗಳ ತನಕ ಮಾತಾಡುತ್ತಿದ್ದರು.

ಕನ್ನಡದ ದಿಗ್ವಿಜಯಕ್ಕಾಗಿ ಹತ್ತಾರು ಬಾರಿ ಇಡೀ ನಾಡನ್ನೆಲ್ಲ ಸುತ್ತಾಡಿದರು. ಜನರ ಒಳ್ಳೆಯತನಕ್ಕೆ ಬೆರಗಾದರು, ಹುಚ್ಚಾದರು.

ಅದರ ವಿಶ್ವಾಸಗಳ ಕರೆಗೆ ಓಗೊಟ್ಟರು. ದೇಹಯಾಸ, ಹಣದ ವೆಚ್ಚ, ಕಾಲದ ಮಿತಿ ಒಂದನ್ನೂ ಗಮನಿಸದೆ ಕನ್ನಡ ನಾಡಿನಲ್ಲೆಲ್ಲ ಸಂಚರಿಸಿದರು, ಗುಡುಗಾಡಿದರು. ಕನ್ನಡ ಬಾಂಧವರ ಹೃದಯವನ್ನು ಗೆದ್ದರು. ಕನ್ನಡದ ರಕ್ಷಾಮುನಿ, ಕಣ್ವಮುನಿ ಎಂಬ ಬಿರುದುಗಳನ್ನು ಜನರಿಂದಲೇ ಪಡೆದುಕೊಂಡರು. ಹೋದ ಕಡೆಯಲ್ಲೆಲ್ಲ ಹಿರಿಯರನ್ನು, ಯುವಕರನ್ನು, ಹಳ್ಳಿಗರನ್ನು, ಹೆಂಗಸರನ್ನು ಹುರಿದುಂಬಿಸಿದರು. ಅವರಲ್ಲಿ ಕನ್ನಡದ ಪ್ರೇಮವನ್ನು ಬಿತ್ತಿದರು : ಕನ್ನಡಿಗರ ಸ್ವಾಭಿಮಾನವನ್ನು ಜಾಗೃತಿಗೊಳಿಸಿದರು. ಎಲ್ಲರನ್ನೂ ಕನ್ನಡದ ಕೈಂಕರ್ಯಕ್ಕೆ ಸಿದ್ಧಪಡಿಸಿದರು.

ಕನ್ನಡದ ಸೇವೆಗೆಂದು ನಾಡಿನ ಯಾತ್ರೆ ಹೊರಟಾಗ, ಎಲ್ಲೆಂದರೆ ಅಲ್ಲಿ, ಚಿಕ್ಕ ಚಿಕ್ಕ ಗುಂಪುಗಳನ್ನುದ್ದೇಶಿಸಿ ಮಾತಾಡುತ್ತಿದ್ದರು. ಜನರ ಸಂಖ್ಯೆ ಅವರಿಗೆ ಮುಖ್ಯವಾಗಿರಲಿಲ್ಲ. ಸಭೆಯಲ್ಲಿ ಸಾವಿರ ಜನ ಇರಬಹುದು : ಹತ್ತು ಜನರೇ ಇರಬಹುದು. ಅವರ ಭಾಷಣದ ಉತ್ಸಾಹದಲ್ಲಿ ಯಾವ ಬದಲಾವಣೆಯೂ ಆಗುತ್ತಿರಲಿಲ್ಲ. ಒಮ್ಮೆ ಅವರು ಚನ್ನರಾಯಪಟ್ಟಣದಲ್ಲಿ ತಾಲ್ಲೂಕು ಕಛೇರಿಯಲ್ಲಿಯೇ ಕೆಲವರು ಅಧಿಕಾರಿ ಮಿತ್ರರನ್ನು, ಕಿರಿಯರನ್ನು ಉದ್ದೇಶಿ ಮಾತನಾಡಿದರು. ತಮ್ಮನ್ನು ಸುತ್ತಿಕೊಂಡ ಯುವಕರನ್ನು ತಮ್ಮ ಸುತ್ತ ಕೂರಿಸಿಕೊಂಡು, ಅವರ ಪ್ರಶ್ನೆಗಳಿಗೆ ಸಾವಧಾನದಿಂದ ಉತ್ತರ ಕೊಡುತ್ತಿದ್ದರು. ಅವರ ಬಾಲಿಶ ಪ್ರಶ್ನೆಗಳಿಂದ ಕೋಪಗೊಳ್ಳುತ್ತಿರಲಿಲ್ಲ. ಅವರ ಪ್ರಶ್ನೆಗಳಿಗೆಲ್ಲ ಉತ್ತರ ಕೊಟ್ಟು ಅವರ ಸಂದೇಹಗಳನ್ನು ನಿವಾರಿಸುತ್ತಿದ್ದರು. "ಓಗೆ ಕೇಳುವರಿದ್ದರೆ ಬನ್ನಿ, ಸಂತೋಷವಾಗಿ ಹೇಳುತ್ತೇನೆ" ಅನ್ನುತ್ತಿದ್ದರು. ಅವರ ಉತ್ಸಾಹಕ್ಕೆ ಯುವಕರು ನಾಚುತ್ತಿದ್ದ ಕಾಲ ಅದು.

ಒಮ್ಮೆ ನಾವು ಕೆಲವರು ಅವರ ಸುತ್ತ ಕುಳಿತು ಪ್ರಶ್ನೆಗಳನ್ನು ಕೇಳುತ್ತಿದ್ದೆವು. ನಮಗೂ ಒಂದು ಸಂದೇಹವಿತ್ತು. ಶ್ರೀ ಅವರನ್ನು ಸಂಸ್ಕೃತದ ದ್ವೇಷಿಗಳೆಂದು ಕೆಲವರು ಹೇಳುತ್ತಿದ್ದರು. ಒಬ್ಬ ಗೆಳೆಯ ಈ ಪ್ರಶ್ನೆಯನ್ನು ಕೇಳಿದ : "ನೀವೇಕೆ ಸಂಸ್ಕೃತವನ್ನು ದ್ವೇಷಿಸುತ್ತೀರಿ ?" ಅದಕ್ಕೆ ಶ್ರೀಯವರ ಉತ್ತರ : "ನಾನು ಸಂಸ್ಕೃತದ ದ್ವೇಷಿ ಎಂದು ನಿಮಗೆ ಯಾರು ಹೇಳಿದರು ? ನಾನು ಸಂಸ್ಕೃತದ ಅಭಿಮಾನಿ. ಅದರಿಂದ

ಹಿಂದೆ ಕನ್ನಡಕ್ಕೆ ಬೇಕಾದಷ್ಟು ಉಪಕಾರವಾಗಿದೆ. ಆದರೆ ಸಾಕಷ್ಟು ಹಾನಿಯೂ ಆಗಿದೆ. ಅದು ಕನ್ನಡದ ಕನ್ನಡತನವನ್ನೇ ಮುಚ್ಚಿಬಿಟ್ಟಿದೆ. ಅದರಿಂದ ಕನ್ನಡ ಪಾರಾಗಬೇಕು ಅನ್ನುವವನು ನಾನು. ಇದಕ್ಕಿಂತ ಹೆಚ್ಚಿನದನ್ನೇನೂ ನಾನು ಹೇಳಿಲ್ಲ; ನಿರ್ಧಾರ ನಿಮಗೆ ಬಿಡುತ್ತೇನೆ."

ಪ್ರಶ್ನೆ: ಹಾಗಾದರೆ ಇಂಗ್ಲಿಷಿನಿಂದ ನಮಗಾಗುವ ಪ್ರಯೋಜನವೇನು ?

ಉತ್ತರ: ಹಿಂದೆ ಕನ್ನಡದಿಂದ ಸಂಸ್ಕೃತ ಬದುಕಿತು. ಈಗ ಅದು ಇಂಗ್ಲಿಷಿನಿಂದ ಬದುಕಬೇಕಾಗಿದೆ. ಸಾಹಿತ್ಯ ಪ್ರಕಾರಗಳು, ಛಂದಸ್ಸು, ವಿಷಯ. ಈ ದಿಶೆಯಲ್ಲಿ ಅದು ಇಂಗ್ಲಿಷಿಗೆ ಶರಣಾಗದೇ ವಿಧಿಯಿಲ್ಲ. ಸಣ್ಣಕತೆ, ಕಾದಂಬರಿ, ವಿಮರ್ಶೆ, ಹರಟೆ, ಪ್ರಬಂಧ. ಜೀವನ ಚರಿತ್ರೆ, ಈ ವಿಚಾರದಲ್ಲಿ ಕನ್ನಡಕ್ಕೆ ಇಂಗ್ಲಿಷ್ ಸಾಹಿತ್ಯವೇ ಮಾದರಿ, ಆದರೆ ಎಲ್ಲ ಕಾಲಕ್ಕೂ ಇಂಗ್ಲಿಷ್ ಬೇಕೆನ್ನುನುವವನು ನಾನಲ್ಲ. ಮುಂದೆ ಬೇರೊಂದು ಸಾಹಿತ್ಯ ನಮಗೆ ಪ್ರಯೋಜನಕಾರಿಯಾಗಬಹುದು. ನನ್ನ ಕೊನೆಯ ಮಾತು ನೆನಪಿರಲಿ "ಕನ್ನಡಿಗರಿಗೆ ಕನ್ನಡವೇ ಗತಿ, ದಿಕ್ಕು. ಅದರಿಂದಲೇ ಅವರಿಗೆ ಮೋಕ್ಷ ಇಂಗ್ಲಿಷಲ್ಲ. ಬೇರಾವ ಭಾಷೆಯಲ್ಲ."

ಪ್ರಶ್ನೆ: ಹಾಗಾದರೆ ಕನ್ನಡದಲ್ಲಿ ಏನಿದೆ ಅನ್ನುವವರ ವಿಚಾರದಲ್ಲಿ ತಮ್ಮ ಅಭಿಪ್ರಾಯವೇನು ?

ಉತ್ತರ: "ಕನ್ನಡದಲ್ಲಿ ಏನಿದೆಯೆ ? ಏನಿಲ್ಲ ? ಎಂಬುದೇ ನನ್ನ ಸವಾಲು. ಇಲ್ಲ ಎನ್ನುವವರ ಬಗೆಗೆ ನನಗೆ ಸದಾ ಮರುಕ. ಅವರ ಅಜ್ಞಾನಕ್ಕೆ ನನ್ನ ಸಹಾನುಭೂತಿ. ಕನ್ನಡವನ್ನು ಓದಲು, ಬರೆಯಲು, ಮಾತಾಡಲು ಮನಸ್ಸಿಲ್ಲದ ಅಪವಾದ ಇದು. ಅವರೇನಾದರೂ ಹೇಳಿಕೊಳ್ಳಲಿ ನೀವು ನೋಡಿ. ಅಪಾರ ಸಾಹಿತ್ಯ ಸಂಪತ್ತಿದೆ. ಹೊಸ ಗ್ರಂಥಗಳ ರಚನೆಯಾಗುತ್ತಿದೆ, ನಾವು ಹೆಮ್ಮೆ ಪಡುವ ರೀತಿಯಲ್ಲಿ ಅದು ಬೆಳೆಯುತ್ತಿದೆ.

ಪ್ರಶ್ನೆ: ತಮ್ಮ ಅಭಿಪ್ರಾಯದಲ್ಲಿ ಕನ್ನಡದಲ್ಲಿ ಏನೇನು ಆಗಬೇಕಾಗಿದೆ ?

ಉತ್ತರ: ಕನ್ನಡದಲ್ಲಿ ಏನೇನು ಆಗಬೇಕಾಗಿದೆ ಎಂದು ನಾನು ನನ್ನ ಹಿಂದಿನ ಉಪನ್ಯಾಸಗಳಲ್ಲಿ ವಿಶದಪಡಿಸಿದ್ದೇನೆ ಓದಿಕೊಳ್ಳಿ ಗೊತ್ತಾಗುತ್ತದೆ. ಇನ್ನೂ ಇದು ಆರಂಭದ ಕಾಲ. ನೀವೇ ನೋಡುವಿರಿ. ಕನ್ನಡ ಹೇಗೆ ಬೆಳೆಯುತ್ತದೆ ಎಂಬುದನ್ನು.

ಕಿರಿಯರ ಸಭೆಯೊಂದರಲ್ಲಿ ಶ್ರೀ ಅವರು ಹೇಳಿದ ಆವೇಶಪೂರಿತವಾದ ಕೆಲವು ವಾಕ್ಯಗಳನ್ನು ನನ್ನ ದಿನಚರಿಯಿಂದ ಆರಿಸಿಕೊಂಡಿದ್ದೇನೆ.

ಕನ್ನಡ ನಿನ್ನೆ ಮೊನ್ನೆಯದಲ್ಲ, ಪುರಾತನ ಭಾಷೆ. ಓಜಸ್ಸು ತೇಜಸ್ಸು ತುಂಬಿದ ಬಾಷೆ. ನಮ್ಮದು ಚಿನ್ನದ ನಾಡು, ಚಿನ್ನದಂತಹ ಜನರಿಗೆ ಜನ್ಮ ಕೊಟ್ಟ ನಾಡು. ಅದರ ಬಗೆಗೆ ಅಭಿಮಾನ ಬೇಡವೆ ? ವಿಚಾರದ ಅಭಾವವಿದ್ದರೆ ಮಾತಿಗೂ ಅಭಾವ. ವಿಚಾರ ವಿದ್ದರೆ ಮಾತು ತಾನಾಗಿ ಬರುತ್ತದೆ. ಪ್ರಯತ್ನವನ್ನೇ ಮಾಡದೆ ಕನ್ನಡದಲ್ಲಿ ಮಾತಾಡು ವುದು ಕಷ್ಟ. ಬರೆಯುವುದು ಕಷ್ಟ ಎಂದು ಗೊಣಗುವ ಜನರಿಗೆ, ಇಂಗ್ಲಿಷ್ ಚೆನ್ನಾಗಿ ಬರುತ್ತದೆಯಂತೋ ? ಇಂಗ್ಲಿಷಿನಲ್ಲಿ ಸುಲಭವಾಗಿ ಹೇಳಲು ಬಂದರೆ ಕನ್ನಡದಲ್ಲಿಯೂ ಸುಲಭವಾಗಿ ಹೇಳಬಹುದು.

ಮುಂದಿನ ಲೇಖನದ ಬಗೆಗೆ ಅವರು ಒಮ್ಮೆ ಸಂಗ್ರಹವಾಗಿ ಹೀಗೆ ಹೇಳಿದರು :

"ಹೊಸ ಗ್ರಂಥಕರ್ತನು ಸ್ವತಂತ್ರನು. ಪದ್ಯಕ್ಕಿಂತ ಹೆಚ್ಚಾಗಿ ಗದ್ಯದಲ್ಲಿ ಬರೆಯ ತಕ್ಕವನು. ವಿಷಯಕ್ಕೆ ತಕ್ಕ ಶೈಲಿಯನ್ನು ಅಳವಡಿಸಿ ಸರ್ವರೂ ಅರ್ಥಮಾಡಿಕೊಳ್ಳು ವಂತೆ ಬರೆಯತಕ್ಕವನು".

ಕವಿತೆ, ಭಾವಗೀತೆ, ಸಣ್ಣಕತೆ, ನಾಟಕ ಮುಂತಾದ ಸಾಹಿತ್ಯ ಪ್ರಕಾರಗಳನ್ನು ಸೃಷ್ಟಿ ಮಾಡುವುದೇ ಅವನ ಗುರಿ. ಹಿರಿಯರ ಸೇವೆಯಲ್ಲಿ ಮಕ್ಕಳನ್ನು ಮರೆಯದೆ ಅವರಿಗೂ ಬೇಕಾದ ಸಾಹಿತ್ಯವನ್ನು ರಚನೆ ಮಾಡುವನು. 'ಮನುಜನಿಗೆ ಮಗು ತಂದೆ' ಎಂಬ ತತ್ವವನ್ನು ಅವನು ಮರೆಯುವುದಿಲ್ಲ.

ಮಕ್ಕಳಿಗೂ ಪುಟ್ಟದಾದ, ಸಚಿತ್ರ ಸಾಹಸ ಕಥೆಗಳು, ಪ್ರವಾಸ ಕಥನ ಸಮುದ್ರ ಯಾನದ ಕಥೆಗಳು ಮುಂತಾದುವನ್ನು ಪ್ರಕಟಿಸುವನು.

ರೆನಸಾನ್ಸ್ ಕಾಲದ ಪಂಡಿತನೊಬ್ಬನ ಮಾತನ್ನು ಅವರು ಉದಹರಿಸಿ, "ಸತ್ತ ವರನ್ನು ಎಬ್ಬಿಸಲು ನಾವು ಹೋಗುತ್ತಿದ್ದೇವೆ" ಎಂಬುದರಲ್ಲಿ ಸ್ವಲ್ಪ ಬದಲಾವಣೆ ಮಾಡಿ "ನಾವು ಸತ್ತವರನ್ನು ಮಾತ್ರವಲ್ಲ : ಬದುಕಿರುವವರನ್ನು ಎಚ್ಚರಿಸಲು ಹೋಗು ತ್ತಿದ್ದೇವೆ" ಎಂದು ಸಾರಿದ್ದಾನೆ. ಮೇಲಿನ ಮಾತುಗಳು ಹೊಸ ಪೀಳಿಗೆಯ ಕನ್ನಡಿಗರಿಗೆ ಒಂದು ಕೈಪಿಡಿ ಇದ್ದಹಾಗೆ.

## ಕೆಲವು ಆತ್ಮೀಯ ವಿಚಾರಗಳು

ಇಷ್ಟೆಲ್ಲ ಹೇಳಿದ ಮೇಲೆ ಇಲ್ಲಿ ಕೆಲವು ಆತ್ಮೀಯ ವಿಚಾರಗಳನ್ನು ತಿಳಿಸಲು ಪ್ರಯತ್ನಿಸುತ್ತೇನೆ. ಶ್ರೀ ಅವರ ಸಾಹಿತ್ಯ ಕುರಿತ ವಿಮರ್ಶೆಯಾಗಲೀ, ಅವರ ಸಾಹಿತ್ಯ ಸೇವೆಯನ್ನಾಗಲೀ ಕುರಿತು ಮಾತಾಡುವುದು ನನ್ನ ವಿಷಯದ ವ್ಯಾಪ್ತಿಯಲ್ಲಿ ಬರುವು ದಿಲ್ಲ. ಈ ಕೆಲಸವನ್ನು ನನ್ನ ಇತರ ಸ್ನೇಹಿತರು ಮಾಡುವರಾಗಿದ್ದಾರೆ. 'ಶ್ರೀ' ಅವರ ಮತ್ತು ನನ್ನ ಆತ್ಮೀಯ ಸಂಭಾಷಣೆಗಳ ಕಾಲದಲ್ಲಿ, ಇನ್ನು ಕೆಲವು ನನ್ನ ಅನುಭವದಿಂದ ಕಂಡ ಕೆಲವು ಸಂಗತಿಗಳನ್ನು ನಿರೂಪಿಸುವುದು ನನ್ನ ಕೆಲಸ.

## ಕನ್ನಡದಲ್ಲಿ ಮಾತಾಡುವವರಿಗೆ, ಬರೆಯುವವರಿಗೆ ಪ್ರೋತ್ಸಾಹ

ಶ್ರೀ ಅವರು ಕನ್ನಡದ ಕೆಲಸಕ್ಕಾಗಿ, ಜಿಲ್ಲೆ, ತಾಲ್ಲೋಕು, ಕೇಂದ್ರಗಳಿಗೆ ಭೇಟಿಕೊಟ್ಟಾಗ ಅವರ ವಿದ್ಯಾರ್ಥಿಗಳಾಗಿದ್ದ ಕೆಲವು ಅಧಿಕಾರಿಗಳು, ವಕೀಲರು, ಅಭಿಮಾನಿಗಳು ಅವರ ಸ್ವಾಗತಕ್ಕೆ ಸಿದ್ಧರಾಗಿರುತ್ತಿದ್ದರು. ಜಿಲ್ಲಾಧಿಕಾರಿಗಳು, ಉಪವಿಭಾಗಾಧಿಕಾರಿಗಳು, ಅಮಲ್ದಾರರು, ಇನ್ನೂ ಇತರ ಇಲಾಖೆಗಳಲ್ಲಿ ಕೆಲಸ ಮಾಡುವವರು, ಇವರುಗಳು ನಾಮುಂದು, ತಾಮುಂದು ಎಂದು ಓಡಿಬರುತ್ತಿದ್ದರು. ಕನ್ನಡದ ಕೆಲಸಕ್ಕೆ ಅವರೆಲ್ಲರ ಸಹಕಾರ ಪಡೆಯುವುದು ಶ್ರೀ ಅವರಿಗೆ ಕಷ್ಟವಾಗಿರಲಿಲ್ಲ. ಸ್ಥಳೀಯ ಕಾರ್ಯಕರ್ತರಿಗೂ ಇದರಿಂದ ಅನುಕೂಲವಾಗುತ್ತಿತ್ತು. ಸಭೆಗಳಲ್ಲಿ ಮಾತಾಡಲು ಹೆದರುತ್ತಿದ್ದ ಕಾಲ ಅದು. ಕೆಲವರು ತೊದಲುತ್ತಿದ್ದರು ಕೆಲವರಿಗೆ ಮೈನಡುಕ ಬೇರೆ. ಊರಿನಲ್ಲಿ ಗಣ್ಯರೆಂಬ ಕಾರಣದಿಂದ ಕೆಲವರಿಗೆ ಅಧ್ಯಕ್ಷಪಟ್ಟ ಕಟ್ಟುವುದು ಸ್ವಾಭಾವಿಕ. ಅಂತಹವರಿಗೆಲ್ಲ ಶ್ರೀ ಅವರ ಪ್ರೋತ್ಸಾಹದ ನುಡಿ ಕಾದಿರುತ್ತಿತ್ತು. "ನೀವೆಷ್ಟು ಚೆನ್ನಾಗಿ ಮಾತಾಡುತ್ತೀರಿ ? ನಿಮ್ಮ ಭಾಷಣ ತುಂಬಾ ಚೆನ್ನಾಗಿತ್ತು. ಪ್ರಯತ್ನ ಪೂರ್ವಕವಾಗಿ ಮಾತಾಡಲು ಅಭ್ಯಾಸ ಮಾಡಿ. ಯಾವ ಅವಕಾಶವನ್ನೂ ಕಳೆದುಕೊಳ್ಳಬೇಡಿ. ನಮ್ಮ ಸಂಘದ ವೇದಿಕೆ ಬಳಸಿಕೊಳ್ಳಿ" ಎಂದು ಪ್ರೋತ್ಸಾಹಿಸುತ್ತಿದ್ದರು. ಹಾಸನದಲ್ಲಿ ಜಿಲ್ಲಾಧಿಕಾರಿಯಾಗಿದ್ದ ಶ್ರೀ ಅವರ ಶಿಷ್ಯರೊಬ್ಬರು ಎರಡೆ ವರ್ಷಗಳಲ್ಲಿ ಉಜ್ವಲ ಭಾಷಣಕಾರರಾದರು.

ಕಿರಿಯರು ಬರೆದರೆ ಸಾಕು. ಅವರಿಗೆ ತುಂಬಾ ಹಿಗ್ಗು. ನಾಲ್ಕು ಸಾಲು ಗೀಚಿ, ಬಹಳ ಸಂಕೋಚದಿಂದ ಅವರ ಕೈಗೆ ಕೊಟ್ಟಾಗ "ಓಹೋ, ಎಷ್ಟು ಚೆನ್ನಾಗಿದೆ ನಿಮ್ಮ ಪದ್ಯ ! ಕವಿತೆ ತುಂಬಾ ಮುದ್ದಾಗಿದೆ. ಬರೆಯುವುದನ್ನು ನಿಲ್ಲಿಸಬೇಡಿ. ಬರೆಯುತ್ತ ಹೋದಹಾಗೆ ಎಲ್ಲವೂ ಸರಿಯಾಗುತ್ತದೆ" ಅನ್ನುತ್ತಿದ್ದರು. ಆ ಹುಡುಗ ಹೆಮ್ಮೆಯಿಂದ "ನಾನಾಗಲೇ ಕವಿಯಾಗಿಬಿಟ್ಟೆ ಶ್ರೀ ಅವರು ಹೇಳಿದ್ದಾರೆ" ಎಂದು ದಿಗ್ವಿಜಯ ಸಾಧಿಸಿದವನಂತೆ ತನ್ನ ಗೆಳೆಯರ ಬಳಿ ಹೇಳಿಕೊಳ್ಳುತ್ತಿದ್ದುದು ಒಂದು ಸಾಮಾನ್ಯ ದೃಶ್ಯವಾಗಿತ್ತು.

## ಅ.ನ.ಕೃ. ಅವರೊಡನೆ ಭಿನ್ನಾಭಿಪ್ರಾಯ

ಬಿ. ಎಂ. ಶ್ರೀ ಅವರು ಪರಿಷತ್ತಿನ ಉಪಾಧ್ಯಕ್ಷರಾದ ಕೂಡಲೇ ಅ.ನ.ಕೃ. ಅವರನ್ನು ಕನ್ನಡನುಡಿಯ ಸಂಪಾದಕರಾಗಿ ನೇಮಕ ಮಾಡಿಕೊಂಡರು. ಆಗಿನ ಸಮ್ಮೇಳನಾಧ್ಯಕ್ಷರಾಗಿದ್ದ ದಿವಾಕರರ ಬಗೆಗೆ ಅ. ನ. ಕೃ ಕಟು ಟೀಕೆ ಮಾಡಿ ಸಂಪಾದಕೀಯವನ್ನು ಬರೆದರು. ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದ ದಿವಾಕರರು ವರ್ಷ ತುಂಬುವ ಮುನ್ನವೇ 'ಹಿಂದಿ' ಪ್ರಚಾರವನ್ನು ಕುರಿತು ಎಲ್ಲಿಯೋ ಭಾಷಣ ಮಾಡಿದ್ದರಂತೆ. ಇದು ಕೃಷ್ಣರಾಯರನ್ನು ಕೆರಳಿಸಿತು. ದಿವಾಕರರು ತಮ್ಮ ವ್ರತವನ್ನು

ಪರಿಪಾಲಿಸಲಿಲ್ಲವೆಂದು ರಾಯರಿಗೆ ಆಕ್ರೋಶ. ಆದರೆ ಸಂಪಾದಕೀಯದ ಬಗೆಗೆ ದಿವಾಕರರು ಸಾರ್ವಜನಿಕವಾಗಿ ಏನೂ ಹೇಳಲಿಲ್ಲ.

ಪರಿಷತ್ತಿನ ಕಾರ್ಯಸಮಿತಿ ದಿವಾಕರರಿಗೆ ಕೊಟ್ಟಿದ್ದ ಭರವಸೆಯನ್ನು ನುಡಿಯ ಸಂಪಾದಕರು ಮುರಿದರೆಂದು 'ಶ್ರೀ' ಅವರಿಗೆ ಅಸಮಾಧಾನ. ಸಮ್ಮೇಳನದ ಅಧ್ಯಕ್ಷ ಪೀಠ ವಹಿಸಿಕೊಳ್ಳುವ ಮುನ್ನವೇ ಕೆಲವು ಷರತ್ತಿನೊಂದಿಗೆ ಅವರು ಸಮ್ಮತಿಸಿದ್ದರೆಂದು ಶ್ರೀ ಅವರೇ ಒಮ್ಮೆ ತಿಳಿಸಿದ ನೆನಪು. ಅಂತೂ ದಿವಾಕರರ ಮನಸ್ಸಿಗೆ ನೋವುಂಟು ಮಾಡಿದ ಕಾರಣಕ್ಕಾಗಿ ಪರಿಷತ್ತಿನ ಉಪಾಧ್ಯಕ್ಷರು ಮತ್ತು ನುಡಿ ಸಂಪಾದಕರ ನಡುವೆ ಭಿನ್ನಾಭಿಪ್ರಾಯವುಂಟಾಯಿತು. ಅ.ನ.ಕೃ ರಾಜೀನಾಮೆ ಸಲ್ಲಿಸಬೇಕಾಯಿತು.

## 'ಪ್ರಜಾಮತ'ದಲ್ಲಿ ಮಾಸ್ತಿಯವರ ಬಗೆಗೆ ಒಂದು ಟೀಕೆ

ಒಮ್ಮೆ ಪ್ರಜಾಮತದಲ್ಲಿ ಮಾಸ್ತಿಯವರ ಬಗೆಗೆ ಒಂದು ಟೀಕೆ ಬಂತು. ಅವರ ಪದ್ಯವೆಂದರೆ ಗದ್ಯವೇ. ಗದ್ಯಕ್ಕೂ, ಪದ್ಯಕ್ಕೂ ವ್ಯತ್ಯಾಸವೇ ಇಲ್ಲ ಎಂದು ಆ ಟೀಕೆಯ ಒಟ್ಟಾರೆಯ ಅಭಿಪ್ರಾಯ. ಶ್ರೀ ಅವರು ಈ ಟೀಕೆಯಿಂದ ಕೋಪಗೊಂಡಂತೆ ತೋರಿತು. "ಮಾಸ್ತಿಯವರ ಬಗೆಗೆ ಇಂತಹ ಟೀಕೆಯೆ ? ಅವರ ಯೋಗ್ಯತೆಯನ್ನು ತಿಳಿಯದವರಿಂದ ಈ ಟೀಕೆ ಬಂದಿದೆ" ಎಂದು ಅವರು ತಮ್ಮ ನೋವನ್ನು ನನ್ನ ಮುಂದೆ ತೋಡಿಕೊಂಡರು. ಪ್ರಜಾಮತದ ಪ್ರತಿಯೊಂದನ್ನು ಅವರು ನನಗೆ ತೋರಿಸಿದರು, ಅಂತಹ ಸಮಯದಲ್ಲಿ ನಾನು ಅವರಿಗಿಂತಲೂ ತುಂಬಾ ಕಿರಿಯವನಾಗಿ ನಾನು ಮೌನ ವಾಗಿರುತ್ತಿದ್ದೆ. ಆದರೆ ನನ್ನ ಅಭಿಪ್ರಾಯ ತಿಳಿಸುವುದು ಕೆಲವು ವೇಳೆ ಅನಿವಾರ್ಯ ವಾಗುತ್ತಿತ್ತು.

## ಹರಿಜನ ಕವಿಗೆ ಸನ್ಮಾನ

೧೯೩೬ನೇ ವರ್ಷದ ಏಪ್ರಿಲ್ ತಿಂಗಳ ೯–೧೦ ರಂದು ಚನ್ನರಾಯಪಟ್ಟಣದ ಕರ್ನಾಟಕದ ವಾರ್ಷಿಕೋತ್ಸವ 'ಶ್ರೀ' ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಮಾರಂಭ ದಲ್ಲಿ 'ಹರಿಜನ ಕವಿ' ಡಿ. ಗೋವಿಂದದಾಸರು ತಮ್ಮ ಒಂದೆರಡು ಪದ್ಯಗಳನ್ನು ಓದಿ ದರು. 'ಹರಿಜನ ಕವಿ'ಗೆ ಶ್ರೀ ಅವರು ಹಾರ ಹಾಕಿ ಸನ್ಮಾನಿಸಿದರು. ಆ ಕವಿಗಳು ಈಗಲೂ ಈ ಒಂದು ಗೌರವವನ್ನು ಸದಾ ನೆನಪು ಮಾಡಿಕೊಂಡು ಹೆಮ್ಮೆ ಪಡುತ್ತಾರೆ. ನಲವತ್ತೂಮ್ರು ವರ್ಷಗಳ ಹಿಂದೆ ಶ್ರೀ ಅವರು ಎಷ್ಟು ವಿಶಾಲಮನಸ್ಕರಾಗಿದ್ದರು ಎಂಬುದನ್ನು ಈ ಸಂದರ್ಭ ನೆನಪಿಗೆ ತರುತ್ತದೆ.

## ಕನ್ನಡ ಪ್ರೇಮಿ ದಿವಾನರಿಂದ ಶ್ರೀ ಅವರ ಪ್ರಶಂಸೆ

೧೯೩೮ ರಲ್ಲಿ ಮೈಸೂರಿನ ದಿವಾನರಾಗಿದ್ದ ಶ್ರೀ ಮಿರ್ಜಾ, ಎಂ. ಇಸ್ಮಾಯಿಲ್ ಅವರು ಚನ್ನರಾಯಪಟ್ಟಣದ ಕರ್ನಾಟಕ ಸಂಘಕ್ಕೆ ಭೇಟಿಕೊಟ್ಟು ನಮ್ಮ ಸಂಘದ

ಕಾರ್ಯಕಲಾಪಗಳ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಆಗ ಅವರು ಮಾಡಿದ ಭಾಷಣದ ಕೆಲವು ಭಾಗವನ್ನು ಇಲ್ಲಿ ಉದ್ಧರಿಸುತ್ತೇನೆ.

ನಿಮ್ಮ ಸಂಘ ಚೆನ್ನಾಗಿ ಕೆಲಸ ಮಾಡುತ್ತಿದೆ. 'ಶ್ರೀ' ಅವರು ನನ್ನಲ್ಲಿ ಕನ್ನಡ ಪ್ರೇಮವನ್ನು ತುಂಬುತ್ತಿರುವುದಲ್ಲದೆ, ನನ್ನನ್ನು ಕನ್ನಡದ ಕಡೆಗೆ ಎಳೆಯುತ್ತಿದ್ದಾರೆ. ನಿಮ್ಮ ಸಂಘದ ಚಟುವಟಿಕೆಗಳಿಗೆ ಸದಾ ನನ್ನ ಬೆಂಬಲ. ನಮ್ಮ ಮಹಾರಾಜರ ತಾಯ್ನುಡಿ ಕನ್ನಡ. ಅವರ ಪ್ರಜೆಗಳ ತಾಯ್ನುಡಿ ಕನ್ನಡ. ಕನ್ನಡದ ಬೆಳವಣಿಗೆಗೆ ಸಹಾಯ ಮಾಡುವುದು ನಮ್ಮೆಲ್ಲರ ಕರ್ತವ್ಯ."

## ಅಧಿಕಾರಿಗಳಿಗೆ ಹೇಳಿದ ಕವಿ ಮಾತು

"ನೀವು ಕರ್ನಾಟಕ ಸಂಘಗಳಿಗೆ ಬೆಂಬಲ ಕೊಡಿ. ಹಣ ಸಹಾಯ, ಜನ ಸಹಾಯ ಏನೇನು ಬೇಕೋ ಎಲ್ಲವನ್ನೂ ಕೊಡಿ." ಎಂದು ಸೂಚಿಸಿದರು. ಮಿರ್ಜಾರವರ ಸೂಚನೆಗೂ, ಕಟ್ಟಪ್ಪಣೆಗೂ ಯಾವ ವ್ಯತ್ಯಾಸವೂ ಇರಲಿಲ್ಲ. ಮುಂದೆ ನಮ್ಮ ಸಭೆಗಳಿಗೆಲ್ಲ ಅಧಿಕಾರಿಗಳು ಹಾಜರಿದ್ದು ಕೈಲಾದ ನೆರವು ನೀಡುತ್ತಿದ್ದರು,

ತಮ್ಮ ಪ್ರೀತಿಯ ಸಂಕೇತದಿಂದ ನಮ್ಮ ಸಂಘಕ್ಕೆ ದಿವಾನರು ಐವತ್ತು ರೂಪಾಯಿಗಳನ್ನು ಕೊಟ್ಟು ತಮ್ಮನ್ನು ಸದಸ್ಯರನ್ನಾಗಿ ಮಾಡಿಕೊಳ್ಳಿ ಎಂದು ತಿಳಿಸಿದರು. ಆದರೆ ನಾವು ಅವರನ್ನು ಪೋಷಕರಾಗಿ ಸೇರಿಸಿಕೊಂಡೆವು. ಅಧಿಕಾರಿಗಳ ಸಹಾಯದ ಭರವಸೆಯ ಮೇಲೆ ೧೯೩೩ ರಲ್ಲಿ ಜಮಖಂಡಿಯಲ್ಲಿ ನಡೆಯಬೇಕಾಗಿದ್ದ ಸಮ್ಮೇಳನಕ್ಕೆ ಕೆಲವು ಅಡ್ಡಿಗಳಿವೆಯೆಂದು ತಿಳಿದಾಗ, ಚನ್ನರಾಯಪಟ್ಟಣಕ್ಕೆ ಆಹ್ವಾನಿಸಿದೆವು. ಪರಿಷತ್ತು ನಮ್ಮ ಸಂಘದ ಕಾರ್ಯಕರ್ತರ ಉತ್ಸಾಹವನ್ನು ಶ್ಲಾಘಿಸಿ ನಿರ್ಣಯ ಮಾಡಿತು. ಮಿರ್ಜಾ ಇಸ್ಮಾಯಿಲ್ ಅವರ ಮಧ್ಯಪ್ರವೇಶದಿಂದಾಗಿ ಜಮಖಂಡಿಯಲ್ಲಿಯೇ ಆ ವರ್ಷ ಸಾಹಿತ್ಯ ಸಮ್ಮೇಳನ ನಡೆಯಿತು. 'ಶ್ರೀ' ಅವರ ಅಪೇಕ್ಷೆಯಂತೆ ನಾನೂ ಸಮ್ಮೇಳನದಲ್ಲಿ ಭಾಗವಹಿಸಿದ್ದೆ. ಸಮ್ಮೇಳನದ ಸಾಹಿತ್ಯ ಗೋಷ್ಠಿಯಲ್ಲಿ ನಾನು ಓದಿದ ಪ್ರಬಂಧವನ್ನು ಶ್ರೀಯವರ ಮನೆಯಲ್ಲಿಯೇ ಸಿದ್ಧಪಡಿಸಿದೆ. ಅವರೇ ತಮ್ಮ ಸ್ವಂತ ಫೌಂಟನ್‌ಪೆನ್ ನನಗೆ ಕೊಟ್ಟು "ಲೇಖನ ಬೇಗ ಪೂರೈಸಿಬಿಡಿ" ಎಂದರು.

## ಪಂಪ ಒಬ್ಬನಲ್ಲ; ನಮಗೆ ಇಬ್ಬರು ಪಂಪರು

೧೯೪೧ ರ ಡಿಸೆಂಬರ್ ತಿಂಗಳಲ್ಲಿ ನಮ್ಮ ಸಂಘದ ಆಶ್ರಯದಲ್ಲಿ ಪಂಪ ಕವಿಯ ಸಹಸ್ರಮಾನೋತ್ಸವ ನಡೆಯಿತು. ಆಗ ವಿದ್ಯಾಮಂತ್ರಿಯಾಗಿದ್ದ ಶ್ರೀ ಜೆ. ಎಂ. ಇಮಾಂ ಅವರು ಅಧ್ಯಕ್ಷತೆ ವಹಿಸಿದ್ದರು. 'ಶ್ರೀ' ಅವರು ಪಂಪನನ್ನು ಕುರಿತು ಭಾಷಣ ಮಾಡಿದರು. ಅಧ್ಯಕ್ಷರು ತಮ್ಮ ಭಾಷಣದಲ್ಲಿ "ಆದಿ ಪಂಪ ಹಳೆಗನ್ನಡದ ಸಾಹಿತ್ಯಕ್ಕೆ ಆಚಾರ್ಯ ಪುರುಷ. ಆದಿ ಕವಿ. ನಮಗೆ ಒಬ್ಬ ಪಂಪನಲ್ಲ ಇಬ್ಬರಿದ್ದಾರೆ.

ಶ್ರೀ ಅವರು ಹೊಸಗನ್ನಡದ ಆಚಾರ್ಯಪುರುಷ. ಆದಿಕವಿ. ಹೊಸಗನ್ನಡಕ್ಕೆ ಶ್ರೀ ಅವರು ಪಂಪ. ಪ್ರಪಂಚದ ಇತರ ಭಾಷೆಗಳಲ್ಲಿ ತಮ್ಮ ಸಮಕಾಲೀನ ಕವಿಗೆ ಇವರು ಯಾವ ರೀತಿಯಲ್ಲಿಯೂ ಕಡಿಮೆಯಿಲ್ಲ ಎಂದು ಶ್ರೀ ಇಮಾಂ ನುಡಿದರು. ಸಭೆಯಲ್ಲಿ ಹರ್ಷೋದ್ಗಾರ ಕೇಳಿಬಂತು. ಆಗ ಶ್ರೀ ಅವರ ಮುಖವನ್ನು ನೋಡಬೇಕಾಗಿತ್ತು. ವಿನಯಭಾರದಿಂದ ಅವರು ತಲೆಬಾಗಿದರು.

## ಪದಕದ ಬಗೆಗೆ ಅಭಿಮಾನ

೧೯೩೮ ರ ದಸರಾ ದರಬಾರಿನಲ್ಲಿ ಶ್ರೀಮನ್ಮಹಾರಾಜರು ಶ್ರೀ ಅವರಿಗೆ 'ರಾಜಸೇವಾಸಕ್ತ' ಎಂಬ ಬಿರುದನ್ನು ದಯಪಾಲಿಸಿದರಷ್ಟೆ. ಆಗ ನಾಡಿನಲ್ಲಿ ಅನೇಕ ಕಡೆ 'ಶ್ರೀ' ಅವರ ಗೌರವಾರ್ಥ ಸನ್ಮಾನ ಸಭೆಗಳು ನಡೆದವು. ನಮ್ಮಲ್ಲಿಯೂ ಅಂತಹ ಒಂದು ಸನ್ಮಾನ ಸಮಾರಂಭ ನಡೆಯಿತು. ಜಿಲ್ಲಾಧಿಕಾರಿಗಳು ಅಧ್ಯಕ್ಷತೆ ವಹಿಸಿದ್ದರು. 'ಶ್ರೀ' ಅವರು ತುಂಬಾ ಆನಂದಭರಿತರಾಗಿದ್ದರು. ಪದಕವನ್ನು ಬಹು ಜೋಪಾನವಾಗಿ ನೋಡಿಕೊಳ್ಳುತ್ತಿದ್ದರೂ ನಮಗೆಲ್ಲಾ ಅದನ್ನು ತೋರಿಸಿದರು. ಸಭೆ ಮುಗಿದ ಮೇಲೆ ಅದು ಶ್ರೀ ಕೆ. ವಿ. ರಾಘವಾಚಾರ್ ಅವರ ರಕ್ಷೆಯಲ್ಲಿತ್ತು. ಆಗ ಶ್ರೀ ಅವರು ನನ್ನನ್ನು ಹತ್ತಿರ ಕರೆದು, "ಪದಕ ರಾಘವಾಚಾರ್ಯರ ಬಳಿ ಇದೆ. ನೀವೂ ಜತೆಯಲ್ಲಿ ಇರಿ. ಜೋಪಾನ" ಎಂದು ನನಗೆ ಎಚ್ಚರಿಸಿದರು. ಆ ಪದಕ ಅವರ ಅಮೂಲ್ಯವಾದ 'ಆಸ್ತಿ'ಯೋ ಎಂಬಂತೆ ನೋಡಿಕೊಳ್ಳುತ್ತಿದ್ದರು.

## ನಸು ಮುನಿಸಿನ ಕೆಲವು ಸನ್ನಿವೇಶಗಳು

ಕರ್ನಾಟಕ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಕೆಲವು ವರ್ಷ ಕರ್ನಾಟಕ ಸಂಘಗಳ ಸಮ್ಮೇಳನದಲ್ಲಿ ಕಾವ, ಜಾಣ, ಪರೀಕ್ಷೆಗಳಿಗೆ ಸಂಬಂಧಪಟ್ಟ ಒಂದು ನಿರ್ಣಯವನ್ನು ಅಧ್ಯಕ್ಷ ಪೀಠದಿಂದ ಡಿ.ವಿ.ಜಿ. ಮಂಡಿಸಿದರು. 'ಪರೀಕ್ಷೆಗಳನ್ನು ಪರಿಷತ್ತು ನಡೆಸತಕ್ಕದ್ದು ಮತ್ತು ಪಠ್ಯಪುಸ್ತಕಗಳನ್ನು ಗೊತ್ತುಮಾಡತಕ್ಕದ್ದು' ಎಂಬುದೇ ಅವರು ಸಭೆಯ ಒಪ್ಪಿಗೆಗೆ ಮಂಡಿಸಿದ ನಿರ್ಣಯ. ನನ್ನ ದೃಷ್ಟಿಯಲ್ಲಿ ಅದು ಪರಿಷತ್ತಿಗೆ ಆಜ್ಞೆ ಮಾಡುವ ದಾಟಿಯಲ್ಲಿತ್ತು. ಸಂಘ ಸಮ್ಮೇಳನದಲ್ಲಿ ಅವರ ಮಂಡನೆಯಾಗಿರುವ ಕಾರಣ, ಅದು ಪ್ರಾರ್ಥನೆಯ ರೂಪದಲ್ಲಿರಬೇಕೆಂದು ನನ್ನ ಭಾವನೆ. ನಾನು ಒಂದು ತಿದ್ದುಪಡಿ ಸೂಚಿಸಿದೆ: "ಪರೀಕ್ಷೆಗಳನ್ನು ನಡೆಸುವಂತೆ, ಪಠ್ಯಪುಸ್ತಕಗಳನ್ನು ಗೊತ್ತು ಮಾಡುವಂತೆ ಈ ಸಮ್ಮೇಳನ ಕನ್ನಡ ಸಾಹಿತ್ಯ ಪರಿಷತ್ತನ್ನು ಪ್ರಾರ್ಥಿಸುತ್ತದೆ."

ಈ ತಿದ್ದುಪಡಿಯನ್ನು ಸೂಚಿಸಿದ ಕೂಡಲೇ ಶ್ರೀ ಅವರಿಗೆ ನಸು ಮುನಿಸು ಬಂತೆಂದು ನನಗೆ ತೋರಿತು. ನನ್ನ ತಿದ್ದುಪಡಿಯಲ್ಲಿ ಯಾವ ಅಪಚಾರವೂ ಇರಲಿಲ್ಲ. ತಪ್ಪೂ ನನಗೆ ಕಾಣಿಸಲಿಲ್ಲ. ಶ್ರೀಯವರು ಅಸಂತುಷ್ಟರಾದುದು ಸ್ಪಷ್ಟವಾಗಿ ಕಂಡಿತು.

ನಾನು ಪೆಚ್ಚಾದೆ. ಸುಮ್ಮನಿದ್ದರೂ ಆಗುತ್ತಿತ್ತು. ಆದರೆ ನಾವೇನೂ ಮಾಡುವಂತಿರಲಿಲ್ಲ. ವೇದಿಕೆಯ ಮೇಲೆ ಡಿ.ವಿ.ಜಿ. ಮತ್ತು ಶ್ರೀ ಅವರಿಗೆ ಏನೋ ಮಾತುಕತೆ ವಿಚಾರ ವಿನಿಮಯ ನಡೆಯುತ್ತಿತ್ತು. ಅಂತೂ ಸಮ್ಮೇಳನ ಮುಗಿಯಿತು. ಶ್ರೀ ಅವರು ವೇದಿಕೆಯನ್ನಿಳಿದವರೇ ನನ್ನ ಕಡೆಗೆ ಮೆಲ್ಲನೆ ನಡೆದುಬಂದರು. ನನ್ನ ಭುಜದ ಮೇಲೆ ಕೈ ಹಾಕಿ, ''Sorry I had slightly misunderstood you. Your amendment was alright. There was nothing wrong in it''. ಎಂದರು. ನನಗೂ ಸಮಾಧಾನವಾಯಿತು. ಅವರ ಕೋಪ ಯಾವಾಗಲೂ ಹೀಗೆಯೇ. ಸಿಟ್ಟು ಕ್ಷಣಿಕ. ಅಂದು ಸಂಜೆ ನಾನು ಎಂದಿನಂತೆ ಅವರ ಮನೆಗೆ ಹೋದೆ. ಮಾಮೂಲಿನಂತೆ ನಮ್ಮ ಸಂಭಾಷಣೆಗಳು ನಡೆದವು.

## ಗದಾಯುದ್ಧ ನಾಟಕದ ಕೊನೆಯಲ್ಲಿ ನಡೆದ ಒಂದು ಪ್ರಸಂಗ

೧೯೩೭ ನೇ ಇಸವಿಯ ಏಪ್ರಿಲ್ ತಿಂಗಳಲ್ಲಿ ನಡೆದ ಕರ್ನಾಟಕ ಸಂಘದ ವಾರ್ಷಿಕೋತ್ಸವದಲ್ಲಿ ನಮ್ಮ ಕಲಾವಿದರು ಗದಾಯುದ್ಧ ನಾಟಕವನ್ನು 'ಶ್ರೀ' ಅವರ ಸಮ್ಮುಖದಲ್ಲಿಯೇ ಅಭಿನಯಿಸಿದರು. ಶ್ರೀ ಅವರ ಜೊತೆಯಲ್ಲಿ ಶ್ರೀ ಎ. ಎನ್. ಮೂರ್ತಿರಾಯರು, ಡಾ। ಎಸ್. ಎಸ್ ನಾರಾಯಣಶಾಸ್ತ್ರಿ, ಆನಂದ, ಶ್ರೀ ವಿ. ಸೀತಾರಾಮಯ್ಯನವರು ಈ ಉತ್ಸವದಲ್ಲಿ ಭಾಗವಹಿಸಿದ್ದರು. ಮೊದಲನೆ ದಿವಸ ರಾತ್ರಿ "ಆಷಾಢಭೂತಿ" ನಾಟಕವನ್ನು ಅಭಿನಯಿಸಿದೆವು. ಎರಡನೇ ದಿವಸ ರಾತ್ರಿ ಗದಾಯುದ್ಧ ನಾಟಕದ ಅಭಿನಯ ನಡೆಯಿತು. ನಮ್ಮ ನಿರ್ದೇಶಕ ಶ್ರೀ ಎಂ.ಎಸ್. ಹನುಮಂತನ್ ನಾಟಕ ತಂತ್ರದ ದೃಷ್ಟಿಯಿಂದ, ಕೆಲವು ಸೂಚನೆಗಳನ್ನು ನೀಡಿದ್ದರು. ನಾಟಕದ ಪರಿಣಾಮಕಾರೀ ಮುಕ್ತಾಯದ ದೃಷ್ಟಿಯಿಂದ ದುರ್ಯೋಧನನ ಸಾವು, ಅಶ್ವತ್ಥಾಮನ ನಿರ್ಗಮನ, ಇವುಗಳ ನಂತರ ಪರದೆ ಜೀಳಬೇಕು. ಮತ್ತೆ ಪರದೆ ಮೇಲೇರಿದ ನಂತರ 'ಶ್ರೀ' ಅವರು ವೇದಿಕೆಯನ್ನೇರಿ ಅಧ್ಯಕ್ಷ ಭಾಷಣ ಮಾಡಬೇಕು. ಎಂದು ಮೊದಲೇ ತೀರ್ಮಾನವಾಗಿತ್ತು. ಪರದೆ ಜೀಳುವ ಮುನ್ನವೇ ಶ್ರೀ ಅವರು ವೇದಿಕೆಯನ್ನೇರಿಬಿಟ್ಟರು. ನಿರ್ದೇಶಕರು ರೌದ್ರಾವತಾರ ತಾಳಿದರು. ಅವರೇ ಅಶ್ವತ್ಥಾಮನ ಪಾತ್ರ ವಹಿಸಿದ್ದರು. 'ಯಾರಲ್ಲಿ ಕೆಳಗಿಳಿಯಿರಿ' ಎಂದು ಗಟ್ಟಿಯಾಗಿ ಕೂಗಿಕೊಂಡರು. ಸಭೆಯಲ್ಲಿ ಗಂಭೀರ ಪರಿಸ್ಥಿತಿ ಉಂಟಾಯಿತು, ಶ್ರೀ ಅವರು ದಿಗ್ಭ್ರಮೆಗೊಂಡರು. ಅವರಿಗೆ ಪರಿಸ್ಥಿತಿಯ ಅರಿವಾಗಲಿಲ್ಲ. ಒರಟು ಕೂಗನ್ನು ಬಹುಶಃ ಅವರು ಹಿಂದೆಂದೂ ಕೇಳಿರಲಾರರು. ಸಭೆಯೆಲ್ಲ ಕಂಪಿಸಿತು. ನಿಶ್ಶಬ್ದತೆಯ ವಾತಾವರಣ ಮೂಡಿತು. ಅವರು ಕೆಳಗಿಳಿದರು.

ಪರದೆ ಮೇಲೆದ್ದ ಮೇಲೆ 'ಶ್ರೀ' ಅವರು ಮತ್ತೆ ವೇದಿಕೆಯನ್ನೇರಿ ಪಾತ್ರಗಳನ್ನು ಮಾಡಿದ್ದ ನಟರನ್ನು ಅಭಿನಂದಿಸಿ ಮಾತನಾಡಿದರು. ಆದರೆ ಅವರ ಭಾಷಣ ಹೇಗಿರುತ್ತದೆಂದು ಜನ ನಿರೀಕ್ಷಿಸಿದ್ದರೋ ಹಾಗಾಗಲಿಲ್ಲ.

ಈ ಅಚಾತುರ್ಯದ ತೀವ್ರ ಪರಿಣಾಮವಾದದ್ದು ಪ್ರೇಕ್ಷಕರ ಮೇಲೆ. ಅವರಿಗೆ ಉತ್ತಮ ಭಾಷಣ ಕೇಳುವ ಅವಕಾಶ ತಪ್ಪಿಹೋಯಿತು. ಕೊನೆಗೆ ಪ್ರವಾಸಿ ಮಂದಿರಕ್ಕೆ ಎಲ್ಲರೂ ವಾಪಸ್ಸು ತೆರಳುತ್ತಿದ್ದಾಗ, ನಾನು ಪರಿಸ್ಥಿತಿಯ ಅರಿವು ಮಾಡಿಕೊಟ್ಟು, ನಮ್ಮ ನಿರ್ದೇಶಕರ ಶಿಸ್ತಿನ ಮನೋಭಾವವನ್ನು ವಿವರಿಸಿದೆ. 'ಶ್ರೀ' ಅವರು ನಿಧಾನವಾಗಿ ಮೊದಲಿನ ಸ್ಥಿತಿಗೆ ಬಂದರು. "ಅವರ ಉದ್ದೇಶ ಘನವಾದುದು" ಎಂದು ಅವರೇ ಶ್ಲಾಘಿಸಿ "ಅಂತಹ ಸಂದರ್ಭವನ್ನು ಮೊದಲೇ ತಿಳಿಸಬಹುದಾಗಿತ್ತು" ಎಂದರು. ಕೆಲವಾರು ನಿಮಿಷಗಳಲ್ಲಿ ಅವರು ಎಂದಿನಂತೆ ಹಸನ್ಮುಖಿಗಳಾದರು.

## 'ಶ್ರೀ' ಅವರನ್ನು ಸರಿಗಟ್ಟುವ ನಾಯಕರ ಅಭಾವ

ಶ್ರೀ ಅವರು ಬೆಂಗಳೂರು ಬಿಟ್ಟರು. ಆಮೇಲೆ ಅವರ ದರ್ಶನ ಭಾಗ್ಯ ನನಗೆ ಲಭಿಸಲಿಲ್ಲ. ೧೯೪೬ರ ಜನವರಿ ಐದನೇ ತಾರೀಖು ರಾತ್ರಿ ಇರಬಹುದು. ನಾನೂ, ನನ್ನ ಇಬ್ಬರು ಮಿತ್ರರೂ ನನ್ನ ಗೆಳೆಯರಾದ ಶಿವಮೊಗ್ಗ ಜಿಲ್ಲೆಯ ಎಕ್ಸಿಕ್ಯೂಟೀವ್ ಇಂಜಿನಿಯರ್ ಶ್ರೀ ಜಿ. ಸುಬ್ಬರಾಯರ ಮನೆಯಲ್ಲಿ ರೇಡಿಯೋ ಕೇಳುತ್ತಿರುವಾಗ ಶ್ರೀ ಅವರ ನಿಧನ ವಾರ್ತೆ ಗಾಳಿಯಲ್ಲಿ ತೇಲಿಬಂತು. ನಮ್ಮೆಲ್ಲರನ್ನು ದುಃಖದಲ್ಲಿ ಮುಳುಗಿಸಿತು. ನನಗಂತೂ ಅಳು ಬಂತು. ರಾತ್ರಿ ಅಸಹನೀಯವೆನಿಸಿತು. ಮರುದಿನ ಸಂಜೆ ಶಿವಮೊಗ್ಗೆಯ ಕರ್ನಾಟಕ ಸಂಘದಲ್ಲಿ ನಡೆಯಬೇಕಾಗಿದ್ದ ನನ್ನ ಮತ್ತು ನನ್ನ ಸ್ನೇಹಿತರ ಉಪನ್ಯಾಸ ಕಾರ್ಯಕ್ರಮ ರದ್ದಾಯಿತು. ಶ್ರೀ ಕೃಷ್ಣಮೂರ್ತಿರಾಯರು, ಎಸ್. ವಿ. ಪರಮೇಶ್ವರಭಟ್ಟರು ಈ ದುಃಖದಲ್ಲಿ ನಮ್ಮೊಡನೆ ಕೂಡಿಕೊಂಡರು.

ಕನ್ನಡದ ಕೆಲಸ ನಿಧಾನವಾಯಿತು. ಶ್ರೀ ಅವರನ್ನು ಸರಿಗಟ್ಟುವ ನಾಯಕರನ್ನು ಇನ್ನೂ ನಾವು ಪಡೆಯಬೇಕಾಗುತ್ತೆ. ಮುಂದೆ ಇಂತಹ ಸಮರ್ಥ ನಾಯಕರು ಯಾರು ಸಿಕ್ಕುವರು ? ಎಂದು ನನ್ನ ಮನಸ್ಸಿನಲ್ಲಿ ಅನ್ನಿಸುತ್ತಿತ್ತು. ಬೇಲೂರು ಕೇಶವ ದಾಸರು ಒಂದು ಪತ್ರಿಕಾ ಹೇಳಿಕೆಯಲ್ಲಿ "ಶ್ರೀಕಂಠಯ್ಯನವರು ನಿಧನರಾದರು. ಅವರು ಅವತಾರ ಪುರುಷರು. ಇಂತಹ ಧೀಮಂತ ವ್ಯಕ್ತಿಗಳು ಯುಗಕ್ಕೊಮ್ಮೆ ಹುಟ್ಟಿಯಾರು" ಎಂದು ತಿಳಿಸಿದರು. ಈ ಮಾತಿನಲ್ಲಿ ಸತ್ಯಾಂಶವಿದೆಯೆಂದು ನನಗೆ ಈಗಲೂ ಅನ್ನಿಸುತ್ತಿದೆ.

ಒಮ್ಮೆ ಕುವೆಂಪು ಅವರನ್ನು ಭೇಟಿ ಮಾಡಿದಾಗ ಈ ವಿಚಾರ ಪ್ರಸ್ತಾಪಿಸಿದೆ. ಶ್ರೀ ಅವರು ತೆರವುಮಾಡಿದ ಜಾಗವನ್ನು ತಾವು ಭರ್ತಿಮಾಡಬೇಕೆಂದು ಪ್ರಾರ್ಥಿಸಿದೆ. ಅವರು ಒಂದೇ ಮಾತಿನಲ್ಲಿ ಹೇಳಿ ಮುಗಿಸಿದರು. "ಶ್ರೀಕಂಠಯ್ಯನವರು ಮಾಡಿದ ಕೆಲಸವನ್ನು ನಾವು ಯಾರೂ ಮಾಡಲಾರೆವು. ನಾವೆಲ್ಲ ಜೋಳದ ಪಾಳಿಯವರು." ಸಾಹಿತ್ಯ ತಪಸ್ವಿಗಳಾದ ಕುವೆಂಪು ಅವರು ಹೇಳಿದ್ದು ಒಂದು ರೀತಿಯಲ್ಲಿ ನಿಜ. ಇನ್ನೊಂದು ರೀತಿಯಲ್ಲಿ ಅಲ್ಲ. ಅವರ ಮನಸ್ಸೆಲ್ಲ ಉತ್ಕಟ ಹೃದಯಗಳಿಂದ ಶ್ರೀ ಅವರ ಅಭಿಲಾಷೆಯನ್ನು ಪೂರ್ಣಗೊಳಿಸುವುದರ ಕಡೆಗೇ ಇದ್ದಿತು.

ಶ್ರೀಕಂಠಯ್ಯನವರು ಕಾವ್ಯ ಸೃಷ್ಟಿಯ ಕಡೆಗೆ ಹೆಚ್ಚು ಗಮನ ಕೊಡಲಿಲ್ಲ. ಅವರ ಗಮನವೆಲ್ಲಾ ಕನ್ನಡಿಗರ ಸಂಘಟನೆ, ಕನ್ನಡದ ಉದ್ಧಾರಗಳ ಕಡೆಗೇ ಇದ್ದಿತು. ಅವರು ಬರೆದುದೆಲ್ಲ ದಿಕ್ ಪ್ರದರ್ಶನಾರ್ಥವಾಗಿ. ಅವರು ಸಾಹಿತ್ಯ ರಚನೆಗೆ ಕುಳಿತಿದ್ದರೆ ಕನ್ನಡದ ಕೆಲಸ ಯಾರು ಮಾಡುತ್ತಿದ್ದರು ?

ಕುವೆಂಪು ಅವರ 'ರಾಮಾಯಣ ದರ್ಶನ'ಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ದೊರೆತ ತರುಣದಲ್ಲಿ ನಾನು ತ. ಸು. ಶಾಮರಾಯರ ಜತೆಯಲ್ಲಿ ಕುವೆಂಪು ಅವರ ಮನೆಗೆ ಹೋಗಿದ್ದೆ. ಆಗ ನಾನು "ಬಿ. ಎಂ. ಶ್ರೀಕಂಠಯ್ಯನವರು ಬದುಕಿದ್ದರೆ ಎಷ್ಟು ಸಂತೋಷ ಪಡುತ್ತಿದ್ದರೋ" ಎಂದೆ. ಅದಕ್ಕೆ ಅವರು "ಈಗಲೂ ಅವರು ಸಂತೋಷ ಪಡುತ್ತಿಲ್ಲ ಎಂದು ನಿಮಗೆ ಹೇಗೆ ಗೊತ್ತು ?" ಎಂದಾಗ ನನ್ನ ಅಜ್ಞಾನಕ್ಕೆ ನಾನೇ ನಾಚಿದೆ. ಕುವೆಂಪು ಅವರ ಪಾಲಿಗೆ ಬಿ. ಎಂ. ಶ್ರೀ, ತಿ. ಕಣ್ಣಯ್ಯ, ಕೃಷ್ಣ ಶಾಸ್ತ್ರಿ ಅವರೆಲ್ಲ ಬದುಕಿದ್ದಾರೆ. ಅವರಿಂದ ಸ್ಫೂರ್ತಿ ಪಡೆದಿದ್ದಾರೆ. ಇಂದಿಗೂ ಮುಂದಿನ ತಲೆಮಾರಿನ ಜನರೆಲ್ಲ ಸ್ಫೂರ್ತಿ ಪಡೆಯುತ್ತಿದ್ದಾರೆ. ಈಗ ಎಷ್ಟೋ ಜನಕ್ಕೆ, 'ಶ್ರೀ' ಅವರ ಶಿಷ್ಯರಿಗೆ, ಕಿರಿಯರಿಗೆ, ಅನೇಕ ಪ್ರಶಸ್ತಿಗಳೂ ದೊರಕಿವೆ. ಜ್ಞಾನಪೀಠ ಪ್ರಶಸ್ತಿ ಈಗಾಗಲೇ ಮೂವರಿಗೆ ದೊರೆತಿದೆ. ಇವನ್ನೆಲ್ಲಾ ಮೇಲಿಂದಲೇ ಕಾಣು ತ್ತಿರುವ 'ಶ್ರೀ' ಅವರು ಸಂತೋಷ ಪಡುತ್ತಿದ್ದಾರೆಂದೇ ನಾವು ಭಾವಿಸಬೇಕು.

## ಕನ್ನಡ ನಾಡಿನ ಏಕೀಕರಣದ ಬಗೆಗೆ 'ಶ್ರೀ' ಅವರ ಕಲ್ಪನೆ !

ಕನ್ನಡ ನಾಡನ್ನು ಒಂದುಗೂಡಿಸಿ, ಒಂದೇ ಆಡಳಿತಕ್ಕೆ ಒಳಪಡಿಸಿದ್ದಲ್ಲದೆ, ಕನ್ನಡಿಗರ ಸರ್ವಾಂಗೀಣ ಪ್ರಗತಿ ಆಗದು. ಇದು ಶ್ರೀ ಅವರ ಖಚಿತಾಭಿಪ್ರಾಯ. ಮೈಸೂರಿನ ಜನಕ್ಕೆ ಏಕೀಕರಣ ಬೇಕಿರಲಿಲ್ಲ. ಕವಿಗಳಿಗೆ, ಸಾಹಿತಿಗಳಿಗೆ ಮಾತ್ರ ಅದು ಬೇಕಾಗಿತ್ತು. ಆದರೆ ಉತ್ತರ ಕರ್ನಾಟಕದ ಜನಕ್ಕೆ ಅದರ ಅಗತ್ಯವಿತ್ತು. ಶ್ರೀ ಅವರು ಮೈಸೂರು ಮಹಾರಾಜರ ಕೃಪಾಛತ್ರದ ಅಡಿಯಲ್ಲಿ ಕರ್ನಾಟಕ ಒಂದಾಗ ಬೇಕೆಂದು ಹೇಳುತ್ತಿದ್ದರು. ಮೈಸೂರಿನ ಮಹಾರಾಜರೇ ಕರ್ನಾಟಕದ ಅಧಿಪತಿಯೂ ಆಗಬೇಕು ಎಂದು ಸಾರುತ್ತಿದ್ದರು. ರಾಜಕಾರಣದಲ್ಲಿರುವ ಜನರು ನಾನಾ ಕಾರಣ ಗಳಿಗಾಗಿ ಏಕೀಕರಣವನ್ನು ಒಪ್ಪುತ್ತಿರಲಿಲ್ಲ. ಭಾರತ ಸ್ವತಂತ್ರವಾಗದೇ ಕರ್ನಾಟಕ ಒಂದಾಗದು ಎಂದು ಕೆಲವರು ವಾದಿಸುತ್ತಿದ್ದರು.

'ಕನ್ನಡ ತಾಯ ನೋಟ' ಎಂಬ ಪದ್ಯದಲ್ಲಿ 'ಶ್ರೀ' ಅವರ ಕನ್ನಡ ಪ್ರೇಮ ಮುಗಿಲು ಮುಟ್ಟಿದೆ. ಗೌರೀಶಂಕರ ಶಿಖರಕ್ಕೇರಿದೆ. ಕನ್ನಡಕ್ಕೆ, ಕನ್ನಡ ನಾಡಿಗೆ ಎಂದೆಂದೂ ಚ್ಯುತಿಯಿಲ್ಲವೆಂದು ಸಕಾರಣವಾಗಿ ನಿರೂಪಿಸಿದ್ದಾರೆ :

"ಪಳಮೆಯಲಿ ಪೇರಾಲಪಸು ನೀನು ಬಿತ್ತಲದು ಮೊಳೆತು ಮರವಾಗಿ,
ಪಡುವ ಮೂಡಲು ತೆಂಕ ಬಡಗಲೆಡೆ ಕೊಂಬೆಗಳ ನೆಸೆದೆಸೆದು ಬೀಗಿ,

ಈ ಕೊಂಬೆ ಕರಗಿದೊಡೆ ಆ ಕೊಂಬೆ ಬಿಳಿಲಿಳಿದು ಬೇರೂರಿ ತಾಗಿ,
ಒಂದೆ ಮರ ಮರವ ಮರವಾಗಿ ಇನ್ನು ಮುಂದೆ ಇಹುದು.
ನಿನ್ನೊಂದು ಕರ್ನಾಟಕ ರತ್ನ ಸಿಂಹಾಸನಂ ಬಾಳ್ಗಿ, ಅದು ಬೆಳಗೆ
ಕನ್ನಡದ ಮುಡಿಯಾಗಿ, ಕನ್ನಡದ ನುಡಿಯಾಗಿ,
ಕನ್ನಡದ ಬಾಳಗುಡಿಯಾಗಿ ಬಾರಮ್ಮ ಹರಸು!
ನೀನ್ ಬಾಳೆ, ಏನ್ ಬಾಳ್, ನಿನ್ನ ಮಕ್ಕಳಿರು! ಬಾನ್ ಬಾಳು ಬಾಳವ್ಮ ಬಾಳು!

ಬನ್ನಿ ಓ ಮಕ್ಕಳಿರಾ, ಒಕ್ಕೊರಲೆಲ್ಲರೂ ಕೂಗಿ ಈ ಒಕ್ಕೂಗ ಹಿರಿಯ ಕೂಗ, ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ನೆಲ್ಗೆ, ಸಿರಿಗನ್ನಡಂ ಗೆಲ್ಗೆ ಬಾಳ್ಗೆ, ಕನ್ನಡದ ತಾಯ್ ಗೆಲ್ಗೆ ಬಾಳ್ಗೆ.

ಕನ್ನಡ ನಾಡಿನ ಬಗೆಗೆ, ಕನ್ನಡ ಸಾಹಿತ್ಯದ ಬಗೆಗೆ 'ಶ್ರೀ' ಅವರು ಏನೇನು ಕನಸು ಕಂಡರೋ ಅದೆಲ್ಲ ತಕ್ಕಮಟ್ಟಿಗಾದರೂ ಈಗ ಈಡೇರಿದೆ. ಆದರ್ಶಕ್ಕೂ, ವಾಸ್ತವಿಕತೆಗೂ ಯಾವಾಗಲೂ ಅಂತರ ಇದ್ದೇ ಇರುತ್ತದೆ. ಅವರು ಮಾಡಿದ್ದು ಬಹಳ. ಆದರೂ ಆಗಬೇಕಾದುದು ಇನ್ನೂ ಬಹಳವಾಗಿದೆ. ಯಾವಾಗಲೂ ಇದ್ದೇ ಇರುತ್ತದೆ. ಅವರ,

"ನಿನ್ನ ನಾಡೊಂದಾಗಿ, ನಿನ್ನ ನುಡಿ ಮೇಲಾಗಿ, ಮನೆಮಕ್ಕಳೆಲ್ಲ ಸೇರೊಕ್ಕಲಾಗಿ ಪಾಡುವರು."

"ತಾಯ್ ಬದುಕಿ, ತಾವ್ ಬದುಕಿ, ಹೆರರ ಬದುಕಿಪರು."

ಇನ್ನೂ ಉಳಿದಿರುವ ಅವರ ಅಭೀಷ್ಟಗಳನ್ನು ನೆರವೇರಿಸಲು ಮುಂದಿನ ತಲೆಮಾರುಗಳ ಜನ ಸಿದ್ಧರಾಗಿಯೇ ಇದ್ದಾರಲ್ಲ! ಅವರ ಆಸೆಗಳನ್ನು ಪೂರೈಸಲು ಸದಾ ಶ್ರಮಿಸುವುದು ಕನ್ನಡಿಗರ ಪ್ರಥಮ ಕರ್ತವ್ಯ. 'ಶ್ರೀ' ಅವರಿಗೆ ನಾವು ಸಲ್ಲಿಸಬಹುದಾದ ಕಾಣಿಕೆ ಇನ್ನೇನು?

'ಸಿರಿಗನ್ನಡಂ ಗೆಲ್ಗೆ'

# ಶ್ರೀಯವರ ಸ್ವತಂತ್ರ ಕವನಗಳು

**ದೇಶ ಕುಲಕರ್ಣಿ**

ಶ್ರೀಯವರ ಇಂಗ್ಲಿಷ್ ಗೀತೆಗಳನ್ನು ಕುರಿತು ಈಗಾಗಲೇ ಕೇಳಿದ್ದೀರಿ. ಆದರೆ ಅವರ ಸ್ವತಂತ್ರ ಕವನಗಳನ್ನು ಕುರಿತು ಹೇಳುವಾಗಲೂ ಇಂಗ್ಲಿಷ್ ಗೀತೆಗಳಿಂದಲೇ ಪ್ರಾರಂಭಿಸಬೇಕಾದ್ದು ಒಂದು ವೈಶಿಷ್ಟ್ಯವೇ ಆಗಿದೆ. ಯಾಕೆಂದರೆ ಮೊದಲು ಪ್ರಕಟವಾದದ್ದು ಇಂಗ್ಲಿಷ್ ಗೀತಗಳು; ಅಲ್ಲದೆ ಡಬ್ಬಿಗಳಲ್ಲಿ ಕಾವ್ಯವನ್ನು ವರ್ಗೀಕರಣ ಮಾಡುವದು ಅಸಾಧ್ಯ ಎಂಬುದಕ್ಕೆ ಕುರುಹಾಗಿ ಈ ಸಂಗ್ರಹದಲ್ಲಿ ಶ್ರೀಯವರ ಮೂರು ಸ್ವತಂತ್ರ ಕವನಗಳೂ ಸೇರಿಕೊಂಡಿವೆ, ಒಬ್ಬ ಕವಿಯ ಸ್ವಂತ ಕೃತಿಯಲ್ಲೇ ಆಗಲಿ ಅನುವಾದದಲ್ಲೇ ಆಗಲಿ ಹಿಂಬದಿಗೆ ದುಡಿಯುವ ಕಾವ್ಯಶಕ್ತಿ ಒಂದೇ ಆಗಿರುತ್ತದೆ. ಇದೆಲ್ಲಕ್ಕೂ ಮೀರಿ ಮುಖ್ಯವಾದ ಮಾತೆಂದರೆ ಇಂಗ್ಲಿಷ್ ಗೀತೆಗಳಿಗೆ ಸಂಬಂಧಿಸಿದಂತೆಯೇ ಈ ಕವಿಯ ಸ್ವಂತ ಕವನಗಳನ್ನು ವಿವೇಚಿಸುವದು ಸಮಂಜಸ ಅಲ್ಲದೆ ಅನಿವಾರ್ಯವಾಗಿದೆ.

ಶ್ರೀಯವರು ಬರೆದ 74 ಕವನಗಳಲ್ಲಿ, ಅಂದರೆ ನಮಗೆ ಪ್ರಕಟಣೆಯ ಮೂಲಕ ಲಭ್ಯವಾಗಿರುವ 74 ಕವನಗಳಲ್ಲಿ, 14 ಮಾತ್ರ ಸ್ವತಂತ್ರ ಕೃತಿಗಳು. ಅವರ ಕಾವ್ಯ ಶಕ್ತಿಯ (ಪ್ರತಿಭೆ ಎಂಬ ಪದವನ್ನು ಬೇಕೆಂದೇ ಬಳಸಿಲ್ಲ) ಸಿಂಹಪಾಲು ಅನುವಾದಕ್ಕೆ ಮೀಸಲಾಗಿದೆ ಎಂದು ಇದರ ಅರ್ಥ. ರೊಮ್ಯಾಂಟಿಕ್ ಕಾವ್ಯಮಾರ್ಗವೆಂದು ಮುಂದೆ ಹೆಸರು ಪಡೆದ ಒಂದು ಸಂಸ್ಕೃತಿಯ ಚಳುವಳಿಗೆ ಪ್ರವರ್ತಕರಾದ ಈ ಗುರುವು ಬಹುತೇಕ ಅನುವಾದದಿಂದಲೇ ಇದನ್ನು ಸಾಧಿಸಿಕೊಟ್ಟಿದ್ದಾರೆಂದು ಇಲ್ಲಿ ಗಮನಿಸಿದರೆ ವೈಶಿಷ್ಟ್ಯ ಎಂದು ಇಂಗ್ಲಿಷ್ ಗೀತೆಗಳನ್ನು ಕುರಿತು ಹೇಳಿದ ಮಾತು ಮನವರಿಕೆಯಾಗುತ್ತದೆ. ಈ 14 ಕವನಗಳಲ್ಲಿ 5 ನಾಡು-ನುಡಿಯನ್ನು ಕುರಿತದ್ದು; 4 ರಾಜಭಕ್ತಿ, ಅರಸುಮನೆಗೆ ಸಂಬಂಧಿಸಿದ್ದು; ಮಿಕ್ಕ 5 ಇತರವು. ಆದರೆ ವಸ್ತು ಯಾವುದೇ ಇರಲಿ, ರಚನೆಯು ಸಾಂದರ್ಭಿಕ ಹಿನ್ನೆಲೆಯನ್ನು ಪಡೆದಿರುವದು 7 ರಲ್ಲಿ ಅಂದರೆ ಸ್ವತಂತ್ರ ಕೃತಿಗಳು ಅರ್ಧದಷ್ಟರಲ್ಲಿ ನಿಜವಾಗುವದರಿಂದ, ಈ ಕಾವ್ಯಕರ್ಮದ ಆಧಾರವು ಸ್ಪಷ್ಟವಾಗುತ್ತದೆ. ಹೀಗೆ ಸ್ವಂತದಲ್ಲೂ ಸಿಂಹಪಾಲು, ರಾಜರ ರಜತ ಮಹೋತ್ಸವಕ್ಕೋ ರಾಜರ ಅಳಿವಿನ ಚರಮ ಗೀತೆಗೋ, ವಿಶ್ವವಿದ್ಯಾನಿಲಯದ ಬೆಳ್ಳಿಯ ಹಬ್ಬಕ್ಕೋ, ಆದಿಕವಿಯ ಸಾವಿರ ವರ್ಷದ ಹಬ್ಬಕ್ಕೋ, ಸಾಹಿತ್ಯ ಸಮ್ಮೇಳನದ ಹಾರೈಕೆಗೋ, ಒಂದು ಕಾವ್ಯದ ಮುನ್ನುಡಿಗೋ ವ್ಯಯವಾದಾಗ ಕಾವ್ಯವಸ್ತು ಸ್ಫೂರ್ತಿಯನ್ನು ಕುರಿತು ಗಂಭೀರವಾಗಿ ಯೋಚಿಸಬೇಕಾಗುತ್ತದೆ. ಶ್ರೀಯವರು ಮೆಚ್ಚಿದ, ಮೆಚ್ಚಿ

ಅನುವಾದಿಸಿದ ಇಂಗ್ಲಿಷ್ ಗೀತೆಗಳ ಮೂಲದ್ರವ್ಯ ಸಹಜ ಸ್ಫೂರ್ತಿ; ಆದರೆ ಅವರ ಸ್ವತಂತ್ರ ಕಾವ್ಯದ ಮೂಲ ಬಹುಮಟ್ಟಿಗೆ ಸಾಂದರ್ಭಿಕ ರಚನೆ.

ವಿಶ್ವ ಕವಿತಾ ವಿಷಯಗಳಾದ ಯುದ್ಧ ಪ್ರೇಮ, ಮರಣ, ದೇಶಭಕ್ತಿ, ದೈವ ಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜಭಾಷೆಯಲ್ಲಿ ಸೌಂದರ್ಯದ ರಚನೆಯನ್ನು ಮಾಡಿರುವರೋ ಅದನ್ನೆಲ್ಲ ಶ್ರದ್ಧೆಯಿಂದ ಪರಾಮರ್ಶಿಸಿ, ಧೈರ್ಯ ವನ್ನೂ ಶಿಕ್ಷಣ ಬದ್ಧವಾದ ಸ್ವಾತಂತ್ರವನ್ನೂ ವಹಿಸಿ ಕನ್ನಡ ಕವಿಗಳು ಹಿಂದಕ್ಕಿಂತಲೂ ಮುಂದೆ ಇನ್ನೂ ಶ್ರೇಯಸ್ಸನ್ನು ತಾಳಲಿ ಎನ್ನುವುದೇ ನಮ್ಮೆಲ್ಲರ ಹಾರೈಕೆಯಾಗಿರತಕ್ಕ ದ್ದಾಗಿದೆ ಎಂಬುದು ಇಂಗ್ಲಿಷ್ ಗೀತೆಗಳಲ್ಲಿ ಕವಿ ಮಾಡಿದ ಅರಿಕೆಯಾಗಿದೆ. ಈ ಹಾರೈಕೆಗೂ ಮೀರಿ ರಮ್ಯಕಾವ್ಯವು ವಸ್ತು ವೈವಿಧ್ಯವನ್ನು ಮೆರೆದು, ಸಹಜವೂ ಸುಂದರವೂ ಪ್ರಬುದ್ಧವೂ ಆಗಿದ್ದು, ಹೋಗಿದ್ದು ಇವೊತ್ತು ಚರಿತ್ರೆಯ ಮಾತಾಗಿದೆ.

ಕಾವ್ಯವಸ್ತುವಿನ ವೈವಿಧ್ಯವನ್ನು ಕುರಿತು ಮೊದಲು ನೋಡೋಣ: ಇಂಗ್ಲಿಷ್ ಗೀತಗಳ ಬೆನ್ನಿಗೇ ಬಿದ್ದ ಇನ್ನೊಂದು ಕಾವ್ಯ ಸಂಗ್ರಹವನ್ನು ಗಮನಿಸಿದರೆ ಇದರ ಮಹತ್ವವು ಗೊತ್ತಾಗುತ್ತದೆ. 1928 ರಲ್ಲಿ, ಮಹಾರಾಜಾ ಕಾಲೇಜಿನ ವಿದ್ಯಾರ್ಥಿ ಗಳು ಕೆಲವರು ರಚಿಸಿದ ಸಣ್ಣ ಕವನವಗಳನ್ನು 'ಕಿರಿಯ ಕಾಣಿಕೆ' ಎಂಬ ಹೆಸರಿನಲ್ಲಿ, ಗುರುಶ್ರೀಯವರಿಗೆ ಅರ್ಪಿಸಿದರು. ಆ ಸಂದರ್ಭದಲ್ಲಿ ಟಿ.ಎಸ್ ವೆಂಕಣ್ಣಯ್ಯನವರು, ಆ ಚಾರಿತ್ರಿಕವಾದ ಪುಸ್ತಕಕ್ಕೆ ಮುನ್ನುಡಿ ಬರೆಯುತ್ತಾ ಹೊಸ ಕವನಗಳ ವಿಷಯವಾಗಿ ಹೀಗೆ ಹೇಳಿದ್ದಾರೆ;

> ಹಿಂದಿನ ಕವಿಗಳು ಜೀವನದ ಕೆಲವು ಸಂಗತಿಗಳನ್ನು ಮಾತ್ರ ಕಾವ್ಯವಸ್ತುವನ್ನಾಗಿ ಇಟ್ಟುಕೊಳ್ಳುತ್ತಿದ್ದರು. ಈಗಿನವರು ಜೀವ ನದ ಎಲ್ಲ ವಸ್ತುಗಳನ್ನೂ, ಅದರಲ್ಲಿಯೂ ಹಿಂದಿನವರು ತಾತ್ಸಾರ ಮಾಡಿಬಿಟ್ಟಿದ್ದ ಅಥವಾ ಅವರ ಕಣ್ಣಿಗೆ ಬೀಳದಿದ್ದ ಸಂಗತಿಗಳನ್ನು ಕಾವ್ಯವಸ್ತುವನ್ನಾಗಿ ಆರಿಸಿಕೊಳ್ಳುತ್ತಾರೆ. ಜೀವನವು ವಿಸ್ತಾರ ವಾದದ್ದು, ಅಪಾರವಾದದ್ದು. ಕಾವ್ಯದೃಷ್ಟಿಯಿಂದ ನೋಡ ಬಲ್ಲವರಿಗೆ ಎತ್ತ ನೋಡಿದರತ್ತ ಕಾವ್ಯಕ್ಕೆ ತಕ್ಕ ವಸ್ತುವು ಕಣ್ಣಿಗೆ ಬೀಳಬಹುದು.... ಇಲ್ಲಿ ನಾವು ಗಮನಿಸಬೇಕಾದ್ದು ಈ ತೆರೆದ ಸಂಗತಿಗಳಿಂದ ಕವಿಯ ಹೃದಯದಲ್ಲಿ ಹುಟ್ಟುವ ಭಾವಗಳು. 'ಆ ಭಾವಗಳು ಹೊಸವು, ಜನರು ತಿಳಿಯಬೇಕಾದವು' ಎಂದು ಕವಿಗೆ ತೋರಿದಾಗ ಆತನು ಅದನ್ನು ವ್ಯಕ್ತಗೊಳಿಸಲು ಪ್ರಯತ್ನಿ ಸುತ್ತಾನೆ...

ಹೀಗೆಯೇ ಹೊಸ ಪದ್ಯರೂಪಗಳು ಈ ಹೊಸ ಭಾವಗಳಿಗೆ ಅನುಗುಣವಾಗಿ ಬರುವ ರೀತಿಯೂ ಅದರಲ್ಲಿ ವ್ಯಕ್ತವಾಗಿದೆ. ಅರ್ಧಶತಮಾನದಷ್ಟು ಹಿಂದೆ ಕಾವ್ಯವಸ್ತು, ಕಾವ್ಯರೂಪದ ಬಗೆಗೆ ಇವರು ಆಡಿದ ಮಾತು, ಮಂಡಿಸಿರುವ ವಿಷಯ ಸರಣಿ, ಶ್ರೀಯವರ ಪ್ರಭಾವವು ಕಾವ್ಯಮಾರ್ಗವನ್ನು ಉಜ್ಜೀವಿಸುವಲ್ಲಿ ಎಷ್ಟು ತೀಕ್ಷ್ಣವಾಗಿತ್ತೆಂದು ತೋರಿಸುತ್ತದೆ. ಶ್ರೀಯವರ ಶಿಷ್ಯರಾದ ತೀ.ನಂ.ಶ್ರೀ, ಕುವೆಂಪು. ಎಲ್. ಗುಂಡಪ್ಪ ಎ.ಕೆ. ಪುಟ್ಟರಾಮು ಮುಂತಾದವರು ವಸ್ತು ವೈವಿಧ್ಯದ ಈ ಹೊಸ ತಿಳಿವಿಗೆ ಮಾರು ಹೋಗಿ ಪ್ರತಿಭೆ, ಹೀರೆಯ ಹೂವು, ಅರ್ಧಚಂದ್ರ, ಚಟಾಕಿ, ಹಕ್ಕಿ ಮುಂತಾದ ಅಶಾಸ್ತ್ರೀಯ ವಸ್ತುಗಳನ್ನು ಕಾವ್ಯಕ್ಕೆ ಬಳಸಿ ಯಶಸ್ವಿಯಾದಾಗ, ಸ್ವತಃ ಶ್ರೀಯವರು ತಮ್ಮ ಕವಿತೆಗಳಲ್ಲಿ ನಾಡು-ನುಡಿ, ರಾಜಭಕ್ತಿ-ದೇಶಭಕ್ತಿಗಳನ್ನು ಮಾತ್ರ ವಿಜೃಂಭಿಸುತ್ತ ಸುತ್ತಮುತ್ತಲಿನ ವಸ್ತುಗಳನ್ನು ಬಳಸದೆ, ಮಾಡಿದ ಪರಿತ್ಯಾಗವು ಆ ಸನ್ನಿವೇಶದ ಒಂದು ವಿಚಿತ್ರ ಸಂಗತಿ. (1920 ರಲ್ಲಿ ಪರಿಸ್ಥಿತಿ ಹೀಗಿದ್ದಾಗ 1940–41 ರಲ್ಲೂ ಶ್ರೀಯವರು ಅರಮನೆಯ ಪದ್ಯಗಳನ್ನು ಬರೆದಿದ್ದು ಒಂದು ಐರನಿಯಾಗಿದೆ) ಶ್ರೀಯವರ ಹಾರೈಕೆಯ ಎರಡನೆಯ ಅಂಶವಾದ ಸಹಜಭಾಷೆಯ ಸೌಂದರ್ಯ ರಚನೆಯನ್ನು ವಿವೇಚಿಸುವಾಗ ಮತ್ತೆ ಎರಡು ಸಂಕಲನಗಳೂ ಬೇಕಾಗುತ್ತವೆ :

ನರೆಮುಪ್ಪು ಯೌವನಕೆ
ಬಲ್ಲರೊಡನಾಟ ;
ಯೌವನವು ಸುಮ್ಮಾನ
ಮುಪ್ಪು ಮಿಡುಕಾಟ (ಮುಪ್ಪು ಯೌವನ)

ಅಥವಾ

ಕುರಿ ನೆಗೆದಾಟ, ಕುರುಬರ ಕೊಳಲಿನೂದಾಟ
ಇನಿಯರ ಬೇಟ, ಬನದಲಿ ಬೆಳದಿಂಗಳೂಟ
ಹೊಸ ಹೊಸ ನೋಟ, ಹಕ್ಕಿಗೆ ನಲಿವಿನ ಪಾಟ (ವಸಂತ)

ಅಥವಾ

ದೇವನಾಗಿರು, ಹಕ್ಕಿಯಾಗಿರು
ಕಲಿಸು ನಮಗೀ ಹರುಷವ
ಪ್ರೇಮಗಾಥವೊ, ಸೋಮಪಾನವೊ,
ಅಲೆವುದಾವುದು ಹೃದಯವೆ ? (ಬಾಣಡಿ)

ಅಥವಾ

ಕಾಡ ನೀಳುತ ಗಾಳಿ
ಬರುವಂತೆ ಬನ್ನಿ,
ಓಟ ಕೊಚ್ಚುತ ಕಡಲು
ಬರುವಂತೆ ಬನ್ನಿ,
ಓಡಿ ಬನ್ನಿ, ಓಡಿ ಬನ್ನಿ
ಓಡಿ ಓಡಿ ಬನ್ನಿ (ಕಾಳಗದ ಪದ)

ಇವು ಇಂಗ್ಲಿಷ್ ಗೀತಗಳಿಂದ ಕಷ್ಟವಿಲ್ಲದೆ ಎತ್ತಿಕೊಂಡ ಉದಾಹರಣೆಗಳು. ಇಲ್ಲಿ ಶೈಲಿಯು ಸವಿಯಾಗುವುದು, ರುಚಿಯಾಗುವದು ಆಧುನಿಕ ಕನ್ನಡದ ಲಾಲಿತ್ಯದಿಂದ. ಪದ್ಯ ರೂಪಗಳಂತೂ ಹಳೆಯ ಛಂದಸ್ಸಿನ ಆಧಾರದ ಮೇಲೆ ಸುಧಾರಿತವಾದ ಹೊಸ ತಿರುವುಗಳು. ಇನ್ನು ನಿರೂಪಣೆಯಲ್ಲಿ ಸಹಜವೆಂಬಂತೆ ಬರುವ ಒಳಪ್ರಾಸ, ಅಂತ್ಯ ಪ್ರಾಸ, ಕ್ರಿಯೆಗೆ ಅನುಗುಣವಾಗಿ ಹಂತ ಹಂತವಾಗಿ ಮಿಡಿಯುವ ಲಯ ಭಾವ ಗೀತಾತ್ಮಕ ರಚನೆಯನ್ನು ಸೊಗಯಿಸುತ್ತವೆ. (ಮೊದಲನೆಯ ಘಟ್ಟದ ಓಡಿ ಬನ್ನಿಯ ಓಟ ಮತ್ತು ಕೊನೆಯ ಘಟ್ಟದ ಓಡಿ ಓಡಿ ಬನ್ನಿಯ ರಭಸಗಳನ್ನು ಧ್ವನಿಸಲು ಕಾಳಗದ ಪದವನ್ನು ಉದಾಹರಿಸಿದ್ದೇನೆ).

ಶ್ರೀಯವರ ಸ್ವತಂತ್ರ ಕವನಗಳಲ್ಲಿ ಬರುವ ಸಾಲುಗಳನ್ನು ಈಗ ನೋಡ ಬಹುದು :

ಅದ್ಭುತ ಲೋಕದ ಮಾತೆ, ಅಳಿಯದಳ್, ಬಾನ್‌ಬಾಳ ಪೆರ್ಮೆಗಳ ತಾಯಿ
ತಲೆಯಲ್ಲಿ ಪೊನ್ನಾಮುಡಿ, ಪದಿವರಿಲಪೇವು, ಬೆಳ್ದಾವರೆಯ ಪೂಂಗುಮ್ !
ಸುತ್ತಲುಂ ಪೊನ್ನಾಡ ಕನ್ನಡದ ಪೆರ್ಮನಡಿಗಳ್, ಸಾವನೊದೆದು ಬೆಳಗಿ
ಕನ್ನಡದ ಮಕ್ಕಳ್ಗೆ ಕನ್ನಡದ ಪಾಲೆರೆದು. ಬಾಳ್ಗೆ ಬಾಳ್ ಪೊಯ್ದು,
ಬಾಳ್ವವರು ಮೆರೆವವರು, ಪೆರ್‌ನೋಟ ! ಸಿರಿಯ ತಾಯ್ ಸಿರಿಯ ಮಕ್ಕಳ್ !

(ಕನ್ನಡ ತಾಯ ನೋಟ)

ನಡುವಗಲ ನೇಸರನು ಕರ್ಪು ಪಿಡಿದಿಡಿದಂತೆ,
ನೆರೆಯ ಬೆಳ್ದಿಂಗಳನು ಪಾವು ಗಿಡಿದಂತೆ,
ತಿಳಿಯಾದ ಬಾನಿಂದ ಬರಸಿಡಿಲ್ ಸಿಡಿದಂತೆ
ಬೆನ್ನಿರಿವ ಕಳ್ಳ ಕೊಲೆ ಸುರಗಿಯಂತೆ
ಎತ್ತಣಿಂದೆರಗಿತೋ ಮೃತ್ಯು ! (ಬಾನಕೊಂಡ ಕೃಷ್ಣನ್)

ಅಲ್ಲದುದನಹುದೆಂದು, ಅಹುದನಲ್ಲೆಂದು,
ಇಲ್ಲದುದನಿಹುದೆಂದು, ಇಹುದನಿಲ್ಲೆಂದು,
ನಲ್ಲದಂ ಪೊಲೆಯೆಂದು, ಪೊಲೆನಲ್ಲದೆಂದು
ತಿರಿಸಿದರ್ ಮಾಯಾವಿಗಳ್ ಬಾಳ್ವ ಮಕ್ಕಳಂ ಸಾವ ಸಂಸಾರ ಸುತ್ತಿ

(ಶುಕ್ರಗೀತೆ)

ಇಲ್ಲಿಯ ಭಾಷೆಯು ಹಳಗನ್ನಡ–ನಡುಗನ್ನಡಗಳ ಮಿಶ್ರರೂಪ ಮತ್ತು ಬಹಳಷ್ಟು ಕವಿತೆಗಳು ಪ್ರಧಾನ ರೀತಿಯವು. ವಸ್ತುವು ವೈಭವದ್ದಾದ್ದರಿಂದ ಬಹುಶಃ ಸ್ವರೂಪವೂ ಆ ರೀತಿಯನ್ನು ಹಿಡಿದಿರಬಹುದು. ಅಂತಲೇ ವಸ್ತುವು ಕಾವ್ಯಕ್ಕೆ ಗಡಿ ಹಾಕಿದಂತೆಯೇ ಛಂದೋರೂಪವೂ ಗಡಿ ಹಾಕುತ್ತ ಒಟ್ಟು ಕಾವ್ಯವು ಒಮ್ಮೆಲೇ ಮಡಿಯೂ ಖಾಸಗಿಯೂ ಆಗಿಬಿಡುತ್ತದೆ. ಇಂಗ್ಲಿಷ್ ಗೀತಗಳ ಸಾರ್ವತ್ರಿಕತೆ–ಸಾರ್ವಕಾಲಿಕತೆಗಳು ಇವಕ್ಕೆ ಬರಹ, ತಾತ್ಕಾಲಿಕವಾಗಿ ಚರಿತ್ರೆಯ ಗುರುತಾಗುತ್ತವೆ.

ಇಂಗ್ಲಿಷ್ ಗೀತಗಳನ್ನು ಅನುವಾದಿಸುವ ಸಂದರ್ಭದಲ್ಲಿ 'ಮೂಲವನ್ನು ಪ್ರತಿಬಿಂಬಿಸುವ ಕರ್ತವ್ಯವನ್ನು ಮುಂದಿಟ್ಟುಕೊಂಡಿದ್ದ' ಶ್ರೀ ಅವರು ಕೆಲವು ಕಡೆ ಹೆಸರು, ಭಾವ ಮುಂತಾದುವು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ, ಸಾಮಾನ್ಯವಾಗಿ ಪದಪ್ರಯೋಗ, ಶೈಲಿ, ಛಂದಸ್ಸು–ಇವೆಲ್ಲವೂ ಮೂಲ ಕವಿಯ ವ್ಯಕ್ತಿತ್ವವನ್ನೇ ಅನುಸರಿಸಿವೆ ಎಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ಕವಿಯ ಮನೋಧರ್ಮವನ್ನು ಮತ್ತು ಕಾವ್ಯರಚನೆಯ ಹಿನ್ನೆಲೆ ಮುನ್ನೆಲೆಗಳನ್ನು ತಿಳಿದುಕೊಳ್ಳುವಾಗ ಅವನ್ನೇ ಬಿಟ್ಟುಕೊಡುವ ಈ ಸುಳಿವಿಗಿಂತ ಪ್ರಯೋಜನಕಾರಿಯಾದದ್ದು ಬೇರೊಂದಿಲ್ಲ. ಇಂಗ್ಲಿಷ್‌ನ ರೊಮಾಂಟಿಕ್ ಕಾವ್ಯಮಾರ್ಗವು ಪದಪ್ರಯೋಗ, ಶೈಲಿ, ಛಂದಸ್ಸು ಮತ್ತು ರಸಪ್ರತಿಪಾದನೆಯಲ್ಲಿ ಆಗಾಗಲೇ ಸಿದ್ಧಿ ಪಡೆದುಕೊಂಡಿದ್ದರಿಂದ ಅದರ ಅನುಸರಣೆಯೂ ಶಕ್ತಿಶಾಲಿಯಾಯಿತು. ಆದರೆ ಅನುವಾದವಲ್ಲದೆ, ತಾನೇ ಸ್ವತಂತ್ರವಾಗಿ ಕ್ರಿಯಾತ್ಮಕವಾಗುವಾಗ ವಿಧಾನಕ್ಕೆ ಒಗ್ಗಿದ್ದರೂ ವಸ್ತುವಿಗೆ ಒಗ್ಗಿರಲಿಲ್ಲವಾಗಿ, ಕನ್ನಡದ ಜಾಯಮಾನದಲ್ಲಿನ್ನೂ ಹೊಸ ಪದಪ್ರಯೋಗ, ಶೈಲಿ, ಛಂದಸ್ಸಿನ ಸಿದ್ಧಿಯಾಗಿರಲಿಲ್ಲ. ಶ್ರೀಯವರ ಸ್ವತಂತ್ರ ಕವಿತೆಗಳು 'ಲಲಿತ'ವಾಗದಿರುವದಕ್ಕೆ ಇದೂ ಒಂದು ಕಾರಣ.

ಮಡಿವಂತಿಕೆಯ ವಿಷಯವಾಗಿ ಇನ್ನೊಂದು ಮಾತಿದೆ. 'ಅವಳ ತೊಡಿಗೆ ಇವಳಿಗಿಟ್ಟು ಹಾಡ ಬಯಸುವ' ಕವಿಯು, ಇವಳ ಎಂದರೆ ಕನ್ನಡ ಕಾವ್ಯದ ಮಡಿವಂತಿಗೆಯ ಬಗೆಗೆ, ಅನುವಾದ ರೂಪದಲ್ಲಿಯೂ, ಎಷ್ಟು ಕಾಳಜಿ ವಹಿಸಿದ್ದಾರೆಂದರೆ ಇಂಗ್ಲಿಷ್ ಗೀತಗಳನ್ನು ಕನ್ನಡಕ್ಕೆ ರೂಪ ಸಮೇತ ಇಳಿಸುವ ಪ್ರಯತ್ನದ ವಿಷಯದಲ್ಲಿ ಅಚ್ಚ ಕನ್ನಡಿಗರು ಅಸಮಾಧಾನ ಪಡಬಾರದೆಂದು ಪ್ರಾರ್ಥಿಸುವಷ್ಟು apologetic ಧೋರಣೆಯನ್ನು ತಳೆಯುತ್ತಾರೆ. ಹೊಸವಸ್ತು–ವಿಧಾನಗಳನ್ನು ಕನ್ನಡಕ್ಕೆ ತಂದು ಸ್ವಜನಕ್ಕೆ ತೋರಿಸಬೇಕೆಂಬ ತೀವ್ರ ಹಂಬಲದ್ದೂ, ಈ ತೆರನ ಸಂಕೋಚ ಮತ್ತು ನಿರ್ಬಂಧಗಳಿಂದ ಅವರ ಕಾವ್ಯವು ತಾನು ಸ್ವತಂತ್ರವಾಗದೆ ಹೊಸ ಅಭಿವ್ಯಕ್ತಿಗೆ ಎರವಾಯಿತು, ಆದುದರಿಂದ ಇಂಗ್ಲಿಷ್ ಗೀತಗಳು ಒಂದು ವಿಹಾರ ಸ್ಥಳವಾಗಿ, ಸ್ವತಂತ್ರ ಕವಿತೆಗಳು, ಸಂಜೆ ಸಮ್ರವಾಗಿ ಗೂಡಿಗೆ ಮರಳುವ ಹಕ್ಕಿಯ ಹಾಗಾಯಿತು. ಇಂಗ್ಲಿಷ್ ಗೀತಗಳ ಅನುವಾದವು ಈ ಹಂಬಲವನ್ನು ತಣಿಸುವಲ್ಲಿ ಕೇವಲ substitute Mechanism ನ ಪಾತ್ರವನ್ನು ವಹಿಸಬೇಕಾಯಿತು. ಶ್ರೀ ಎ. ಎನ್. ಮೂರ್ತಿರಾಯರು ತುಸು ಭಿನ್ನ ದೃಷ್ಟಿಯಿಂದ ಇದನ್ನು responsive imagination ಎಂದು ವರ್ಣಿಸಿದ್ದಾರೆ.

ಶ್ರೀಯವರ ಹಾರೈಕೆಯಲ್ಲಿನ ಮೂರನೆಯ ಮತ್ತು ಕೊನೆಯ ಕಾವ್ಯಗುಣವಾದ ನಿರ್ವಹಣೆಯಲ್ಲಿ ಧೈರ್ಯ ಮತ್ತು ಸ್ವಾತಂತ್ರ್ಯವನ್ನು ಕುರಿತು ಈಗ ಪರಿಶೀಲಿಸಬಹುದು. ಧೈರ್ಯದ ವಿಚಾರವಾಗಿ ಮೇಲೆ ಮಡಿವಂತಿಕೆಯ ಸಂದರ್ಭದಲ್ಲಿ ಕೆಲವು

ಮಾತು ಬಂದಿದೆ. ನಾಡು–ನುಡಿ, ದೇಶಭಕ್ತಿ, ರಾಜಭಕ್ತಿ ಆದರ್ಶದ ಮೌಲ್ಯಗಳಾಗಿ ಎಂದಿನಿಂದಲೋ ಅಂಗೀಕೃತವಾಗಿವೆ. ಇಂಗ್ಲಿಷ್ ಗೀತಗಳಲ್ಲೂ ಇವು ಉಂಟು. ಆದರೆ ಶತಮಾನಗಳ ದಾಸ್ಯದಿಂದ ಬಲಿಯಾಗಿದ್ದ ಈ ನಾಡಿಗೆ ಸ್ಥಳೀಯ ನುಡಿ, ರಾಜಭಕ್ತಿ ಗಿಂತ ಮಿಗಿಲಾಗಿ ರಾಷ್ಟ್ರೀಯತೆಯ ಪ್ರಜ್ಞೆ ಅವಶ್ಯಕವಾಗಿತ್ತು. ಈ ನೆಲದ ಧೀಮಂತರು ನಾಯಕ ಮಣಿಗಳು, ದಾರ್ಶನಿಕರು ಇದಕ್ಕಾಗಿ ಶ್ರಮಿಸಿರುವುದೂ, ಮುಂದೆ ಸ್ವಾತಂತ್ರ್ಯ ಚಳುವಳಿಯಲ್ಲಿ ಈ ಪ್ರಜ್ಞೆ ಮೂಲ ರೂಪದಲ್ಲಿದ್ದುದೂ ಎಲ್ಲರಿಗೂ ಗೊತ್ತಿರುವ ಇತಿ ಹಾಸವಾಗಿದೆ. 1920 ರ ಸುಮಾರಿಗೆ ಸ್ವಾತಂತ್ರ್ಯದ ಹೋರಾಟವು ಒಂದು ನಿರ್ದಿಷ್ಟ ಕಾವನ್ನು ತಲುಪಿ, 1940 ರ ಹೊತ್ತಿಗೆ ಸ್ವರಾಜ್ಯ, ರಾಷ್ಟ್ರ ಸರ್ಕಾರ, ಪ್ರಜಾಸತ್ತೆಗಳ ಜಿಜ್ಞಾಸೆ ನಡೆಯುತ್ತಿತ್ತು. ಆದರೆ ಅಂಥ ಸಂದಿಗ್ಧ ಕಾಲದಲ್ಲಿ ಒಂದು ಕಡೆ ಅತಿಯೆನಿ ಸುವ ಆಂಗ್ಲ ಪಕ್ಷಪಾತ ಮತ್ತು ಇನ್ನೊಂದು ಕಡೆ ಅತಿಯೆನಿಸುವ ಸ್ಥಳೀಯ ರಾಜ ಸೇವೆಯ ಧೋರಣೆಯು ಶ್ರೀಯವರ ಕಾವ್ಯದಲ್ಲಿ ಮೆರೆದು, ಸಹಜ ಕವಿ ಸಂವೇದನೆ ಯನ್ನು ಮರೆಯಾಗಿಸಿತು. ಇಂಗ್ಲಿಷ್ ಗೀತಗಳಲ್ಲಿ 'ಕಾಣಿಕೆ' ರೂಪದಲ್ಲಿ ಮತ್ತು ಹೊಂಗನಸುಗಳಲ್ಲಿ 'ಕನ್ನಡ ಹೆಣ್ಣು' ಎಂಬ ಹೆಸರಿನಲ್ಲಿ ಬಂದಿರುವ ಸ್ವತಂತ್ರ ಕವನದಲ್ಲಿ ಶ್ರೀಯವರ ಕಾವ್ಯದ ಮ್ಯಾನಿಫೆಸ್ಟೋ ವ್ಯಕ್ತಗೊಂಡಿದೆ. ಕಾವ್ಯಕನ್ನಿಕೆಯರಿಬ್ಬರ ಸಂಗದಲ್ಲಿ ಇವರ ಕಾವ್ಯಾಕಾಂಕ್ಷೆಯು ಚಿಗುರಿದ ಒಂದು ಸುಂದರ ಚಿತ್ರ ಇಲ್ಲಿದೆ. ಆದರೆ

**ಪಡುವ ಕಡಲ ಹೊನ್ನ ಹೆಣ್ಣು,**
**ನನ್ನ ಜೀವದುಸಿರು, ಕಣ್ಣು**

ಎನ್ನುವವರೆಗೂ ಹೋಗುತ್ತಾರೆ. ಹಾಗೆಯೇ ಇಂಗ್ಲಿಷ್ ಸಾಹಿತ್ಯ ಸಮುದ್ರವನ್ನು 'ದಿವ್ಯ' ರತ್ನಾಕರವೆನ್ನುವುದೂ, ಆಗಿನ ಸನ್ನಿವೇಶದಲ್ಲಿ Blending of Souls ಎನ್ನುವ ಮಾತೂ, ಆಳೆ ಬ್ರಿಟಾನಿಯಾ ಪದ್ಯವೂ ಇರುಸು ಮುರುಸಿನ ಸಂಗತಿಗಳಾಗಿವೆ 'ಭಾರತಮಾತೆಯ ನುಡಿ' ಪದ್ಯವು ನಾಡಿನ ಮಹಿಮೆ, ಧರ್ಮ, ಘನತೆಯಿಂದ ಆಶಾ ದಾಯಕವಾಗಿ ಪ್ರಾರಂಭವಾದರೂ, ಪ್ರಜೆಗಳು ದೇಶವನ್ನು ಅವನತಿಗೆ ತಂದಾಗ, ಮತ್ತೆ ಅದೇ ಜಾಡಿಗೆ ತಿರುಗಿ ಭಾರತಮಾತೆಯ ಬಾಯಲ್ಲಿ ಈ ಮಾತುಗಳು ಬರುತ್ತವೆ :

**ಕಡೆಗೆ ನೆನೆದೆನು ನನ್ನ ಮನೆತನ ನೇರವಾಗುವ ತೆರವನು,**
**ಕಡಲ ರಾಣಿಯ ಬ್ರಿಟಾನಿಯಳ, ನನ್ನಿನಿಯ ತಂಗಿಯನೆರವನು ;**

**ಗೆಲಿದು ನಾಡನು ಬೆಸೆದಳು–ನೆಲ**
**ಕೊಲುಮೆ ಕಟ್ಟನು ಹೊಸೆದಳು.**

ತನ್ನ ಸಂಸ್ಕೃತಿ, ಶೌರ್ಯಗಳ ಬಲದಿಂದ ಕಳೆದುಕೊಂಡ ಉನ್ನತಿಯನ್ನು ಮರಳಿ ಪಡೆ ಯುವ ಸ್ಫೂರ್ತಿ ಕಲ್ಪನೆಗೆ ಬದಲು, ಈ ತೆರನ ನೆರವನ್ನು ಕರೆಯುದ ನಾಡ ದೇವಿಯ ಕಲ್ಪನೆಯು ಅನುಚಿತವೆನಿಸುತ್ತದೆ. ಮತ್ತೆ 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ'ದಲ್ಲಿ ಬರುವ ದೇವಿಯರಲ್ಲಿ

ಆವ ದೇವಿಯರಿವರು ಮೂವರು ? -ಕನ್ನಡದ ಸಿರಿಯೊಬ್ಬಳು,
ಅಕ್ಕತಂಗಿಯರಂತೆ ತಬ್ಬುತ, ಕಡಲರಾಣಿಯದೊಬ್ಬಳು,
ಶ್ರೀ ಭರತಮಾತೆಯದೊಬ್ಬಳು :

ಎನ್ನುವಾಗ ಕಡಲ ರಾಣಿಯ ಪ್ರಭುತ್ವವಿದೆ. ಅದೇ ಪದ್ಯದಲ್ಲಿ ಕೃಷ್ಣರಾಜರನ್ನು ವರ್ಣಿಸುತ್ತ

ಸ್ವಾಮಿಭಕ್ತಿಯೊಳೆರಡನೆಣಿಸದೆಯೆ, ತಮ್ಮೊಡೆಯತನವ ನಡೆಯುವರು

ಎನ್ನುವಲ್ಲಿ ಪರೋಕ್ಷವಾದ ಸಾಮಂತತೆಯಿದೆ. (ಇದು ಯದುರಾಯರಿಗೆ ದೇವಿ ಕೊಡುವ ಒಂದು vision ನಲ್ಲಿ ಬರುತ್ತದೆ ಎಂಬುದನ್ನು ವಿಶೇಷವಾಗಿ ಗಮನಿಸ ಬೇಕು.) 'ಹೂಂಗನಸು'ಗಳು ಸಂಗ್ರಹಕ್ಕೆ ಆರಾಧನರೂಪವಾದ ಮುನ್ನುಡಿ ಬರ ಯುತ್ತ, ಅವರ ಶಿಷ್ಯರಾದ ಶ್ರೀನಿವಾಸರು ಇವರ ಕಾವ್ಯದಲ್ಲಿ ಏನೇನಿದೆ ಎಂದು ಹೇಳುವಾಗ ಸಜ್ಜನರಾದ ಆಂಗ್ಲರನ್ನು ಕುರಿತು ವಿಶ್ವಾಸವಿದೆ ಎಂದು ಸೂಚಿಸಿದ್ದಾರೆ. ವಿಶ್ವಾಸವೆಂದು ಸಜ್ಜನಿಕೆಯ ಶ್ರೀನಿವಾಸರು ಬಳಿಸಿರುವ ಪದ ತೀರ ಮೃದುವಾಯಿತು. ಈ ವಿಶ್ವಾಸವು ಸಹಿಷ್ಣುತೆ ಅಥವಾ ಹೃದಯದ ವಿಶಾಲತೆಯ ಫಲ ಎಂದು ಒಪ್ಪುವದು ಸಾಧ್ಯವಾಗದಷ್ಟು ಮೀರಿಹೋಗಿದೆ.

ಇದೇ ಧೋರಣೆಯ ಇನ್ನೊಂದು ಮುಖವನ್ನು ರಾಜಭಕ್ತಿಯಲ್ಲಿ ಕಾಣಬಹು ದಾಗಿದೆ. ನಾಡು, ನಾಡಿನ ಜನದ ವರ್ಣನೆಯ ಸೊಬಗಿನಿಂದ ಶುರುವಾಗುವ 'ಮೈಸೂರು ಮಕ್ಕಳು'

ಚಿನ್ನದ ನಾಡದು ಮೈಸೂರು

ಇತ್ಯಾದಿ ಪುಟ್ಟ ಸೇತುವೆಯನ್ನು ದಾಟಿದ್ದೆ ತಡ ರಾಜ ಪ್ರಶಂಸೆಗೆ ಧುಮುಕುತ್ತದೆ, ರಾಜಪ್ರಶಂಸೆಯು, ರಾಜವೈಭವದ ರೀವಿಗನುಗುಣವಾಗಿ, ಛಂದಸ್ಸಿನ ಸರಳ ಅಡಕಕ್ಕೆ ನಿಲುಕದಂಥ, ಪ್ರಗಾಥ ಸ್ವರೂಪವನ್ನು ಪದ್ಯದ ಮೇಲೆ ಹೇರಿದೆ. ಪಂಕ್ತಿಗಳು ಮುರಿಯನ್ನೇ ಕಾಣದೆ ಪುಟದಗಲಕ್ಕೂ ಧೀರವಾಗಿ ಹೊನಲಾಗಿ ಹರಿಯುತ್ತವೆ . ಮಿಕ್ಕು ಕೊಸರಾಗುತ್ತವೆ. 1927 ರಲ್ಲಿ ನಾಲ್ಮಡಿ ಕೃಷ್ಣರಾಜರನ್ನು ಕುರಿತು ಬರೆಯು ವಾಗ ಇದ್ದ ಸಂಯಮ ಗಾಂಭೀರ್ಯವು 1940 ರ ಹೊತ್ತಿಗೆ ಕರಗಿ ಹೋಗಿ 'ಶ್ರೀ ಜಿರ್ಯ ಬೆಳಕು' ಪದ್ಯದಲ್ಲಿ

ಆಡಿ, ಕುಣಿದಾಡಿ, ಜಲವೆಲ್ಲಾ !
ಪಾಡಿ, ಓ ಪಾಡಿ, ನೆಲವೆಲ್ಲಾ !
ಕೂಗಿ, ನಾಡೆಲ್ಲಾ, ಬೀಗಿ, ಬೀಡೆಲ್ಲಾ
ಓಲಾಡಿ, ಊರೆಲ್ಲ, ಮೇಲಾಡಿ ಹಳ್ಳಿಗಾಡೆಲ್ಲಾ
ಸೋಲು ನಮಗಿನ್ನಿಲ್ಲ, ಗೆಲವೆ ಇನ್ನೆಲ್ಲಾ !

ಹೀಗೆ ಉದ್ಗಾರವಾಗುತ್ತದೆ. ವಿಶ್ವದ ಹುಟ್ಟು, ಆರ್ಯ ಧರ್ಮ, ದುಷ್ಟ ಶಿಷ್ಟ ಶಕ್ತಿಗಳ ನಿರಂತರ ಸಂಘರ್ಷಗಳನ್ನು ನುಡಿಯುವ 'ಶುಕ್ರಗೀತೆ'ಯೆಂಬ ಕವನ

ಶ್ರೀ ಜಯನ್ ನಿಡುಬಾಳಿ ನಮ್ಮನೊಲಿದಾಳ್ಗೆ

ಎಂಬ ಭರತ ವಾಕ್ಯವನ್ನು ಹೊತ್ತು ಕಾವ್ಯಾಂಶವನ್ನು ಕಳೆದುಕೊಂಡಿದೆ. ಹೀಗೆಯೇ 'ಧರ್ಮಯುದ್ಧ'ದಲ್ಲಿ ಕಾಳಗವನ್ನು 'ಋಣವಿದಲ್ಲವೆ ಭಾರತ ಮಾತೆಯ ?' ಎಂದು ಹೇಳುವಾಗಲೂ ಮತ್ತು 'ಗೆಲವು ಶ್ರೀ ಜಯಚಾಮರಾಜಗೆ!' ಎಂದು ಕೋರುವಾಗಲೂ ಈ ಧೋರಣೆಯ ಎರಡು ಮುಖಗಳೂ ಮೇಳವಾಗಿವೆ. ಈ ಧೋರಣೆಯನ್ನು ಪ್ರಶ್ನಿಸುವಾಗ ಅಗೌರವದ ಮಾತೇನಿಲ್ಲ ; ಔಚಿತ್ಯದ ಪ್ರಸ್ತಾವವಿದೆ, ಅಷ್ಟೆ ! ಆದರೂ ಈ ರಚನೆಗಳ ಹಿಂಬದಿಗೆ ಯಾವುದೋ ಧಾರ್ಮಿಕ ಶ್ರದ್ಧೆಯ ತುಯ್ತವಿದ್ದು, mokvated ಅಲ್ಲದ ಬರಹಗಳಾದ್ದರಿಂದ, ಮನೋಧರ್ಮವು ಒಂದು ಬದ್ಧತೆಗೆ ಒಂದು ಸೀಮಿತತೆಗೆ ಸಿಲುಕಿದ್ದರೂ ತನ್ನಲ್ಲಿ ತಾನು ಪ್ರಾಮಾಣಿಕವಾಗಿತ್ತು. ಈ ಪ್ರಾಮಾಣಿಕತೆಯು ಮಾತ್ರ ಇಂಗಿತಕ್ಕೆ ಆಧಾರವಾಗಿ ನಿಲ್ಲಿಸಬಲ್ಲ ಶಕ್ತಿಯಾಗಿದೆ.

ಈ ಕವಿಯ 'ಕನ್ನಡದ ಬಾವುಟ' ಪದ್ಯವು ಕೆಲವು ಕಾರಣಗಳಿಂದ ನಮ್ಮ ಗಮನವನ್ನು ಸೆಳೆಯುತ್ತದೆ. ಕನ್ನಡದ ಬಾವುಟವು, ಒಂದು ದೃಷ್ಟಿಯಲ್ಲಿ, 'ಕನ್ನಡ ತಾಯ ನೋಟ' ಪದ್ಯದ ಮುಂದುವರಿದ ಭಾಗವಾಗಿದೆ. ಸೊರಗಿದ್ದ ತಾಯಿಗೆ 'ಸಾಮ್ರಾಜ್ಯವನ್ನು ಕಟ್ಟುವ' ಆಶ್ವಾಸನೆಯನ್ನು ಯಾವ ಆಧಾರವೂ ಇಲ್ಲದೆ ಕೊಟ್ಟು ಬಂದ ಕವಿ, ಕರ್ತವ್ಯವನ್ನು ಪೂರೈಸುವ ಸಲುವಾಗಿ ಕನ್ನಡಿಗರಿಗೆ ಬಾವುಟ ಹಾರಿಸಲು ಕರೆ ಕೊಡುತ್ತಾನೆ. ಬಾವುಟ ಏರಿಸುವ, ಹಾರಿಸುವ ಉತ್ಸಾಹವು ಪದ್ಯಕ್ಕೆ ಲವಲವಿಕೆಯನು ತಂದು

ತೇಲಾಡು, ಮೇಲಾಡು, ಓಲಾಡು ಬಾವುಟ !
ಚೆಲುವಾಗು, ಗೆಲುವಾಗು, ಬಲವಾಗು ಬಾವುಟ

ಹೀಗೆ lyrical ಕೂಡ ಆಗುತ್ತದೆ. ಅಲ್ಲದೆ 'ಕನ್ನಡ ತಾಯ ನೋಟ'ದ ಕೊರಗಿನಲ್ಲಿ ಬರುವ 'ತಾವ್ ಬಾಳಿ, ತಾಯ ಬಾಳಿಸರು' ಹಾಗು ಆಶ್ವಾಸನೆ ಕೊಡುವಾಗ, 'ತಾಯ್ ಬದುಕಿ, ತಾವ್ ಬದುಕಿ, ಪೆರರ ಬದುಕಿಪರು' ಎಂಬ ನುಡಿಗಳಿಗೆ, 'ಕನ್ನಡದ ಬಾವುಟದಲ್ಲಿ

ತಾಯುಳಿಯೆ ನಾನುಳಿದೆ
ತಾಯಳಿಯೆ ನಾನಳಿದೆ

–ಈ ಸಾಲುಗಳು ಸಂವಾದಿಯಾಗಿ ಬಂದು ಕಾವ್ಯಾಂಶವು ಅಪರೂಪವಾದ ಹಂತವನ್ನು ಮುಟ್ಟಿದೆ. ಹಾಗೆಯೇ 'ಬಾನ್ ಕೊಂಡ ಕೃಷ್ಣನ್' ಚರಮ ಗೀತೆಯಲ್ಲಿ, ಸಾವನ್ನು absolute ಆಗಿ ನೋಡುವಾಗ

ಇನಿತಾಯ್ತೆ, ಹಿಡಿಮಣ್ಣು, ಹಿಡಿಬೂದಿ, ಆಳಬಾಳು ?
ಬಡವನೋ, ಬಲ್ಲಿದನೊ, ದೊರೆಯೊ, ಹುಳುವೋ,
ಇನಿತೆ ಈ ಬಾಳು ?

ಎಂದು ರಾಜ ವೈಭವವನ್ನು ಅಪರೂಪಕ್ಕೆ ಬಿಟ್ಟುಕೊಟ್ಟ ಮೂರು ಸಾಲುಗಳು ಬರುತ್ತವೆ.

(Golden lads and girls
all must
like chimney sweepers
come to dust

ಎಂಬ ಇಂಗ್ಲಿಷ್ ಕವಿಯ ಮಾತು ಶ್ರೀಯವರ ಮನಸ್ಸಿಗೆ ಬಂದಿರಬೇಕು !)

ಪ್ರಭುವಿನ ಪ್ರಶಂಸೆ ಮತ್ತು ನಾಡ-ನುಡಿಗಳ ಪ್ರಶಂಸೆಯಲ್ಲಿ ಮಾತ್ರ, ಶ್ರೀಯವರು ನಮ್ಮ ಆದಿ ಕವಿಗಳನ್ನು ಹೋಲುತ್ತಾರೆ. ಇಂಗ್ಲಿಷ್ ಗೀತೆಗಳಲ್ಲಿ ರೊಮ್ಯಾಂಟಿಕ್ ಕವಿಯ ಹಾಗೆ ವಿಹರಿಸಿದ ಅವರ ವ್ಯಕ್ತಿತ್ವದಲ್ಲಿ ಈ apparent diclotomy ಇದೆ, ಗ್ರೀಕ್ ನಾಟಕದ ಆಧಾರದ ಮೇಲೆ, ಪುರಾಣದ ಕತೆಯನ್ನು ತನ್ನ ಕಲ್ಪನೆಗೆ ಹೊಂದಿಸಿಕೊಂಡು ಬರೆದ 'ಅಶ್ವತ್ಥಾಮನ್' ನಾಟಕದಲ್ಲೂ ಕೂಡ, ನಾಡಿನ ಪ್ರೀತಿಯು ಹರಿದಿದೆ ; ಅಶ್ವತ್ಥಾಮನ ಬಾಯಲ್ಲಿ

ಓಹೋ, ಕನ್ನಡದ ನಾಡೇ,
ಮುನ್ನೀರ್ ಮೊಳಂಗು ಕರನಾಡೇ
ಮಲೆನಾಡೆ, ಪೊನಲ್ ನಾಡೆ, ಬಯಲ ಪೊನ್‌ನಾಡೇ,

ಎಂದೂ, ಮೇಳದಲ್ಲಿ

ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖ ದೊರತೆಯ ಬನವಾಸೀ,
ಬಳಿದಲೆದಾ ಕಾನ್ ಮಲೆಗಳನ್ ಆನ್ ಮೆರವೆನೆ, ಬನವಾಸೀ !

ಎಂದೂ ಹಾಡಿಸುತ್ತದೆ. ಆ ನಾಟಕದಲ್ಲಿ

ಹೋ ! ಆನಂದಂ ! ಪೇರಾನಂದಂ
ನೆಗೆವಾ ಕುಣಿವಾ ಮಿಗುವಾನಂದಂ

ಈ ಸಾಲುಗಳಿಂದ ಶುರುವಾಗುವ ಒಂದು ಮೇಳ ಗೀತೆಯನ್ನು ಒಂದು ಸ್ವತಂತ್ರ ಕವನವನ್ನಾಗಿಯೇ ನೋಡಲು ಅಡ್ಡಿಯಿಲ್ಲ.

ಶ್ರೀಯವರು ಸ್ವತಂತ್ರ ಕವಿತೆಗಳಲ್ಲಿ ನಮಗೆ ಬೇಕಾದಷ್ಟು ಅಥವಾ ಅವರು ಹಂಬಲಿಸಿದಷ್ಟು ನಮಗೆ ಕೊಡಲಿಲ್ಲ ಎಂಬುದೊಂದು ವ್ಯಥೆ ; ಆದರೆ ಆಧುನಿಕ ಕನ್ನಡ ಕಾವ್ಯದ ಗೊತ್ತುಗುರಿಗೆ ಅವರು ನೀಡಿದ ಸ್ಫೂರ್ತಿ ಮಾತ್ರ ಬೇರೆಯೇ ದೊಡ್ಡ ಕತೆ.

# ' ಅಶ್ವತ್ಥಾಮನ್ '

ಎಲ್. ಎಸ್. ಶೇಷಗಿರಿರಾವ್

1929 ರಲ್ಲಿ ಪ್ರಕಟವಾದ 'ಅಶ್ವತ್ಥಾಮನ್' ಕನ್ನಡ ನಾಟಕದ ಚರಿತ್ರೆಯಲ್ಲಿ ಒಂದು ವಿಶಿಷ್ಟ ಸ್ಥಾನ ಪಡೆದಿದೆ. ಇದು ಕನ್ನಡದಲ್ಲಿ ದುರಂತ (ಅಥವಾ 'ರುದ್ರ' ಅಥವಾ 'ಗಂಭೀರ') ನಾಟಕದ ಪರಂಪರೆಯನ್ನೆ ನಿರ್ಮಿಸಿತು. ಇದರ ವಸ್ತು ಮಹಾಭಾರತದಿಂದ ತೆಗೆದುಕೊಂಡದ್ದು, ಇದರ ಮಾದರಿ ಗ್ರೀಕ್ ನಾಟಕಕಾರ ಸಫೋಕ್ಲೀಸನ 'ಅಜಾಕ್ಸ್' ಎನ್ನುವುದು ಇದರ ಪರಿಚಯವಿರುವವರಿಗೆಲ್ಲ ತಿಳಿದ ಸಂಗತಿಗಳು. ಸಾಮಾನ್ಯ ನಂಬಿಕೆ ಅಶ್ವತ್ಥಾಮ ಚಿರಂಜೀವಿ ಎಂದು ; ಅವನು ಆತ್ಮಹತ್ಯೆ ಮಾಡಿಕೊಂಡಂತೆ ನಿರೂಪಿಸಿ 'ಶ್ರೀ'ಯವರು ಭಾರತದ ಸಂಸ್ಕೃತಿಗೆ ಅಪಚಾರವೆಸಗಿದರೆಂಬ ಅಪಾದನೆ ವಾದ–ವಿವಾದಗಳು ಈಗ ಆಧುನಿಕ ಕನ್ನಡ ಸಾಹಿತ್ಯದ ಚರಿತ್ರೆಯ ವಿಚಿತ್ರ ಪ್ರಸಂಗಗಳಲ್ಲಿ ಒಂದಾಗಿ ಉಳಿದಿದೆ, ಅಷ್ಟೆ.

ಸಾಮಾನ್ಯವಾಗಿ ಈ ಕೃತಿಯನ್ನು 'ದೈವಕ್ಕೆ ಗೌರವ ಕೊಡದೆ ಕಡೆಗಾಣಿಸಿದ ಮನುಷ್ಯನನ್ನು ಅದು ಮುರಿಯುತ್ತದೆ' ಎಂಬ ತತ್ವದ ಅಭಿವ್ಯಕ್ತಿಯನ್ನಾಗಿ ವಿಮರ್ಶಕರು ಕಂಡಿದ್ದಾರೆ. ಆದರೆ ಕೃತಿಯ ಬಂಧ ಟೆಕ್ಸ್‌ಚರ್ ಇದಕ್ಕಿಂತ ಸಂಕೀರ್ಣವಾದ ಜೀವನ ನೋಟವನ್ನು ಸೂಚಿಸುತ್ತದೆ. ಇದನ್ನು ಗುರುತಿಸದಿದ್ದರೆ ಕೃತಿ ಎಷ್ಟು ಶ್ರೀಮಂತವಾಗಿದೆ ಎಂಬುದನ್ನು ಗುರುತಿಸಿದಂತಾಗುವುದಿಲ್ಲ.

ಕೃತಿ ಪ್ರಾರಂಭದಿಂದ ಮನುಷ್ಯ–ದೈವ ಇವರ ಸಂಬಂಧದ ಮೇಲೆ ಒತ್ತು ಹಾಕುತ್ತದೆ ಎಂಬುದು ನಿಜ. ಉನ್ಮತ್ತ ಸ್ಥಿತಿಯಲ್ಲಿರುವ ಅಶ್ವತ್ಥಾಮನನ್ನು 'ಪ್ರದರ್ಶಿಸಿ', ರುದ್ರ ಕೃಷ್ಣನಿಗೆ ಹೇಳುತ್ತಾನೆ.

> ಏನ್ ಪಿಡಿದು, ನೋಡಿದೆಯ, ದೈವಬಲಂ, ಎಲೆ ಕೃಷ್ಣ,
> ಆರ್ ಇರ್ದರ್ ಈತನಿನ್ ಜ್ಞಾನಿಯುಂ ಶೂರನುಂ ?

ಮತ್ತೆ ಹೇಳುತ್ತಾನೆ :

> ಇಂತಪ್ಪ ನೋಟಂಗಳನ್ ನೋಡಿ, ದೈವದೊಳ್
> ಸೊದ್ದು ನುಡಿ ನುಡಿಯದಿರ್, ಕೊರ್ಬದಿರ್, ನಿನಗೊರ್ಮೆ
> ಸಿರಿಯೆನಿತು, ಬಲವೆನಿತು, ಕಯ್ಮೆನಿತು ನಡೆದೊಡಂ !
> ಒಂದು ಪಗಲ್ ಎತ್ತುವುದು, ಒಂದು ಪಗಲ್ ಉರುಳಿಪುದು
> ಮಾನುಷಮನ್ ಎಲ್ಲಮನ್ ಮಿಡಿಯರಿದು ನೆಗಳ್ವರ್ಗೆ
> ದೇವರ್ಕಳ ಒಸೆದಪರ್–ಮುದಿದಪರ್ ಮಿಕ್ಕದನ್.

ಮೇಳದವರೂ ಇದೇ ಅಭಿಪ್ರಾಯವನ್ನು ಪ್ರತಿಧ್ವನಿಸುತ್ತಾರೆ :

ಇಂದೇನೊ ಮುಂದೇನೊ ಮುನ್ನೇಳ್ ಕಾಣನ್
ಬಂದುದನೆ ಕೊಂಡುಂಡು ಪಾಳ್ವವನೆ ಜಾಣನ್.

ರುದ್ರನ್ ಒಲ್ದೊಡೆ ಉಳಿವು,
ಒಲ್ಲದೊಡೆ ಒಡನಳಿವು

ಪದ್ಧಿ ನಡೆದೊಡೆ ರುದ್ರನ್ ಒಲ್ಲದೆಯೆ ಮಾಣನ್
ಅಳವರಿತು ನಡೆಯೆ ಶಿವನ್ ಒಲ್ಲದೆಯೆ ಮಾಣನ್

ಆದರೆ ಕೃತಿಯನ್ನು ಸೂಕ್ಷ್ಮವಾಗಿ ಓದಿ ನೋಡಿದಾಗ, ರುದ್ರನ–ದೈವದ–ಮನಸ್ಸನರಿತು ಬಾಳುವುದು, ಅವನನ್ನು ಒಲಿಸಿಕೊಳ್ಳುವುದು ಮನುಷ್ಯಮಾತ್ರನಿಗೆ ಎಷ್ಟು ಕಷ್ಟ ಎಂಬ ಭಾವನೆಯೂ ಧ್ವನಿತವಾಗುತ್ತದೆ. ರುದ್ರನು ಒಲಿದೊಡೆ ಉಳಿವು, ಒಲ್ಲದೊಡೆ ಒಡನಳಿವು, ನಿಜ. ಆದರೆ ಮನುಷ್ಯದೈವ ಇವುಗಳ ಸಂಬಂಧ ಇಷ್ಟು ಸರಳವಲ್ಲ. ಅಶ್ವತ್ಥಾಮನ ಅಪರಾಧವೇನು ? ರುದ್ರನೇ ಇದನ್ನು ಹೇಳುತ್ತಾನೆ. ನಿದ್ರಿಸುತ್ತಿರುವ ಪಾಂಡವರನ್ನೂ ಅವರ ಕಡೆಯ ಪ್ರಮುಖ ವೀರರನ್ನೂ ಕೊಚ್ಚಿಹಾಕುವೆನೆಂದು ಪಾಳಯವನ್ನು ನಡುರಾತ್ರಿ ಹೊಕ್ಕ ಅಶ್ವತ್ಥಾಮನಿಗೆ ರುದ್ರ ಪ್ರತ್ಯಕ್ಷನಾದ. ಮಲಗಿರುವ ವೀರರನ್ನು ಕೊಲ್ಲುವುದು ಅನೀತಿ ಎಂದೇನೂ ರುದ್ರ ಹೇಳಲಿಲ್ಲ. 'ವರಮಾವುದೀವೆನ್ ?' ಎಂದು ಕೇಳಿದ. 'ಪಾಂಡವರ ಲೋಕಕೆನ್ನಿನ್ ಪ್ರಳಯ' ಎಂದ ಅಶ್ವತ್ಥಾಮ. 'ಕೆಲರ್ ಉಳಿದು' ಎಂದ ರುದ್ರ. ಅಶ್ವತ್ಥಾಮ ಉತ್ತರಿಸಿದ :

"ನೋಡುತಿರು, ನೋಡುತಿರು, ಎಲೆ ರುದ್ರ, ದೂರದೊಳ್ ನೋಡುತಿರು. ವೀರ್ಯಂ ಮಾನುಷಮಂ ಅದೆಂತಿರ್ಕುಮೆಂಬುದನ್ !"

ಮುಂದೇನಾಯಿತು ? ರುದ್ರ ಹೇಳುತ್ತಾನೆ :

ಮದಿಸಿ ತಾನ್ ನಕ್ಕನ್ ; ಆನ್ ನಕ್ಕೆನ್
ಮಾಯಮನ್ ಬೀಸಿದೆನ್.

(ಇದರ ಪರಿಣಾಮವಾಗಿ ಅಶ್ವತ್ಥಾಮ ಕುರಿಗಳನ್ನೂ ಹಸುಗಳನ್ನೂ ಪಾಂಡವರೆಂದು ಭ್ರಮಿಸಿ ಕೊಂದು, ಒಂದು ಕುರಿಯನ್ನು ಕೃಷ್ಣ ಎಂದು ಭಾವಿಸಿ ತನ್ನ ಶಿಬಿರಕ್ಕೆ ತಂದು ಅದಕ್ಕೆ ಚಿತ್ರಹಿಂಸೆ ಮಾಡಿದ) ಅಶ್ವತ್ಥಾಮ ರುದ್ರನ ಆಶೀರ್ವಾದವನ್ನು ಬೇಡಿದ್ದರೆ, ಅವನು ಮಲಗಿದ್ದವರನ್ನು ಕತ್ತರಿಸಿ ಹಾಕಿದುದು ಅಪರಾಧವಾಗುತ್ತಿರಲಿಲ್ಲ, ಅವನಿಗೆ ಶಿಕ್ಷೆಯಾಗುತ್ತಿರಲಿಲ್ಲ. ಯಾವುದು ನಮ್ಮ ದೃಷ್ಟಿಯಲ್ಲಿ ತೀರ ಹೀನ ಕೃತ್ಯವೆಂದು ಕಾಣುತ್ತದೋ ಅದನ್ನು ಖಂಡಿಸಿ ಒಂದು ಮಾತನ್ನೂ ಆಡದೆ, ಆ ಹೀನಕೃತ್ಯಕ್ಕೆ ಉದ್ಯುಕ್ತನಾದ ಅಶ್ವತ್ಥಾಮನನ್ನು ಕುರಿತು '**ಪ್ರಿಯವೀರ, ದಾಳಿಯೇನ್ ? ವರವಾವುದೀತಿನ್ ?**' ಎಂದು ಕೇಳುವ ರುದ್ರನನ್ನು –ಮೆಚ್ಚುವುದಿರಲಿ– ಅರ್ಥಮಾಡಿಕೊಳ್ಳುವುದೂ ಕಷ್ಟವಾಗುತ್ತದೆ. ನಿದ್ರಿಸುತ್ತಿರುವವರನ್ನು ಕೊಲ್ಲಲೆಳಸಿದುದು ಅಪರಾಧವೇನು ? "ದೂರದೊಳ್ ನೋಡುತಿರು. ವೀರ್ಯಂ ಮಾನುಷಮ್ ಅದೆಂತಿರ್ಕು

ಮೆಂಬುದನ್" ಎಂದದ್ದು, ವರವನ್ನು ಬೇಡದಿದ್ದದ್ದು. ಆದರೆ ನಾಟಕದಲ್ಲಿ ಅಶ್ವತ್ಥಾಮ ರುದ್ರನನ್ನು ಎಷ್ಟು ಭಕ್ತಿಯಿಂದ ಕಾಣುತ್ತಾನೆ ಎಂಬುದನ್ನು ನಾವು ಕಡೆಗಣಿಸುವಂತಿಲ್ಲ. (ಮಗನಿಗೆ ರುದ್ರಶಕ್ತಿ ಎಂದು ಹೆಸರಿಟ್ಟಿದ್ದಾನೆ!) ಅವನನ್ನು ನಾವು ಮೊದಲು ಬಾರಿ ರಂಗಸ್ಥಳದ ಮೇಲೆ ಕಾಣುವಾಗಲೆ, ರುದ್ರನನ್ನು 'ಕೃಪಾಕರಾ!' ಎಂದು ಸಂಬೋಧಿಸುತ್ತಾನೆ. ಒಳಗೆ ಹೋಗುವಾಗ

ಒಂದನ್ ಎಡೆವೆನ್. ರುದ್ರ,
ಇಂದಿನವೊಲ್ ಪಗಳುಂ ಕಯ್ಬಿಡದೆ ಕಾಪಾಡು

ಎನ್ನುತ್ತಾನೆ. ತನ್ನನ್ನು ಭ್ರಮೆಗೆ ಒಳಗು ಮಾಡಿ ರುದ್ರ ಪರಿಹಾಸ್ಯ ಮಾಡುತ್ತಿರುವುದನ್ನು ಅರಿಯದೆ ಅಶ್ವತ್ಥಾಮ ಮಾಡುವ ಪ್ರಾರ್ಥನೆಯಲ್ಲಿ ನಾಟಕೀಯ ವ್ಯಂಗ್ಯವಿದೆ. ಆದರೆ ಇದು ಅಶ್ವತ್ಥಾಮನ ಪ್ರಾಮಾಣಿಕ ಭಕ್ತಿಯನ್ನು ನಾವು ಮರೆಯುವಂತೆ ಮಾಡಬಾರದು ಮತ್ತೆ ಅವನ ಕೊರಳಿನಿಂದ ಈ ಪ್ರಾರ್ಥನೆ ಚಿಮ್ಮುತ್ತದೆ.

ಓ ರುದ್ರ! ಗುರುದೇವ! ಎನ್ನ ಗುರುವಿನ ಗುರುವೆ!

ಉಹುಂ, ಯಾವುದೂ ಒಮ್ಮೆ 'ದೂರದೊಳ ನೋಡುತಿರು ವೀರ್ಯಂ ಮಾನುಷಮನ್' ಎಂದ ಅಪರಾಧಕ್ಕೆ ಸಾಕಷ್ಟು ಪ್ರಾಯಶ್ಚಿತ್ತ ಎಂದು ರುದ್ರನಿಗೆ ಎನ್ನಿಸುವುದಿಲ್ಲ. ದೈವ ಎಷ್ಟು ಬಲಶಾಲಿಯಾದುದು, ಆನೆ ಕಬ್ಬನ್ನು ಸೀಳಿದಂತೆ ಹೇಗೆ ಮನುಷ್ಯನನ್ನು ಸೀಳಿ ಹಾಕುತ್ತದೆ ಎಂಬುದನ್ನೇನೊ 'ಅಶ್ವತ್ಥಾಮನ್' ನಮ್ಮ ಅನುಭವಕ್ಕೆ ತಂದುಕೊಡುತ್ತದೆ, ಆದರೆ ಈ ದೈವದ ವಿಷಯಕ್ಕೆ ನಮಗೆ ಗೌರವವಾಗಲೀ ಬರುವಂತೆ, ಅದು ಒಟ್ಟಿನಲ್ಲಿ ಧರ್ಮಪಕ್ಷಪಾತಿ ಎನ್ನಿಸುವಂತೆ ಇಲ್ಲಿ ಪ್ರಕಟವಾಗುವುದಿಲ್ಲ. ನಾಟಕದಲ್ಲಿ ಅಶ್ವತ್ಥಾಮನ ವಿಧಿಯೊಡನೆ ಅಭಿಮನ್ಯುವಿನ ವಿಧಿ ಮತ್ತೆ ಮತ್ತೆ ಗಂಟಾಗುವುದು ಈ ದೃಷ್ಟಿಯಿಂದ ಅರ್ಥವತ್ತಾಗುತ್ತದೆ. ಅವನು ಕಡೆಗೆ ತನ್ನನ್ನು ಕೊಂದುಕೊಳ್ಳಲು ಬಳಸುವ ಖಡ್ಗ ಅಭಿಮನ್ಯು ಕೊಟ್ಟುದು. ಅವನ ಶವವನ್ನು ಕಂಡು ಕೃಷ್ಣ,

ಅಭಿಮನ್ಯು ಅವನ್ ಒರ್ವನ್,
ಇವನ್ ಒರ್ವನ್–ಜಿಂಕೆಗಳ್–ಸಿಡಿಲ ಮರಿಗಳ್–ರುದ್ರ
ನಂಶಗಳ್

ಎನ್ನುತ್ತಾನೆ. ಅಭಿಮನ್ಯುವೂ ಶತ್ರುಗಳ ಅಧರ್ಮಕ್ಕೆ ಸಿಕ್ಕು ಸಾವನಪ್ಪಿದವನು. ಕೃಷ್ಣನೂ ರುದ್ರನನ್ನು ಧರ್ಮಪಕ್ಷಪಾತಿ ಎಂದೇನೂ ಮೆಚ್ಚುವುದಿಲ್ಲ. ರುದ್ರನ ಪರಮಶಕ್ತಿಯನ್ನು ಗುರುತಿಸುತ್ತಾನೆ, ಭಯದಿಂದಲೇ ಮಾತನಾಡುತ್ತಾನೆ :

ಅವನ ಗತಿಯನ್ ಕಂಡು, ಎನ್ನ ಪಗೆಯಾದೊಡು,
ವಿಧಿವಶದೆ ಕಾಲ್ ತೊಡರ್ದು ಬೀಳ್ದಂಗೆ ಮರುಗುವೆನ್
ಇಂದವನ್, ನಾಳೆ ನಾನ್, ಏನ್ ಪಾಡೊ ಆಳ ಬಾಳ್!
ಬೀಸುವ ಬಯಲ್ ಗಾಳಿ! ಪರಿದಡಂಗುವ ನೆಳಲ್!

ಈ ಮಾತುಗಳಲ್ಲಿ ರುದ್ರನ ವಿಷಯಕ್ಕೆ ಮೆಚ್ಚಿಕೆಯೇನೂ ಇಲ್ಲ. ಭಯವಿದೆ.

ಹೀಗೆ ನಾಟಕದಲ್ಲಿ ಪ್ರಕಟವಾಗುವ ದೈವ ಮನುಷ್ಯನ ಬುದ್ಧಿಶಕ್ತಿಗೆ ಮೀರಿದುದು. ಬಾಳಿನುದ್ದಕ್ಕೂ ಪ್ರಸನ್ನಗೊಳಿಸಿಕೊಂಡೇ ಸಾಗುವುದೇನೂ ಸುಲಭದ ಕಾರ್ಯವಲ್ಲ. ಒಮ್ಮೆ ಇದು ಮುನಿದರೆ 'ಕೃಪಾಕರಾ' ಎಂದರೂ ಕ್ಷಮಿಸುವುದಿಲ್ಲ, 'ಗುರುದೇವ, ಗುರುವಿನ ಗುರುವೆ' ಎಂದರೂ ಪ್ರಸನ್ನವಾಗುವುದಿಲ್ಲ. (ಅಶ್ವತ್ಥಾಮನ ಪಾಡಿನ ಹಿಂದೆ ಅಭಿಮನ್ಯುವಿನ ಪಾಡೂ ಸೂಚಿತವಾಗಿದೆಯಲ್ಲವೆ?) ಆದರೂ, ಮನುಷ್ಯ ಇದರ ವಿಷಯ ಎಷ್ಟೇ ಬೇಸರಿಸಲಿ ದೂರಲಿ, ಇದನ್ನು ಬಿಟ್ಟು ಅವನ ಬಾಳನ್ನು ನಡೆಸಬಲ್ಲ ಶಕ್ತಿ ಇನ್ನೊಂದಿಲ್ಲ. ಅಶ್ವತ್ಥಾಮನೇ

(ಪಾಂಡವರನ್ನು) ಕಾಡನ್ ಆ ರುದ್ರನ್, ಆ ರುದ್ರನ್,
ಉರಿಗಣ್ಣನ್, ಆರ ನಚ್ಚಲ್ಲದನ್

ಎನ್ನುತ್ತಾನೆ. ಆದರೆ ಸಾಯುವಾಗ, ತನ್ನ ಶವ ಭೀಮನ ಕೈಗೆ ಸಿಕ್ಕು ಅಪಮಾನಕ್ಕೆ ತುತ್ತಾಗದಿರಲಿ ಎಂದು ಹಂಬಲಿಸುವಾಗ, ತನ್ನ ಶವ ಮೊದಲು ತನ್ನ ಗೆಳೆಯ ಏಕಲವ್ಯನಿಗೆ ಸಿಕ್ಕಲಿ ಎಂದು ಅನುಗ್ರಹಿಸುವಂತೆ ಬೇಡಬೇಕೆಂದರೆ ಬೇರೆ ದೈವವಿಲ್ಲ. ಮತ್ತೆ ಆ ರುದ್ರನನ್ನೆ ಬೇಡಬೇಕು!

ಓ ರುದ್ರ–ಪ್ರಾರ್ಥಿಪುದು ಸಾವರ್ಗೆ ಧರ್ಮಂ–
ಎನಗೊಳ್ಳಿಯವನಾಗು ದೊಡ್ಡ ವರವಲ್ತು ನಾನ್ ಬೇಡುವುದು ನಿನ್ನನ್.

ಮನುಷ್ಯನಿಗೆ ಇದಕ್ಕಿಂತ ಸಹಾಯಹೀನ ದೈನ್ಯವಿಲ್ಲ!!

ಹೀಗೆ, ದೈವವನ್ನು ಲಕ್ಷ್ಯಮಾಡದವನನ್ನು ಅದು ಮುರಿಯುತ್ತದೆ ಎನ್ನುವುದಕ್ಕಿಂತ ಆ ದೈವ ಎಷ್ಟು ರಹಸ್ಯಮಯವಾದದ್ದು, ಅದನ್ನು ಅರಿತು ಒಲಿಸಿಕೊಳ್ಳುವುದು ಎಷ್ಟು ಕಷ್ಟ ಎಂಬುದು ಕೃತಿಯಲ್ಲಿ ಪ್ರಕಟವಾಗುತ್ತದೆ. ಅಶ್ವತ್ಥಾಮನ ಉದ್ಧಟನ ತನಕ್ಕಿಂತ ಅವನು ಎದುರಿಸಬೇಕಾದ ವಿಶ್ವದ ಕಠಿಣ ಜಟಿಲತೆ, ಅದರಲ್ಲಿ ಅವನ ದಿಗ್ಭ್ರಮೆ ಧ್ವನಿತವಾಗುತ್ತದೆ. ಯಾವ ರೀತಿಯಲ್ಲೂ ವಿನಯದಾರಿದ್ರ್ಯನೆಂದು ಹೇಳಲಾಗದ ಆದರ್ಶ ಮಾನವನೆನ್ನಬಹುದಾದ ಕೃಷ್ಣನ

ಇಂದವನ್, ನಾಳೆ ನಾನ್, ಏನ್ ಪಾಡೊ ಆಳ್ ಬಾಳ್!
ಬೀಸುವ ಬಯಲ್ ಗಾಳಿ! ಪರಿದಡುಗುವ ನೆಳಲ್!

ಎನ್ನುವ ಮಾತುಗಳು ಕೃತಿ ಮೂಡಿಸುವ ಈ ದಿಗ್ಭ್ರಮೆಯ ಪರಿಣಾಮಕ್ಕೆ ಪೋಷಕವಾಗುತ್ತವೆ. ಕೃತಿಯ ಪ್ರಾರಂಭವೇ ಬೇಟೆಯ ಚಿತ್ರದಿಂದ ಎನ್ನುವುದು ಅರ್ಥವತ್ತಾದ ಸಂಗತಿ. ಈ ರಹಸ್ಯ ಕೃತಿಯ ಕಡೆಯ ಭಾಗದಲ್ಲಿ ಇನ್ನೊಂದು ಮುಖವನ್ನು ಪಡೆಯುತ್ತದೆ. ಈವರೆಗೆ ನಾವು ಕಂಡದ್ದು, ದೈವ ಒಮ್ಮೆ ಮುಳಿದರೆ ಎಷ್ಟು ನಿಷ್ಠೂರವಾಗಬಲ್ಲದು, ಕ್ಷಮಿಸದ ಕ್ರೂರವ್ಯಂಗ್ಯವನ್ನೆ ಮರೆಯಬಲ್ಲದು ಎನ್ನುವುದನ್ನು ಆದರೆ, ನಾಟಕದ ಕಡೆಯ ಭಾಗದಲ್ಲಿ ಭೀಮ ಕೃಷ್ಣನಿಗೆ ಹೇಳುತ್ತಾನೆ:

ಎಮ್ಮೆಲ್ಲರಾ ದೈವಂ ಆ ರುದ್ರನ್ ಅವನ ಕಯ್ಬಿಟ್ಟನ್.

ಕೃಷ್ಣನ ಉತ್ತರ ಅನಿರೀಕ್ಷಿತವಾದದ್ದೂ, ನಮ್ಮನ್ನು ಚಕಿತಗೊಳಿಸುತ್ತದೆ :

ಬಿಟ್ಟನೋ, ತೊಟ್ಟನೋ, ನಾವೆಂತು ಕಂಡಪೆವು
ಆ ರುದ್ರ ಹೃದಯಮನ್ ? ಪರಿಶುದ್ಧನನ್ ಮಾಡಿ
ಆತ್ಮಮನ್ ಸೆಳೆದನೆನ್ನೈನ್

ಆದರೆ, ರುದ್ರನ-ದೈವದ-ರೀತಿ ಅರ್ಥವಾಗದಿದ್ದರೆ ಈ ಜಗತ್ತೆಲ್ಲ ಬರಿಯ ಗೊಂದಲ, ದಿಗ್ಭ್ರಮೆ ಎಂದಲ್ಲ, ಕೃತಿ ಬೆಳೆದ ಹಾಗೆ ಅನೇಕ ಎಳೆಗಳನ್ನು ಬಿಡಿಸಿಕೊಂಡು ಹೋಗುತ್ತದೆ. ಜಗತ್ತಿನ ಕಟ್ಟಕಡೆಯ ಶಕ್ತಿ ಮನುಷ್ಯನ ಅರಿವಿಗೆ ಮೀರಿದುದಾದರೂ, ಅದು ಸಾಗುವ ರೀತಿಯಲ್ಲಿ ಗುರುತಿಸಬಹುದಾದ ನಿಯಮ ಒಂದಿದೆ :

ಕರ್ಮಮಿೀ ಪರಿ ಮರಿಗೆ ಮರಿ ಇಕ್ಕುತಿರ್ಕುಂ !

ಮಹಾಭಾರತದ ಯುದ್ಧವು ಮುಗಿದು ಅಶ್ವತ್ಥಾಮನೂ ಹೆಣವಾದ ಗಳಿಗೆಯಲ್ಲಿ ಮೇಳದವರು ಆ ಹೆಣವನ್ನು ನೋಡುತ್ತ ಇಡೀ ಮಹಾಭಾರತದ ಕಥೆಯನ್ನು ಸ್ಮರಿಸಿಕೊಳ್ಳುತ್ತಾರೆ :

ಏಗಳಿಗೆ ಪುಟ್ಟಿದಳೊ, ಅಗ್ನಿಯೊಳ್ ನಾರಿ,
ಕೃಷ್ಣೆಯವಳ್, ಆ ಚಂಡಿ, ಕೌರವರ ಮಾರಿ.

ಜಾರಿಬಿದ್ದ ದುರ್ಯೋಧನನನ್ನು ಕಂಡು ದ್ರೌಪದಿ ನಕ್ಕ ನಗು ಭಾರತದ ವಿನಾಶದ ನಾಂದಿಯಾಯಿತು. ಅಲ್ಲಿಂದ ನಡೆದ ಘಟನೆಗಳನ್ನೂ ಅವುಗಳ ಪರಸ್ಪರ ಸಂಬಂಧವನ್ನೂ ವಿಶ್ಲೇಷಿಸುತ್ತ ಮೇಳದವರು ಕರ್ಮವು ಕರ್ಮಕ್ಕೆ ಮರಿ ಇಡುತ್ತದೆ,

ಕ್ಷಮೆಯಿಂದ ಸಮೆಯದಿರೆ ಮರುಕೊಳಿಸುತಿರ್ಕುಂ

ಎಂದು ಸಾರುತ್ತಾರೆ. ('ಶ್ರೀ'ಯವರ ನಾಟಕದ ಮೂಲ ಸಫೋಕ್ಲೀಸನ ಕೃತಿಯಾದರೂ ಧ್ವನಿತವಾಗುವುದು ಈಸ್ಕಿಲಸನ ಪ್ರಸಿದ್ಧ ಒರಿಸ್ಟಿಯನ್ ನಾಟಕತ್ರಯದ ಜೀವಸೂತ್ರ.) ದೈವದ ರೀತಿಗಳನ್ನೆಲ್ಲ ಅರ್ಥಮಾಡಿಕೊಂಡು ಮನುಷ್ಯ ಬದುಕಲಾರ. ಆದರೆ ಅವನು ಗುರುತಿಸಬಹುದಾದ, ಗುರುತಿಸಲೇಬೇಕಾದ ಅನುಲ್ಲಂಘನೀಯ ನಿಯಮ ಒಂದುಂಟು :

ಕರ್ಮಮೀ ಪರಿ ಮರಿಗೆ ಮರಿ ಇಕ್ಕುತಿರ್ಕುಂ !
ಕ್ಷಮೆಯಿಂದೆ ಸಮೆಯದಿತೆ ಮರುಕಳಿಸುತಿರ್ಕುಂ !

ಕೃತಿಯಲ್ಲಿ ಮತ್ತೊಂದು ವಸ್ತುವಿನ ಎಳೆಯೂ ಉಂಟು. ಈ ವಸ್ತು ಅಶ್ವತ್ಥಾಮನು ರಂಗಭೂಮಿಯ ಮೇಲೆ ಮೊದಲ ಬಾರಿಗೆ ಬಂದಾಗ ಆಡುವ ಮೊದಲ ಮಾತುಗಳಲ್ಲಿ ಪ್ರಕಟವಾಗುತ್ತದೆ :

ಎನ್ನ ದೇವತೆ, ಗೆಲವು ! ಗೆಲವು ಗೆಲವೋ ರುದ್ರ !
ಸಯ್ಪು ನೀನ್ ಬಂದುದು ಕೃಪಾಕರಾ ! ಈ ಜಯಕೆ
ಸೇವಿವೆನ್ ನಿನ್ನ ಕೊರಲೊಳ್ ಪೊನ್ನ ತಲೆಗಳನ್.

ಈ ಗಳಿಗೆಯಲ್ಲಿ ಅಶ್ವತ್ಥಾಮನು ತಾನು ಜಯ ಗಳಿಸಿದ್ದೇನೆ ಎಂದು ಸಂಭ್ರಮಿತನಾಗಿದ್ದಾನೆ. ಶತ್ರುಗಳ ತಲೆ ತಂದು ತಾನು ಗೆಲವನ್ನು, ಅಪೂರ್ವ ಗೆಲವನ್ನು ಸಾಧಿಸಿದ್ದೇನೆ ಎಂದು ವಿಜೃಂಭಿಸುತ್ತಿದ್ದಾನೆ. ರುದ್ರ-ಅಶ್ವತ್ಥಾಮರ ಸಂಭಾಷಣೆಯುದ್ದಕ್ಕೂ ಈ ಸಂಭ್ರಮ ಕಾಣುತ್ತದೆ. ಮನುಷ್ಯ ಜಯವನ್ನು ಬೆನ್ನಟ್ಟುವ ಬಗೆಯನ್ನು ಮೇಳ ವರ್ಣಿಸುತ್ತದೆ.

ಒಂದು ನುಡಿ, ಒಂದು ಕಿಡಿ-ಕೊನೆಗೆ ಕಾಳ್ಗಿರ್ಚು
ಬೀರರ್ ಇರ್ವರ್ ತೀಡೆ, ಬಿದಿರ ಮೊಳೆಗಿರ್ಚು.
ಪಲ್ ಮಸೆದು. ಕಲ್ ಮಸೆದು, ಬಾಳ್ ಮಸೆದು, ಪೊಂಚಿ,
ಬಗೆ ಮಸಗಿ, ಬಾಯ್ ಮಸಗಿ, ಕಯ್ ಮಸಗಿ, ಮುಂಚಿ,
ಪಡೆ ನೆರವಿ, ಪಗೆಯುಂಪಿ, ಕೊಲ್ವ

ದಾರಿ ಮನುಷ್ಯ ಜಯಕ್ಕೆ ಆರಿಸಿಕೊಂಡ ದಾರಿ. ಮೇಳದ ಈ ಹಾಡು ಮುಗಿದು ಮುಗಿದಿಲ್ಲವೆನ್ನುವಾಗಲೆ ಭೀಮ ಜಯದ ಮಾತನಾಡುತ್ತಾನೆ. ಅಶ್ವತ್ಥಾಮನ ಹೆಣವನ್ನು ಹದ್ದುಗಳಿಗೆ, ನರಿಗಳಿಗೆ ಹಾಕಬೇಕು, ಅದು ಅವನಿಗೆ 'ಜಯ'. ಇದು ಉಚಿತವಲ್ಲ ಎಂದು ಕೃಷ್ಣ ಹೇಳಿದಾಗ ಭೀಮ ಉತ್ತರಿಸುತ್ತಾನೆ :

ನೀನು ಇಂದು ಭೀಮನನ್
ಪೇಡಿಯನ್ ಮಾಡುವಯ್. ಇಂತಾಗೆ, ಜಯಮ್ ಎಲ್ಲಿ ನಮಗೆ ?

ಮನುಷ್ಯರು ಸಾಮಾನ್ಯವಾಗಿ ಅನುಸರಿಸುವ, ಭೀಮನೂ ಆರಿಸಿಕೊಳ್ಳುವ ದಾರಿಯನ್ನು ಕುರಿತು ಮೇಳದ ವಿವೇಕದ ಉದ್ಗಾರ ಇದು :

ಬೇರೆ ಕಾರ್ಯಂ ತಗದೆ ಸಾಹಸಿಗನಾಳ್ಗೆ ?
ಬೇರೆ ಭೂಷಣಮ್ ಇರದೆ ಮಾನವನ ತೋಳ್ಗೆ ?

'ಜಯಮ್ ಎಲ್ಲಿ ನಮಗೆ ?' ಭೀಮನ ಪ್ರಶ್ನೆಗೆ ಕೃಷ್ಣ ಉತ್ತರ ಹೇಳುತ್ತಾನೆ :

ಕೆಳೆಯಂಗೆ ಸೋಲ್ವುದೆ ಜಯಂ ; ಕ್ಷಮೆಯೆ ತಾನ್ ಜಯಂ,
ಕ್ರೋಧಮನ್ ತುಳಿದಿಟ್ಟು, ಬಲ್ವಿಡಿದು ಧರ್ಮಮನ್,
ಬಗೆಯೊಡನೆ ಪೋರಾಡುವುದೆ ಜಯಂ.

ಇಲ್ಲಿ ರುದ್ರನ - ದೈವದ - ಪ್ರಸ್ತಾಪವೇ ಎನ್ನುವುದು ಗಮನಾರ್ಹ. 'ಇದು 'ಹ್ಯೂಮನಿಸಂ'ನ - ಮಾನವತಾವಾದದ - ಧ್ವನಿ. ಮನುಷ್ಯನ ಸತ್ವ, ಮನುಷ್ಯನ ಪ್ರಯತ್ನ, ಮನುಷ್ಯನ ಸಾಧನೆ ಇವುಗಳ ಮೇಲೆ ಇಲ್ಲಿ ಒತ್ತು.

ಈ ಮಾತುಗಳನ್ನು ಆಡುವವನು ಕೃಷ್ಣ ಎನ್ನುವುದು ಮತ್ತೊಂದು ಮುಖ್ಯವಾದ ಅಂಶದತ್ತ ನಮ್ಮ ಗಮನವನ್ನು ಸೆಳೆಯುತ್ತದೆ. ಕೃಷ್ಣ ಕೃತಿಯ ಪ್ರಾರಂಭದಲ್ಲಿ ಕಾಣಿಸಿಕೊಂಡು ಮರೆಯಾಗುತ್ತಾನೆ. ಕೃತಿಯ ಮೂರನೆ ಎರಡರಷ್ಟು ಭಾಗದಲ್ಲಿ ಮುಖ್ಯ ಪಾತ್ರ ಅಶ್ವತ್ಥಾಮ. ಅವನು ಸತ್ತಮೇಲೂ ಅವನ ಶವ ನಮ್ಮ ಕಣ್ಣ

ಮುಂದೆಯೆ ಇರುತ್ತದೆ. ಆದರೆ ಕೃತಿಯ ಕಡೆಯ ಭಾಗದಲ್ಲಿ ಮಹತ್ವವನ್ನು ಗೆದ್ದು ಕೊಳ್ಳುವವನು ಕೃಷ್ಣ. ಭೀಮನು ಅನಾಗರಿಕನಂತೆ ವರ್ತಿಸದಂತೆ ತಡೆಯುವವನು ಅಶ್ವತ್ಥಾಮನ ಹಿರಿಮೆಯನ್ನು ಗುರುತಿಸಿ ಅವನಿಗೆ ಸಲ್ಲಬೇಕಾದ ಪ್ರಶಂಸೆಯನ್ನು ಸಲ್ಲಿಸುವವನು ಕೃಷ್ಣ. ಅವನನ್ನು ಮೇಳದವರು

ಓ ಕೃಷ್ಣ, ಧರ್ಮ ದೇವತೆಯೆ ನೀನ್! ಅರಿಯದರ
ದೂರುವರ್ ನಾಮಿಂದು ಸತ್ಯಮನೆ ಕಂಡೊಮ್

ಎಂದು ಹೊಗಳುತ್ತಾರೆ. ಏಕಲವ್ಯನೇ

ಓ ಕೃಷ್ಣ. ಸ್ತೋತ್ರಾರ್ಹಮ್ ಈ ನಿನ್ನ ಸೌಜನ್ಯಮ್,
ನಿನ್ನ ಧರ್ಮ ಪ್ರೀತಿ

ಎಂದು ಮೆಚ್ಚುತ್ತಾನೆ. ಕೃತಿಯಲ್ಲಿ ಅಶ್ವತ್ಥಾಮನ ಪಾತ್ರಕ್ಕೆ ಸಮತೋಲನವನ್ನು ಒದಗಿಸುವುದು ಕೃಷ್ಣನ ಪಾತ್ರ. ಕೃಷ್ಣನಿಗೆ ಇಲ್ಲಿ ದೈವತ್ವವಿಲ್ಲ. ಆದರೆ ಅವನು ಪರಮಜ್ಞಾನಿ. ರುದ್ರ 'ನೀನ್ ಪ್ರಿಯನ್ ಎಮಗೆ' ಎನ್ನುತ್ತಾನೆ. ಕೃಷ್ಣ ತನ್ನ ಮಿತಿಯನ್ನು ಸ್ಪಷ್ಟವಾಗಿ ಗುರುತಿಸಿಕೊಂಡಿದ್ದಾನೆ : 'ಇಂದವನ್, ನಾಳೆ ನಾನ್', 'ಓ ಮಿತ್ರ, ನಾನುಮ್ ಇಂತಾಗೆನೆ ಒಂದು ದಿನಂ ?' ಆದರೆ ಮಾನವ ಜೀವನದ ಸಾರ್ಥಕ್ಯವನ್ನೂ ಗುರುತಿಸಿದ್ದಾರೆ : 'ಬಗೆಯೊಡನೆ ಹೋರಾಡುವುದೆ ಜಯಂ.'

ನಾಟಕ ಸಮತೋಲನವನ್ನು ಮತ್ತೊಂದು ರೀತಿಯಲ್ಲಿ ಸಾಧಿಸಿದೆ. ಕೃತಿಯ ಪೂರ್ವಾರ್ಧ ಮನುಷ್ಯನ ಸಹಾಯಹೀನತೆಯೇ ಮಡುಗಟ್ಟಿದಂತಿದೆ. ರುದ್ರನೇ ಅಶ್ವತ್ಥಾಮನನ್ನು ಬಗೆದು ಕೃಷ್ಣನನ್ನು ಕೇಳುತ್ತಾನೆ :

ಆರ್ ಇರ್ಪರ್ ಈತನಿನ್ ಜ್ಞಾನಿಯುಂ ಶೂರನುಂ ?
ಬಲ್ಲಯ್ ಆರಾನುಮನ್ ?

'ನಾನ್ ಕಾಣೆನ್ ಆದುಮನ್' ಎನ್ನುತ್ತಾನೆ ಕೃಷ್ಣ. ಇಂತಹ ಜ್ಞಾನಿಯನ್ನು, ಶೂರ ನನ್ನು ಭ್ರಮೆ ಮೆಟ್ಟಿ ಆಡಿಸುವ ರೀತಿಯನ್ನು ಕಂಡಾಗ, ಕೃಷ್ಣನಾಡುವ ಮಾತುಗಳು ನಮ್ಮ ಹೃದಯವನ್ನೆ ಬಿಚ್ಚಿಡುತ್ತವೆ :

ಏನ್ ಪಾಡೊ ಆಳ ಬಾಳ್ !
ಬೀಸುವ ಬಯಲ ಗಾಳಿ, ಪರಿದಡಂಗುವ ನೆರಳ್.

ಪೂರ್ವಾರ್ಧದಲ್ಲಿ ಕೃತಿಯನ್ನು ಮನುಷ್ಯನ ಸಹಾಯಹೀನತೆ, ಅವನ ಬಾಳಿನ ಅನಿಶ್ಚಯತೆ–ಇವು ದಟ್ಟವಾಗಿ ಮುತ್ತುತ್ತವೆ. ಆದರೆ ಇವು ಕವಿಯುತ್ತಿರುವಾಗಲೆ ಇನ್ನೊಂದು ಅಂಶ ಧ್ವನಿತವಾಗುತ್ತದೆ–ಮೇಳದವರ ಬರವಿನೊಡನೆ. ಇವರು ಕನ್ನಡ ಬೇಡರು.

ದ್ರೋಣಪುತ್ರ, ರುದ್ರಮಿತ್ರ,
ನಿನಗೆ ಶುಭಮ್ ನಲಿವೆನ್ ಆನ್

–ಕತ್ತಲೆ, ಯಾತನೆ ತುಂಬಿದ ಜಗತ್ತಿನಲ್ಲಿ ಶುಭವನ್ನು ಹಾರೈಸುವ ಸ್ನೇಹದ ವಾಣಿ ಕೇಳುತ್ತದೆ. ಕ್ರಿಯೆ ಸಾಗಿದಂತೆ ಈ ಸ್ನೇಹದ ವಾಣಿಗೆ ಶಕ್ತಿ ಬರುತ್ತದೆ. ಇದು ಅತ್ಯಂತ ಶಕ್ತಿಯುತವಾಗಿ ಕೇಳುವುದು ಏಕಲವ್ಯನ ತುಟಿಗಳಿಂದ :

ಅಣ್ಣ, ಅಶ್ವತ್ಥಾಮ, ಗುರುಪುತ್ರ, ಗುರು, ಇನಿಯ.
ಒರ್ವನ್ ಎನ್ನನ್ ಬಿಟ್ಟು ನೀನಿಂತು ಪೋದೆಯಾ ?
ಓ ವೀರ, ಓ ರುದ್ರನವತಾರ, ಎನ್ನಿನಿಯ,
ಎನ್ನೊಡೆಯ ಅಶ್ವತ್ಥಾಮ ಓ ಅಶ್ವತ್ಥಾಮ.

ಈ ಸ್ನೇಹ ಭೀಮನನ್ನೂ ಎದುರಿಸಿ ನಿಲ್ಲಬಹುದು. ಈ ಸ್ನೇಹದ ಜೊತೆಗೆ ಕಾಣಿಸಿ ಕೊಳ್ಳುತ್ತದೆ ಮಾತೃವಾತ್ಸಲ್ಯ-ಭಾರ್ಗವಿಯ ವಾತ್ಸಲ್ಯ :

ಪೆರ್ಗಿಚ್ಚು ಭಾರವಂ ಪೊತ್ತಿತ್ತು ; ಭಸ್ಮಮಾದನ್ ಮಗನ್ ; ಬೆಂದೊಡಲ್ಗೆನಗೆ
ನೀನೊರ್ವನ್ ಇರ್ದವಯ್ ಪುರುಳಾಗು, ಮರುಳಾಗು, ಕಲಿಯಾಗು, ಪೇಡಿ
ಯಾಗಣ್ಣ,
ನೀನೊರ್ವನ್ ಇರ್ದಪಯ್ ಪೋಗದಿರು, ಪೋಗದಿರು, ಕಾಲ್‌ಕಟ್ಟಿ ಬೇಡುವೆನ್
ಪೊಗದಿರು, ಓ ಎನ್ನ ಕಂದ ಅಶ್ವತ್ಥಾಮ.

ನಾಟಕ ಅರ್ಧ ಸಾಗಿರುವಂತೆ ಹಾಡೊಂದು ಕೇಳುತ್ತದೆ :

ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖದೊರತೆಯ ಬನವಾಸೀ,
ಬಳಿದಲೆದಾ ಕಾನ್‌ಮಲೆಗಳನ್ ಆನ್ ಮರೆವನೆ, ಬನವಾಸೀ !
ಪೆರ್ಮೆಯ ನೆಲೆ, ಪಡುಗಡಲಲೆ ಸುಖಮೆರಚುವ ಬನವಾಸೀ,
ನೀನ್ ಕಳಿಪಿದ ಪೇರಾಳ್ಗಳ ಅದೇನಾದರ್, ಬನವಾಸೀ !

ಖಡ್ಗದ ಮೇಲೆ ಬೀಳಲಿರುವ 'ಅಶ್ವತ್ಥಾಮನ ಬಾಯಿಯಿಂದ ಈ ಮಾತುಗಳು ಬರು ತ್ತವೆ.'

ನೀಮ್ ಎಲ್ಲಿ ಇನ್ನೆನಗೆ ಓ ಪೊಳೆವ ಪೊಗಲ
ಎಳಬಿಸಿಲೆ ! ತೇರೊಳ್ ಏರಿದ ಪೊಳ್ತೆ ! ಇದುವೆ ಕಡೆ, ಕಡಿಯ ನುಡಿ ನುಡಿವೆನ್.
ಓ ಬೆಳಕೆ, ಓ ಪುಣ್ಯಭೂಮಿಯೇ, ಕನ್ನಡವೇ, ಎನ್ನ ತಾಯ್ನಾಡ,
ನೆಲನ್ ಅರಿವ ಬನವಾಸೀ, ತೆಂಗುಗರಿ ಕೊಡೆಯಿದ, ಕಡಲುಲಿಯಮನೆಯೋ,
ಒಡೆನಾಡಿ ಪಸುಳೆಗಳೆ, ಕೆರೆಗಳೆ, ಪೊನಲ್ಗಳೇ, ಓ ಪಸುರ ಬಯಲೆ,
ಬೀಳ್ಕೊಡಿಂ, ಬೀಳ್ಕೊಡಿಂ, ಎನಗೆ ಜೀವಾನಂದಮ್ ಆಗಿರ್ದರ್ ಎಲ್ಲರ್
ಬೀಳ್ಕೊಡಿಂ.

ಇಲ್ಲಿ ಅಶ್ವತ್ಥಾಮನು ನೆನಸಿಕೊಳ್ಳುವ 'ಪೊಳೆವ ಪಗಲ ಎಳೆ ಬಿಸಿಲು', ಬೆಳಕು, ಕನ್ನಡ, ಕಡಲುಲಿಯ ಮನ್ರೆ ಒಡನಾಡಿ ವಸುಳ್ಗಳು, ಕೆರೆಗಳು, ಪಸುರ ಬಯಲ, 'ಜೀವಾ ನಂದಮ್ ಆಗಿರ್ದ ಎಲ್ಲರ್'–ಅವನ ತೇಜೋವಧೆಯಷ್ಟೆ ಸತ್ಯ, ಅವನ ನಿಸ್ಸಹಾಯ ಕತೆಯಷ್ಟೆ ಸತ್ಯ, ಅವನ ಯಾತನೆಯಷ್ಟೆ ಸತ್ಯ. ಭಾರ್ಗವಿಯ ಮಮತೆ, ಏಕಲವ್ಯನ

ಸ್ನೇಹ, ಕೃಷ್ಣನ ವಿವೇಕ ಇವೂ ಅಶ್ವತ್ಥಾಮನ ಯಾತನೆಯಷ್ಟು, ಭೀಮನ ಕಾರ್ಯದಷ್ಟು ಸತ್ಯ. ನಾಟಕ ಅರ್ಧ ಸಾಗಿರುವಾಗ, ಅಶ್ವತ್ಥಾಮನನ್ನೂ ಸಂಕಟದ ಮುಷ್ಟಿಯಲ್ಲಿರುವಾಗ ಅನಿರೀಕ್ಷಿತವಾದ ಹಾಡೊಂದು ಚಿಮ್ಮುತ್ತದೆ :

ಹೊ ! ಆನಂದಂ ! ಪೇರಾನಂದಂ !
ನೆಗೆವಾ ಕುಣಿವಾ ಮಿಗಿಲಾನಂದಂ !

ಸಮಗ್ರ ನಾಟಕವನ್ನು ಗಮನಿಸಿದಾಗ ಅದು ಬಾಳ ಶ್ರೀಮಂತಿಕೆಯನ್ನು ಅನುಭವಕ್ಕೆ ತಂದುಕೊಡುತ್ತದೆ ಎಂಬುದು ಸ್ಪಷ್ಟವಾಗುತ್ತದೆ.

'ಶ್ರೀ'ಯವರ 'ಅಶ್ವತ್ಥಾಮನ್' ಸಾಕಷ್ಟು ಸಂಕೀರ್ಣವಾದ ಕೃತಿ. ದೈವ ಮುಳಿದವನು ಹತಭಾಗ್ಯ,

ಮಿತಿಯರಿದು ನೆಗಳ್ವರ್ಗೆ
ದೇವರ್ಕಳ್ ಒಲಿದಪರ್–ಮುರಿದರ್ಪ ಮಿಕ್ಕರನ್

ಎಂಬ ತತ್ವಕ್ಕೆ ಅತಿಪ್ರಾಧಾನ್ಯ ನೀಡಿದಾಗ ಕೃತಿಯಲ್ಲಿ ಅಂತರ್ಗತವಾದ ಜೀವನ ದರ್ಶನವನ್ನು ಅನಗತ್ಯವಾಗಿ ಸರಳಗೊಳಿಸಿದಂತಾಗುತ್ತದೆ. ದೈವದ ಸ್ವರೂಪದ ರಹಸ್ಯಕ್ಕೆ ಅದು ಕೊಡುವ ಒತ್ತನ್ನು ಕಡೆಗಣಿಸಿದಂತಾಗುತ್ತದೆ, ಅಂತೆಯೇ ಕೃತಿಯ ಸಂಕೀರ್ಣತೆಯೂ ಮರೆಯಾಗುತ್ತದೆ.

# ಶ್ರೀಯವರು ರೂಪಿಸಿದ ಛಂದಸ್ಸು

ಕೆ. ಶಿವರಾಮು ಐತಾಳ

ಬಿ.ಎಂ. ಶ್ರೀ ಅವರ 'ಇಂಗ್ಲಿಷ್‌ಗೀತೆಗಳು' ಕೃತಿಗಳನ್ನಷ್ಟೆ ಇಲ್ಲಿ ಲಕ್ಷ್ಯದಲ್ಲಿಟ್ಟು ಕೊಳ್ಳಲಾಗಿದೆ. ಇದು ಈ ಲೇಖನದ ಪರಿಮಿತಿ. ಇವರ ಇತರ ಕೃತಿಗಳಲ್ಲಿ ಇತರ ಮಾದರಿಗಳು ಸಿಗುತ್ತವೆ. ಅವನ್ನೆಲ್ಲ ಇಲ್ಲಿ ಕೈಬಿಡಲಾಗಿದೆ.

ತೀರ ಇತ್ತೀಚೆ ಶ್ರೀ ಅವರ ಮೇಲಿನ ಲೇಖನ ಒಂದನ್ನು ಓದಿದೆ. ಅದರಲ್ಲಿ ಲೇಖಕರು "ಕನ್ನಡದಲ್ಲಿ ದಿ|| ಗೋವಿಂದ ಪೈಗಳಂತೆ ಹೊಸ ಛಂದಸ್ಸಿನಲ್ಲಿ ಪ್ರಯೋಗ ನಡೆಸಿದವರಲ್ಲಿ ಶ್ರೀಯವರೂ ಓರ್ವರು" ಎಂದಿದ್ದಾರೆ.[1]

ಇದನ್ನೋದಿದಾಗ ಇನ್ನೊಂದೆಡೆ ಮತ್ತೊಂದನ್ನು ಓದಿದುದು ನೆನಪಾಯಿತು. ಅವರು ಬರೆದಿದ್ದರು "ಶ್ರೀಯವರು ತೋರಿದ ಮಾರ್ಗದಲ್ಲಿ ಡಿ. ವಿ. ಜಿ., ಮಾಸ್ತಿವೆಂಕಟೇಶ ಅಯ್ಯಂಗಾರ್, ಕುವೆಂಪು, ಬೇಂದ್ರೆ, ಪುತಿನ, ವಿ.ಸೀ, ಈ ಕೆಲವರೂ ಸ್ವಲ ಈಚೆಗೆ ರಾಜರತ್ನಂ, ಎಂ.ವಿ. ಸೀತಾರಾಮಯ್ಯ ಮುಂತಾದ ಇನ್ನೂ ಹಲವರೂ ಮುನ್ನಡೆದರು. ಇವರು ಹೆಚ್ಚುಹೆಚ್ಚು ಪರಿಣತ ಪ್ರಯೋಗಗಳನ್ನು ನಡೆಸಿದ ಫಲ ವಾಗಿ ಈಗ ಹೊಸಕಾವ್ಯ ಪ್ರಸ್ಥಾನ ಸ್ಥಿರವಾಯಿತು"[2]

ಇವೆರಡು ಮಾತುಗಳಲ್ಲೂ ಸಮತೂಕ ತಕ್ಕಮಟ್ಟಿಗೆ ಇಲ್ಲ ಎನ್ನಬೇಕಾಗಿದೆ. ಯಾರುಯಾರೋ ಹೊಸ ಛಂಧಸ್ಸಿನಲ್ಲಿ ಪ್ರಯೋಗ ನಡಸಿದರು. ಅವರಲ್ಲಿ ಶ್ರೀಯವರೂ ಒಬ್ಬರು ಎನ್ನುವ ಧೋರಣೆ ಮೊದಲಿನ ಮಾತಲ್ಲೂ, ಶ್ರೀಯವರು ಮಾರ್ಗ ತೋರಿಸಿದರು ಉಳಿದವರೆಲ್ಲ ಆ ಮಾರ್ಗದಲ್ಲಿ ಮುನ್ನಡೆದರು ಎನ್ನುವ ಸಾರಾಸಗಟು ತೀರ್ಮಾನ ಎರಡನೇ ಮಾತಲ್ಲೂ ಇರುವಂತೆ ತೋರುತ್ತದೆ. ಇರುವ

---

1. ಜನ್ಮದಿನದ ಸಂಸ್ಮರಣೆ ; ಕನ್ನಡದ ಸಿರಿ ಬಿ.ಎಂ. ಶ್ರೀ ಲೇಖಕರು ಬೈಕಾಡಿ ವೆಂಕಟ ಕೃಷ್ಣರಾಯ. ಪ್ರಜಾವಾಣಿ 3-1-1979. ಕೊನೆಯಲ್ಲಿ ಲೇಖಕರು "ಈ ಲೇಖನಕ್ಕೆ ಬೇಕಾಗಿದ್ದ ಕೆಲವು ಅಂಕಿ ಅಂಶಗಳನ್ನು, ಸಂಗತಿಗಳನ್ನೂ ದಿ|| ಕೆ.ವಿ. ರಾಘವಾಚಾರ್ಯರ ಒಂದು ಲೇಖನದಿಂದ ಸಂಗ್ರಹಿಸಿದ್ದೇನೆ" ಎಂದಿದ್ದಾರೆ. ಆ "ಒಂದು ಲೇಖನ" ಯಾವುದು ಎಂದು ಸೂಚಿಸಿಲ್ಲ. ಈ ಮಾತನ್ನು ಹೀಗೆ ಆ ಶ್ರೀ ರಾಘವಾಚಾರ್ಯರು ಬರೆ ದಿದ್ದಿರಲಾರರು.
2. ಕನ್ನಡ ಛಂದಃಸ್ವರೂಪ: ಡಾ.ಟಿ.ವಿ. ವೆಂಕಟಾಚಲಶಾಸ್ತ್ರೀ. ಪ್ರ, ಡಿ.ವಿ.ಕೆ. ಮೂರ್ತಿ. ಮೈಸೂರು. 1978. ಪುಟ. 594.

ಬೆಲೆಯನ್ನು ಕೊಡುವುದು, ಇಲ್ಲದ ಬೆಲೆಯನ್ನು ಕೊಡುವುದು ಎರಡೂ ಸೂಕ್ತವಲ್ಲವೆನ್ನಿಸುತ್ತದೆ. ಗೋವಿಂದ ಪೈ ಅವರ ವಿದ್ವತ್ತಿಗೆ, ಸಾಧನೆಗೆ ನಮ್ರತೆಯಿಂದ ನಮಸ್ಕರಿಸೋಣ. ಆದರೆ ಪೈ ಅವರ ಪ್ರಯೋಗ, ಹಾಗೂ ಶ್ರೀಯವರ ಪ್ರಯೋಗ ಇವೆರಡರಲ್ಲಿ ಯಾವುದು ಎಷ್ಟು ಪರಿಣಾಮಕಾರಿಯಾಯಿತು ಎನ್ನುವುದು ಸಾಹಿತ್ಯದ ಸಾಮಾನ್ಯ ವಿದ್ಯಾರ್ಥಿಯೂ ತಿಳಿದಿರುವ ಐತಿಹಾಸಿಕ ಸತ್ಯ. ಹಾಗೆಯೆ, ಛಂದಸ್ಸಿನ ದೃಷ್ಟಿಯಿಂದ ಡಿ.ವಿ.ಜಿ, ಬೇಂದ್ರೆ ಹಾಗೂ ರಾಜರತ್ನಂ ಶ್ರೀಯವರ ಪ್ರಭಾವಲಯದಿಂದ ತಕ್ಕಷ್ಟು ಸಿಡಿದು ನಿಂತಾರು ಎಂದೇ ತೋರುತ್ತದೆ. ಇಲ್ಲಿ ವಿವರ ಅಪ್ರಕೃತ. ಹೊಸಗನ್ನಡ ಛಂದಸ್ಸನ್ನು ವಿವರವಾಗಿ ಕುರಿತಾಗ ಇದು ತೀರ್ಮಾನಕ್ಕೆ ಬರುತ್ತದೆ.

ಬಿ.ಎಂ. ಶ್ರೀ ಅವರ 'ಇಂಗ್ಲಿಷ್ ಗೀತಗಳು' ಪುಸ್ತಕಕ್ಕೆ ಪ್ರೊ. ತೀ. ನಂ. ಶ್ರೀ ಅವರು ವಿಸ್ತಾರವಾದ ಪ್ರಸ್ತಾವನೆ ಬರೆದಿದ್ದಾರೆ. ಅದರಲ್ಲಿ ಶ್ರೀಯವರ ಪ್ರಯೋಗದ ಪರಿಚಯವನ್ನು ಸಾಧನೆಯನ್ನು ಕುರಿತು ಬರೆದಿದ್ದಾರೆ. ಶ್ರೀಯವರಿಗೆ ಸಮರ್ಪಿಸಿದ 'ಸಂಭಾವನೆ'ಯಲ್ಲಿ ಹಲವರು ಆ ಕುರಿತು ಮುತ್ತಿನಂಥ ಮಾತುಗಳನ್ನಾಡಿದ್ದಾರೆ. ಶ್ರೀ ಎಸ್. ಅನಂತನಾರಾಯಣ ಅವರು 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ' ಎಂಬ ತಮ್ಮ ಮಹಾಪ್ರಬಂಧದಲ್ಲಿ ವಿವರಿಸಿದ್ದಾರೆ.[1] ಡಾ. ಟಿ. ವಿ. ವೆಂಕಟಾಚಲಶಾಸ್ತ್ರಿ ಅವರು ಆ ಕುರಿತು ಬರೆದಿದ್ದಾರೆ. ಇಲ್ಲಿನವನ್ನೆಲ್ಲ ಅನುವದಿಸುವುದು ಇಲ್ಲಿನ ಕೆಲಸವಲ್ಲ.

ಬಿ.ಎಂ. ಶ್ರೀ ಅವರು ತಮ್ಮ ಅರಿಕೆಯಲ್ಲಿ ಒಂದು ಮಾತು ಬರೆದಿದ್ದಾರೆ: "...ಸಾಮಾನ್ಯವಾಗಿ....ಛಂದಸ್ಸು....ಮೂಲಕವಿಯ ವ್ಯಕ್ತಿತ್ವವನ್ನೇ ಅನುಸರಿಸಿವೆ, ಕನ್ನಡದ ಜಾಯಮಾನವನ್ನು ಮೀರದೆ ಎಷ್ಟುಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೊ ಅಷ್ಟುಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ. ಇಂಗ್ಲಿಷ್ ಬಲ್ಲವರು ಇದನ್ನು ತಿಳಿಯುವರು, ಅಚ್ಚಗನ್ನಡಿಗರು ಈ ಭಾಗದಲ್ಲಿ ಅಸಮಾಧಾನ ಪಡಬಾರದೆಂದು ನನ್ನ ಪ್ರಾರ್ಥನೆ."[2]

ಇಲ್ಲಿ "ಅಚ್ಚಗನ್ನಡಿಗರು" ಎನ್ನುವಲ್ಲಿ ವ್ಯಂಗ್ಯ ಇದೆ. "ಸಂಪ್ರದಾಯ ಮಾರ್ಗವನ್ನೇ ಛಲಹಿಡಿಯು"ವವರು ಅವರು. "ಇಂಗ್ಲಿಷ್ ಬಲ್ಲವರು ಇದನ್ನು ತಿಳಿಯುವರು"

---

1. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ: ಎಸ್. ಅನಂತನಾರಾಯಣ. ಪ್ರ. ಗಂಗಾತರಂಗ, ಮೈಸೂರು–5–1962.
2. ಇಂಗ್ಲಿಷ್ ಗೀತೆಗಳು : ಶ್ರೀ ; ಪ್ರ. ವಿಶ್ವಸಾಹಿತ್ಯ, ಮೈಸೂರು. ಎರಡನೆಯ ಪರಿಷ್ಕರಣ 1953. ಅರಿಕೆ. ಪುಟ 10. ಇನ್ನು ಮುಂದೆಲ್ಲ ಉದ್ಧರಿಸುವುದು ಈ ಆವೃತ್ತಿಯಿಂದಲೇ.

ಎಂದರಲ್ಲ. ಅವರು ಎಲ್ಲಿ ತಿಳಿದರು ? ಎಲ್ಲಿ ತಿಳಿಯಪಡಿಸಿದರು—ಇಷ್ಟು ವರ್ಷಗಳಾದರೂ. ಈ ದಿಸೆಯಲ್ಲಿ ಕಿಂಚಿತ್ ಪ್ರಯತ್ನ ಇಲ್ಲಿ ಸಾಧ್ಯವಾಗಬಹುದು. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಛಂದಸ್ಸಿನ ಪ್ರಭಾವ ; ಅದು ಮುಖ್ಯವಾಗಿ ಆದುದು ಇಂಗ್ಲಿಷ್ ಗೀತಗಳ ಮೂಲಕ.

'ಪ್ರಸ್ತಾವನೆ'ಯಲ್ಲಿ ತೀ. ನಂ. ಶ್ರೀ ಅವರ ಒಂದು ಮಾತು : "ಇಲ್ಲಿಯ ಪದ್ಯಜಾತಿಗಳ ವೈವಿಧ್ಯವನ್ನು ಲೆಕ್ಕ ಹಾಕುತ್ತಾ ಪ್ರಸ್ತಾರವನ್ನು ಪ್ರದರ್ಶಿಸುತ್ತಾ ಹೋಗುವುದು ಈ ಪ್ರಸ್ತಾವನೆಯ ಉದ್ದೇಶಕ್ಕೆ ಮೀರಿದ್ದು"[1] ಇಲ್ಲಿ "ಲೆಕ್ಕ ಹಾಕುತ್ತಾ", "ಪ್ರದರ್ಶಿಸುತ್ತಾ" ಎನ್ನುವ ಮಾತು ಏಕೆ ಬಂತೋ ! ಆನಂದವರ್ಧನ ಒಂದೊಂದು ಶಬ್ದದ ಧ್ವನಿಯನ್ನು, ಕೊನೆಗೆ ಕಾಕುವನ್ನು ಗುರುತಿಸುವಾಗ ಲೆಕ್ಕ ಹಾಕಿದನೆ ? ಪ್ರದರ್ಶಿಸಿದನೆ ? ಹೇಗಾದರಿರಲಿ, ಒಂದು ಅನುಭವ, ಒಂದು ಸಂತೋಷ ಒದಗಿದಾಗ ಅದು ಹೇಗೆ ಉಂಟಾಯಿತು ಎಂದು ನೋಡುವುದು, ತೋರುವುದು ಅರಿವಿನವರ ಅನಿವಾರ್ಯರೀತಿ. ಶ್ರೀಯವರ ಛಂದಸ್ಸಿನ ವೈವಿಧ್ಯಗಳನ್ನು ತಕ್ಕಮಟ್ಟಿಗೆ ಲೆಕ್ಕಹಾಕುವುದು, ಪ್ರದರ್ಶಿಸುವುದು–ಇವನ್ನು ಮಾಡಬಹುದು.

ಮೊದಲಿಗೆ ಒಂದು ವಿಚಾರವನ್ನು ಗಮನಿಸುವುದು ಒಳಿತು. ಅದು ಹೊಸಗನ್ನಡ ಛಂದಸ್ಸಿನ ಸಾಧನೆಯಲ್ಲಿ ಬಿ. ಎಂ. ಶ್ರೀ ಅವರ ಸ್ಥಾನ. ಇಂದು, ಇಂದಿನ ಕನ್ನಡ ಕವಿಗಳ ಕವಿತೆಗಳು ನಮ್ಮ ಕಿವಿಯಮೇಲೆ ಧಾರಾಳವಾಗಿ ಬೀಳುತ್ತಿವೆ. ರೇಡಿಯೋದಲ್ಲಿ, ಸಿನೆಮಾಗಳಲ್ಲೂ ಈ ಕವಿಗಳ ಕೃತಿಗಳು ಕೇಳುತ್ತಿವೆ. ಮೊನ್ನೆ ಮೊನ್ನೆ ನಡೆದ ಕುವೆಂಪು ಅವರ ಗೀತವಾಚನ ಸ್ಪರ್ಧೆಯಲ್ಲಿ ನಾನು ತೀರ್ಪುಗಾರನೊಬ್ಬನಾಗಿದ್ದೆ. ಸುಮಾರು ಐವತ್ತಕ್ಕೂ ಮೀರಿ ಜನ ಕುವೆಂಪು ಅವರ ಬೇರೆ ಬೇರೆ ಕವನಗಳನ್ನು ಸುಶ್ರಾವ್ಯವಾಗಿ ಹಾಡಿದರು : ಬಿ. ಎಂ. ಶ್ರೀ ಅವರ ಕಾಲದಲ್ಲಿ ಸ್ಥಿತಿ ಹೀಗಿರಲಿಲ್ಲ. ದಾಟಿ ಹಿಡಿದು ಹಾಡುವುದಕ್ಕೆ, ಓದುವುದಕ್ಕೆ ತಿಳಿಯದಿದ್ದ ಜನಕ್ಕೆ ಪ್ರಾಯಶಃ ಸಂಪ್ರದಾಯದ ಬೀಗ ಹಾಕಿ ಬಾಯಿ ಕಟ್ಟಿಹೋಗಿದ್ದ ಕವಿಗಳಿಗೆ–ಹಾಡಿ ತೋರಿಸಬೇಕಾಗಿದ್ದ ಕಾಲವಾಗಿತ್ತು. ಇಂಗ್ಲಿಷ್ ಛಂದಸ್ಸಗಳನ್ನು ಇಳಿಸಿದ್ದೇನೆ ಎನ್ನುವುದರ ಜೊತೆಗೆ 'ಕನ್ನಡದ ಜಾಯಮಾನವನ್ನು ಮೀರದೆ' ಎಂದು ಸೇರಿಸುವ ಅಗತ್ಯ ಬಿ. ಎಂ. ಶ್ರೀ ಅವರಿಗೊದಗಿದರೆ ಅದು ಕನ್ನಡದ ಜಾಯಮಾನವನ್ನು ಹೇಗೆ ಮೀರಿಲ್ಲ ಎಂದು ತೋರಿಸಿಕೊಡುವಂತೆ ತೀ. ನಂ. ಶ್ರೀ ಅವರು ಬರೆಯಬೇಕಾಯಿತು. "ಇದು ಮ್ಲೇಚ್ಛಶೈಲಿ" ಎನ್ನುವಂತೆ ಸಂಪ್ರದಾಯವಾದಿಗಳು ಎಣಿಸಬಹುದಾಗಿದ್ದರೆ, ಹಾಗಲ್ಲ, ಇಲ್ಲಿರುವುದು ಕನ್ನಡದ್ದೇ ತಳಹದಿ ಎಂದು ತೋರಬೇಕಾಗಿತ್ತು, ಇಂದು ಆ ಸ್ಥಿತಿ ಇಲ್ಲ, "ಮೊದಲ ತಾಯ ಹಾಲ ಕುಡಿದು ; ಲಲ್ಲೆಯಿಂದ

---

1. ಮೇಲಿನದೇ, ಪ್ರಸ್ತಾವನೆ, ಪುಟ 35,

ತೊದಲಿ ನುಡಿದು..." ಎನ್ನುವ 'ಕಾಣಿಕೆ'ಪದ್ಯವನ್ನು ಸಾಹಿತ್ಯದ ಸಾಮಾನ್ಯವಿದ್ಯಾರ್ಥಿಗೆ 'ಇದು ಮೂರು ಮಾತ್ರೆಗಳ ಲಯ' ಎಂದು ಹೇಳಿಕೊಡಬೇಕಾಗಿಯೂ ಇಲ್ಲ; ಇದಕ್ಕೆ ಆಧಾರಭೂತವಾಗಿ ಭೋಗಷಟ್ಪದಿಯ "ತಳಕಟ್ಟನ್ನು" ಅಗೆದು ತೋರಿಸಿಕೊಡ ಬೇಕಾಗಿಯೂ ಇಲ್ಲ. [1]ಹಾಗೆಯೇ ಛಂದಶ್ಶಾಸ್ತ್ರವೂ ಇಂದು ಅಂದಿಗಿಂತ ಜನಪ್ರಿಯ ವಾಗಿದೆ. ಬರೆಯುವವರ ದೃಷ್ಟಿಯಿಂದಲ್ಲ; ಕಾಗದದ ಮೇಲೆ ಗುರುಲಘುಗಳನ್ನು ಹಾಕಿ ನೋಡಿ ಲೆಕ್ಕಿಸಿ ಅರ್ಥಮಾಡಿಕೊಳ್ಳುವುದಕ್ಕಿಂತ ಕಿವಿಯಲ್ಲಿ ಕೇಳಿ ಅರ್ಥಮಾಡಿ ಕೊಳ್ಳಬಲ್ಲವರು ಸೃಷ್ಟಿಯಾಗಿದ್ದಾರೆ ಎನ್ನುವ ದೃಷ್ಟಿಯಿಂದ.

ಲಯ, ಅದರ ಅನುಭವ–ಅದೊಂದು ಆನಂದ. ಜನ ಇದರಿಂದ ವಂಚಿತ ರಾಗಿದ್ದರು–ಸಂಪ್ರದಾಯದ ಅತಿರೇಕದಿಂದ. ಮತ್ತೆ ಅದು ಸಾಮಾನ್ಯರಿಗೂ ಸಿಗು ವಂತೆ ಆದುದು ಹೊಸಗನ್ನಡ ಛಂದಸ್ಸಿನಿಂದ. ಅದು ಕಣ್ತೆರೆದುದು ಇಂಗ್ಲಿಷ್ ಗೀತೆ ಗಳ ಶಲಾಕೆಯಿಂದ. ಹೊಸಗನ್ನಡ ಛಂದಶ್ಶಾಸ್ತ್ರಕ್ಕೆ ಇಂಗ್ಲಿಷ್ ಗೀತೆಗಳು ಒಂದು ಭದ್ರವಾದ ತಳಕಟ್ಟು.

3, 4, 5, 7 – ಈ ಮಾತ್ರಾಲಯಗಳಲ್ಲಿ ಹಾಗೂ ಅಂಶಗಣಗಳಲ್ಲಿ ಕೃತಿಗಳು ರಚಿತವಾಗಿವೆ. ಆಯಾ ಗುಂಪಿನ ಕೃತಿಗಳ ಛಂದಸ್ಸಿನ ಪರಿಶೀಲನೆಗೆ ಮುನ್ನ ಮುಖ್ಯ ವಾದ ಪಾದವಿನ್ಯಾಸಗಳನ್ನು ತೋರಿಸಲಾಗಿದೆ.

## ಮೂರು ಮಾತ್ರೆಗಳ ಲಯದವು

(ಅ) ಹೊಟ್ಟೆ ಗಿಷ್ಟು ಹಿಟ್ಟು ಗಂಜಿ (ನಾಲ್ಕುಗಣ)
(ಆ) ಹಷ್ಟ ಏನು ಬೇಟ ವೊ (3, 3, 3, ಗ)
(ಇ) ಅರಸು ವೆನಗೆ ಬಾ (3, 3 ಗ)

1, 3, 3, 3, 3. ಎಂಟುಪಾದಗಳು (ಬಡವನ ಹುರುಡು. ಪುಟ. 37)

ಮಾನವಾಗಿ ತಾನು ಬದುಕಿ
ಹೀನ 'ಬಡತನ' ವೇನೆ ಇರಲಿ
ನಾಚಿಕೊಳ್ಳುವ ನೀಚತೊತ್ತ
ಆಚೆನೂಕು ಏನೆ ಇರಲಿ

---

1. ಇಂಗ್ಲಿಷ್ ಗೀತಗಳು, ಪ್ರಸ್ತಾವನೆ. ಪುಟ. 35, 36. ಮೂರು ಮಾತ್ರೆಗಳ ಲಯಕ್ಕೆ ಭೋಗ ಷಟ್ಪದಿ ತಳಕಟ್ಟಲ್ಲ. ಮೂರು ಮಾತ್ರೆಗಳ ಲಯವೇ ತಳಕಟ್ಟು. ಈ ಲಯ ದಲ್ಲಿ ಬೇರೆ ಬೇರೆ ಛಂದೋಬಂಧಗಳಿವೆ. ಅವುಗಳಲ್ಲಿ ಒಂದು ಗೋಡೆ ಭೋಗಷಟ್ಪದಿ. 'from known to unknown' ಎಂಬತೆ ಪರಿಚಯ ಮಾಡಿಕೊಡಲು, ಜೊತೆಗೆ ಇದಕ್ಕೂ ಸಾಂಪ್ರದಾಯಿಕ ವೃತ್ತಗಳಷ್ಟೇ ಪಾವಿತ್ರ್ಯ ಇದೆ ಎಂದು ತೋರಲು ಭೋಗ ಷಟ್ಪದಿಯ ಅಗತ್ಯ ಲೇಖಕರಿಗೆ ಬಿದ್ದಿರಬಹುದು.

ಏನೆ ಇರಲಿ ಏನೆ ಇರಲಿ
ಕಷ್ಟ 'ನಿಷ್ಠುರ' ವೇನೆ ಇರಲಿ
ಮೆರೆವ ಪದವಿ ವರಹ ಮುದ್ರೆ
ಆಳು ಚಿನ್ನ ಏನೆ ಇರಲಿ

ಇಲ್ಲಿ 'ಬಡತನ', 'ನಿಷ್ಠುರ' ಇವನ್ನು ತ್ವರಿತದಿಂದ ಓದಬೇಕು. ಮೂರು ನಾಲ್ಕರ ಲಯದಂತೆಯೂ ಓದಬಹುದು. ಮೂರರ ಲಯವೇ ಉಚಿತ.

2. 3, 3, 3, 3+3, 3, ಗ+3, 3, 3, 3 ನಾಲ್ಕುಪಾದ+3, 3, ಗ (ಇರುಳದೇವಿ ಪುಟ. 7–7)

ಬೇಗ ಪಡುವ ತೆರೆಯ ತುಳಿದು
ಇರುಳದೇವಿ ಬಾ
ಮಬ್ಬುಗವಿಯೊಳೊಬ್ಬಳಿದ್ದು
ಹಗಲುಸಮೆಯುದಾಗ ಹೆಣೆದ
ಸೊಗದ ಭಯದ ಕನಸ ಬೀರಿ
ಉಬ್ಬಿಸುತ್ತ ಬೆದರಿಸುತ್ತ
'ಬಾ' ಬೇಗ ಬಾ

ಇಲ್ಲಿ, ಕೊನೆಯ ಪಾದದಲ್ಲಿ 'ಬಾ' ಗಣದಷ್ಟು ಎಳೆದು ಹೇಳಬೇಕು. ಇಲ್ಲಿ ಮೊದಲೆರಡು ಪಾದ ಕೊನೆಯೆರಡು ಪಾದ ಒಂದು ರೀತಿ. ಮಧ್ಯದಲ್ಲಿ ಮೂರುಮಾತ್ರೆಗಳ ನಾಲ್ಕುಗಣಗಳ ಮೂರು ಪಾದವಿದೆ. ಮೊದಲೆರಡು ಪಾದಗಳು ಇನ್ನೂ ಒಮ್ಮೆ ಬಂದು, ಮಧ್ಯದಲ್ಲಿ ನಾಲ್ಕುಗಣಗಳ ನಾಲ್ಕು ಪಾದಬಂದು, ಮತ್ತೆ ಇಲ್ಲಿನಂತೆಯೇ ಎರಡುಪಾದ ಬರಬಹುದು (ಕನಸುಬೇಕು ಕನಸು 95)

3. (3,3,3,3+3,3,3ಗ)×2 + (3,3,3,3 ಮೂರುಪಾದ+3,3,3ಗ) (ಮಾದಮಾದಿ 39)

ಕಯ್ಯಮುಗಿದ ಕಾಲಹಿಡಿದ
ಹಹ್ಹ ಏನು ಬೇಟವೊ
ರೊಯ್ಯನೊದೆಯೆ ಹಲ್ಲ ಕಡಿದ
ಹಹ್ಹ ಏನು ಬೇಟವೊ
ಬೆಚ್ಚಗುಸಿರ ಬಿಟ್ಟಮಾದ
ಅತ್ತಕಂಗೆಡುತ್ತ ಸೀದ
ಹೊಳೆಯ ಬೀಳಲೆಂದು ಹೋದ
ಹಹ್ಹ ಏನು ಬೇಟವೊ

ಮೊದಲ ನಾಲ್ಕು ಪಾದ ಅರ್ಧಸಮ. 'ಹಹ್ಹ' ಎನ್ನುವುದನ್ನು ಗಣಾವಕಾಶದೊಳಗೇ 'ಹಹ್ಹಾ' ಎಂದರೆ ಚೆನ್ನ.

4. 3 ಎಂಟುಗಣ ಮೂರು ಪಾದ+3 ಏಳುಗಣ+ಗುರು (ಮುದ್ದಿನಕುರಿಮರಿ 8)

ಒಡಿದು ಮಂಜುಬೀಳುತಿತ್ತು, ಚುಕ್ಕಿ ಕಣ್ಣು ಮಿಟುಕುತಿತ್ತು
ಕುಡಿಯೊ ಕಂದ ಕುಡಿಯೊ ಎಂದು ನುಡಿವಮಾತು ಕಿವಿಗೆಬಿತ್ತು
ತಿರುಗಿ ನೋಡಲೊಬ್ಬೆಯಾಚೆ, ಒಬ್ಬಳಲ್ಲಿ ಹೆಣ್ಣುಮಗಳು
ನೊರೆಯ ಬಿಳುಪು ಕುರಿಯ ಮರಿಯ ತಲೆಯ ತಡವುತಿದ್ದಳು

ನಾಲ್ಕು ಗಣಗಳಿಗೆ ಯತಿಯನ್ನು ಹೇಳಬಹುದು. ಎರಡೆರಡು ಪಾದಗಳಿಗೆ ಆದ್ಯಂತ ಪ್ರಾಸ.

5. (3 ಎಂಟುಗಣ+3,3,3,ಗ) + (3 ಎಂಟುಗಣ, ಎರಡುಪಾದ+3,3, ಗ) (ವೀರಜನ್ಮ 99)

ಆಹ ! ಒಲಿದೆ, ಒಲಿದಿರಂತು ! ನೀವು ನನ್ನನರಿದುದಿಂತು
ನಂಟೆ ನನಗೆ ನೆಲದಲಿ
ಮೋಹಮುರಿಯದಲಸುವರಲಿ, ಸೊಗಸುವರಲಿ, ಹೆಣ್ಣಗರಲಿ
ಗುರಿಯೆ ? ಹುರಿಯೆ ? ಕೆಚ್ಚೆ ? ನೆಚ್ಚೆ ? ಅವರ ಹುಚ್ಚುಹರಟೆ, ನಾನೆ ?
ಆರು ಕಾಣೆರ

ಇಲ್ಲಿ 'ಹೆಣ್ಣಗರಲಿ' ಆರು ಮಾತ್ರೆಗಳ ಪರಿವೃತ್ತಗಣ. ಪ್ರಾಸ ಆಹ–ಮೋಹ ; ಮೂರನೆಪಾದ ಎರಡಾಗಿ ಒಡೆದು ಅಂತ್ಯಪ್ರಾಸವಿರುವಂತೆ ಯೋಜಿತ.

## ನಾಲ್ಕು ಮಾತ್ರೆಗಳ ಲಯದವು

(ಅ) ಅಡವಿಯ ಮುಳ್ಳಲಿ ಮಿಂಚಿನ ಹುಳುಗಳು (ನಾಲ್ಕುಗಣ)

(ಆ) ಊರಿನ ಗಡಿಯನು ದಾಟಿದಳು (444ಗ)

(ಇ) ಪಂಜನು ಹಿಡಿಯುವುವು (44ಗ)

(1) 4444+44ಗ (ಬಿಂಕದ ಸಿಂಗಾರಿ 49)

ಅಡವಿಯ ಮುಳ್ಳಲಿ ಮಿಂಚಿನ ಹುಳುಗಳು
ಪಂಜನು ಹಿಡಿಯುವುವು
ಗಿಡಗಳ ಹೊಳ್ಳಿನ ಗೂಬೆಗಳೆಲ್ಲಾ
ಬಾ ಹಸೆಗೆನ್ನುವುವು
ಹೇಳೆಲೆ 'ಹಕ್ಕಿ' ಚೆಲುವನು 'ಸಿಕ್ಕಿ'
'ನನಗೆ–ಮದುವೆಯೆಂ'ದು

ಇಲ್ಲಿ ಹಕ್ಕಿ, ಸಿಕ್ಕಿ–ಗಣದಷ್ಟು ಹಿಗ್ಗಬೇಕು. 'ನನಗೆ–ಮದುವೆಯೆಂ' 3+5 ಪರಿವೃತ್ತಗಣ.

(2) 4444 ಮೂರುಪಾದಗಳು+444 ಗ (ಪದುಮ 74)

ಅರಸಿನ ಕುಲವೋ ಏನಿದ್ದೇನು
ಸುರವಧು ರೂಪೋ ಏನಿದ್ದೇನು
ಗುಣವೋ ಸೊಬಗೋ ಏನಿದ್ದೇನು
ಪದುಮಾ ಇದ್ದುವು ನಿನಗೆಲ್ಲಾ

ಎರಡನೇ ಪಾದ ನಾಲ್ಕನೇಪಾದದಂತೇ ಇರಬಹುದು : "ಕಣ್ಣಿದು ನಿನ್ನನು ಕಾಣುವುವೆ" ಪಾದಾಂತದ 'ಏನು' ಎಂಬಲ್ಲಿನ ಕೊನೆಯ ಅಕ್ಷರ ಗುರು.

(3) 444 ಗ ಎರಡುಪಾದ+4444+444 ಗ (ಸುಂದರಿಕಮಲೆ 42)

ಕಂಡಿರ ಸುಂದರಿ ಕಮಲೆಯನು
ಕಂಡಿರ ಕೋಮಲೆ ವಿಮಲೆಯನು
ಧೀರನವೊಲು ದಿಗ್ವಿಜಯವ ಮಾಡಲು
ಊರಿನ ಗಡಿಯನು ದಾಟಿದಳು.

(4) 4444+444 ಗ ಹೀಗೆ ಒಟ್ಟು 8 ಪಾದಗಳು+444444ಗ (ನಿರಾಶೆ 79)

ಬಿಸಿಲೋ ಬೆಳೆಯಿತು ಬಾನೋ ತಿಳಿಯಿತು
ಸೆಳೆಸೆಳೆದಲೆಗಳು ಕುಣಿಯುವುವು
ಮುಸುಕಿದ ಮಂಜನು ಕಳೆಯುತ ಗಿರಿಗಳು
ಬೆಳಗುವ ಹಗಲನು ಹೊದೆಯುವುವು

ಹೀಗೆಯೇ ಇನ್ನೂ ನಾಲ್ಕು ಪಾದಗಳು ಕೊನೆಯಲ್ಲಿ

'ಹೊರಳುವ ಕಡಲಲಿ ಹೊಮ್ಮುವ ಮೊರೆತಗಳಿಂಪಾಗೆಸೆಯುವುವು'.

ನಾಲ್ಕು ಮಾತ್ರೆಗಳ ಆರುಗಣ ಮತ್ತೊಂದು ಗುರು. ಇದು 4444+44ಗಕ್ಕೆ ಸಮ. ಮೂರು ಚರಣಗಳಲ್ಲಿ ಹೀಗೆ ಬರುತ್ತದೆ. ಒಂದರಲ್ಲಿ ನಾಲ್ಕು ಮಾತ್ರೆಗಳ ಏಳುಗಣ ಮೇಲೊಂದು ಗುರು ಬರುತ್ತದೆ. ಅದು 4444+444ಗ ಕ್ಕೆ ಸಮನಾಗುತ್ತದೆ.

'ಕಿವಿಯಲ್ಲಿದೆ ಕಡೆ ಮೊರೆಯಲಿ ಕಡಲಾ ಒಂದೇ ಬೇಸರದುಲಿಯೂರಿ'

ಎಂಟುಮಾತ್ರೆಗಳ ಪರಿವೃತ್ತಲಯ 3–5 ರಂತೆ ನುಡಿಯುತ್ತದೆ. 3–4ರ ಲಯದಲ್ಲಿ '4'ರ ಸ್ಥಾನದಲ್ಲಿ ಗುರು ಬಂದು ಗಣದ ಕಾಲವನ್ನು ತೆಗೆದುಕೊಳ್ಳುವಂತೆ ಇಲ್ಲೂ '3,5,3,5,' ಬರಬೇಕಾದಲ್ಲಿ '3,5,3,ಗ' ಬಂದಲ್ಲಿ 'ಗ' ಐದು ಮಾತ್ರೆಗಳನ್ನು ಪಡೆಯುತ್ತದೆ. '3–4'ರ ಲಯದಲ್ಲಿ '4'ರ ಸ್ಥಾನದಲ್ಲಿ ಮೂರು ಮಾತ್ರೆಗಳು ಬಂದಲ್ಲಿ ಅದು ನಾಲ್ಕು ಮಾತ್ರೆಗಳಷ್ಟು ಹಿಗ್ಗುತ್ತದೆ. ಹಾಗೆಯೇ ಇಲ್ಲೂ, 3,5,35 ಬರುವಲ್ಲಿ '5'ರ ಸ್ಥಾನದಲ್ಲಿ ಕಡಮೆ ಬಂದರೆ ಗಣಾವಕಾದಷ್ಟು ಹಿಗ್ಗುತ್ತದೆ.

5. 3, 5, 3, 5 + 3, 5, 3ಗ, ಒಟ್ಟು ಹನ್ನೊಂದು ಪಾದಗಳಲ್ಲಿ ಏಳು, ಎಂಟು ಒಂಬತ್ತನೇ ಪಾದಗಳು 3, 5, 3, 5 + 3, 5, 3, 5 + 3, 5, 3ಗ,

ಏಳು ಮಗಳದಿರು ಚೋಳರಾಯನಿಗೆ
ಒಬ್ಬ ತಾಯ ಸಿರಿಮಕ್ಕಳು
ಸಾಲದೊಂದು ದಿನ ಹೇಳಿ ಮುಗಿಸುವರೆ
ಹಬ್ಬಿ ಹೆಣೆದವರ ಹಿತವನು
ಏಳು ನೈದಿಲೆಗಳಕ್ಕತಂಗಿಯರು
ಮಾಲೆಯೊಂದರಲಿ ಹೊಂದಿಕೆ
ಅವರ ತಂದೆಯೋ ಧೀರ ಕಾಳಗದೊ
ಳವರ ಚಿಂತೆಯನೆ ಕೊಳ್ಳನೆಣಿಕೆಯಲಿ
ಅವನಿಗಷ್ಟು ರುಚಿರಣದಲಿ
ತಾಳು ಕಂಬನಿಯ ತುಂಬ ಕಂಬನಿಯ
ಚೋಳಕನ್ನೆಯರ ಭಂಗಕೆ

6. 3,5, 3 5 + 3, 5, ಗ ಚತುಷ್ಪದಿ (ಪೆಡಸುದಾರಿ 90)

ದಾರಿ ಉದ್ದಕೂ ಬಳಸಿ ಏರುವುದೆ ?
ಅಹುದು ಕೊನೆಯವರೆಗೆ
ದಿನದ ಪಯಣ ದಿನವೆಲ್ಲ ಹಿಡಿಯುವುದೆ ?
ಎಲ್ಲ ಇರುಳವರೆಗೆ

7. (3, 5, 3, 5 + 3 5 3 ಗ) + 3, 5, 3, 5, 3, 5, 3. 5, ಹೀಗೆ ಎರಡು ಪಾದ + 3, 5, 3, 5, 3ಗ (ದುಃಖಸಮಯ 81)

ಏನು ಲೋಕವೋ ಏನು ಜನ್ಮವೋ
ಏನು ಕಾಲವೋ ಬೇಡವೋ

ಜೀವ'ಮಾನದ' ಕಡೆಯು 'ಹಂತವ' ಹತ್ತಿ 'ಹಿಂದಕೆ' ನೋಡಿ 'ನಡುಗುವೆ' ಯಾವ ಕಾಲಕೋ ಮರಳಿ 'ಬರುವುದು' ಆದಿ'ಕಾಲದ' ಭೋಗ'ಸಂಪದ'

ಇಲ್ಲವೆಂದಿಗೂ, ಇನ್ನದೆಂದಿಗೂ, ಇಲ್ಲವೋ

ಛಂದಸ್ಸಿನ ವಿದ್ಯಾರ್ಥಿಗಳಿಗೆ ಇದೊಂದು ಕುತೂಹಲಕಾರೀ ವೃತ್ತವೆನ್ನಿಸಬಹುದು. ಈ ಪದ್ಯವನ್ನು ನಾವು 3–5ರ ಲಯವೆಂದು ನಿರ್ಧರಿಸುವುದಕ್ಕೆ ಆಧಾರವೇನು ? ಇದನ್ನು ಮೂರು ಮಾತ್ರೆಗಳ ಲಯವೆಂದೋ, ಮೂರು-ನಾಲ್ಕರ ಲಯವೆಂದೋ ಏಕೆ ನಿರ್ವಚಿಸಬಾರದು ? ಮೂರು ಮಾತ್ರೆಗಳ ಲಯವೆಂದು ಹೊರಡೋಣ :

ಏನು । ಲೋಕ । ವೋS । —
ಏನು । ಜನ್ಮ । ವೋS । —
ಏನು । ಕಾಲ । ವೋS । —
ಬೇಡ । ವೋS । — । —

ಜೀವ । ಮಾನ । ದs । — ಕಡೆಯ । ಹಂತ । ವs । —
ಹತ್ತಿ । ಹಿಂದ । ಕೆs । — । ನೋಡಿ । ನಡುಗು । ವೆs । —

ಹೀಗೆ ಎಳೆಯುತ್ತಾ ಹೋಗಬೇಕಾಗುತ್ತದೆ. ಈ ಎಳೆತ ತುಂಬಾ ಹೆಚ್ಚು. ದುಃಖ ಸಮಯ ದುಃಖತಮ ಸಮಯವಾಗುತ್ತದೆ. ಪ್ರತಿಯಾಗಿ ಮೂರು-ನಾಲ್ಕರ ಲಯ ವನ್ನು ಹಿಡಿದು ಹೊರಟರೆ

ಏನು । 'ಲೋಕವೊ' । ಏನು । 'ದುಃಖವೊ'
ಏನು । 'ಕಾಲವೊ' । ಬೇಡ । ವೊ

ಜೀವಮಾನದ ಕಡೆಯ ಹಂತವ ಹತ್ತಿ ಹಿಂದಕೆ ನೋಡಿ ನಡುಗುವೆ ಯಾವ 'ಕಾಲವೊ'...
ಇಲ್ಲ 'ವೆಂದಿಗು' ಇನ್ನ 'ದೆಂದಿಗ' ಇಲ್ಲವೋ

ಇಲ್ಲಿ ಕವಿ ಬರೆದ, ಹಾಡಿದ ಲೋಕವೊ. ದುಃಖವೋ, ಕಾಲವೋ, ವೆಂದಿಗೂ, ದೆಂದಿಗೂ ಎನ್ನುವಲ್ಲಿ ಅಂತ್ಯಾಕ್ಷರವನ್ನು ಹ್ರಸ್ವಮಾಡಬೇಕಾಗುತ್ತದೆ. ಕವಿ ಇಟ್ಟು ಕೊಂಡಿರುವುದನ್ನು ಉಳಿಸಿಕೊಳ್ಳಬೇಕಾದರೆ ಮೂರು ಐದರ ಲಯವೇ ಉಚಿತ. ಹಿಂದೆ ಹೇಳಿದಂತೆ, ಮೂರು-ನಾಲ್ಕರ ಲಯದಲ್ಲಿ ನಾಲ್ಕರ ಸ್ಥಾನದಲ್ಲಿ ದೀರ್ಘೀಕರಣ ನಡೆಯುವಂತೆ ಇಲ್ಲೂ ನಡೆಯಬೇಕು.

## ಐದು ಮಾತ್ರೆಗಳ ಲಯದವು

ಐದು ಮಾತ್ರೆಗಳ ಲಯದಲ್ಲಿ ಬರೆದ ಪದ್ಯಗಳೇ ಹೆಚ್ಚು. ಎಂದರೆ ಇಂಗ್ಲಿಷ್ ಛಂದಸ್ಸಿನಲ್ಲಿ ಐದು ಮಾತ್ರೆಗಳ ಲಯವೇ ಹೆಚ್ಚು ಪ್ರಚುರ ಎಂದೇನೂ ಅರ್ಥವಲ್ಲ. ಪಾದವಿನ್ಯಾಸಗಳನ್ನು ಹೀಗೆ ಗಮನಿಸುವುದು.

(ಅ) ಸವೆಯಬಹುದು (5ಗ)
(ಆ) ಮುಳುಗಿದಳು ಹೊಳೆಗೆ (5 ಪದ್ಮ)
(ಇ) ಕಾಡಿನೊಳು ನೀನಿಲ್ಲ (5 5)
(ಈ) ನೆಮ್ಮುಗೆಯ ನಾಡಬಳಿಗೆ (5 5 ಗ)
(ಉ) ಏನ ಮಾಡೆನು ಹೇಳು ನಿನಗೆ (5 5 ಪ)
(ಊ) ಹುಡಿಯೊಳಗೆ ಬೀಳುವುದು ನಂದಿ ಬೆಳಕು (5 5 5 ಗ)
(ಋ) ಹೇಳದಿರು ಹೋರಾಡಿ ಫಲವಿಲ್ಲವೆಂದು (5 5 5 ಪ)
(ೠ) ಒಂದು ಮಾತನು ಲೋಕ ಹೊಲೆಗೆಡಿಸಿಕೊಂಡಿಹುದು (5 5 5 5)

ಬಂಧಗಳೆಲ್ಲಾ ಏನಿದ್ದರೂ, ಸಾಮಾನ್ಯವಾಗಿ, ಈ ವಿನ್ಯಾಸದೊಳಗೆ ಬರುತ್ತವೆ.

1. 5, 5 + 5ಗ (ಎರಡು ಮನಸ್ಸು 91)

ಹೋಗಬಾರದೆ ನಾವು
ಅವನು ನಾನು
ಆಗ ಜಗದಲಿ ದುಃಖ
ಸವೆಯಬಹುದು.

2. 5, 5 + 5ಪ (ವೀರಗಲ್ಲು 18)

ಕಾಡಿನೊಳು ನೀನಿಲ್ಲ
ಬೀಡಿನೊಳಗಿಲ್ಲ
ಬಯಸುವೊಡೆಬೇಸಗೆಯ
ತೊರೆಯಾದೆಯಲ್ಲ

ಇಲ್ಲಿ ನಾಲ್ಕು ಪಾದಗಳು. ಹೀಗೇ ಎಂಟು ಪಾದಗಳು.

3. 5, 5* + 5ಪ (ದುಃಖಸೇತು 61, ರಾವುತರದಾಳಿ 21)

* ಎಂದರೆ, ಐದು ಮಾತ್ರೆಗಳ ಎರಡುಗಳ ಒಂದು ಪಾದ ಒಮ್ಮೆಯಿಂದ ಹಿಡಿದು ಐದು ಪಾದಗಳವರೆಗೂ ಬಂದು ಅನಂತರ 5ಪ ಬರಬಹುದು. 5ಪ ಇಮ್ಮೆಯೂ ಬರಬಹುದು.

ಅ] ನಾಥೆಯಿವಳಿನ್ನೊಬ್ಬ
ಳೀಜನ್ಮ ರೋಸಿ
ವೇಧೆಯನು ತಾಳದೆಯೆ
ಮುಳುಗಿದಳು ಹೊಳೆಗೆ (ದುಃಖಸೇತು)

ಇಲ್ಲಿ 5 5 ಒಮ್ಮೆ ಬಂದಿದೆ.

ತಾನು ಮಾಡಿದ ಕರ್ಮ
ತನ್ನ ಬೆನ್ನಲಿ ಬಂದು
ಸುಟ್ಟವಳು ಇವಳು (ಅದೇ)

ಇಲ್ಲಿ 5 5 ಇಮ್ಮೆ ಬಂದಿದೆ. ಹಾಗೆಯೆ (ಎರಡು ಹಾಡುಗಳಲ್ಲೂ ಐದು ಬಾರಿ ಬಂದಿರುವುದಿದೆ.

ಹೇಳುವುದಕವರಲ್ಲ
ಕೇಳುವುದಕವರಲ್ಲ
ಮಾಡಿಮಡಿವುದಕವರು
ಆರ್ನೂರು ರಾವುತರು
ಮೃತ್ಯುವಿನ ಪಂಜರಕೆ
ನುಗ್ಗಿದರು ಹರಿದು (ರಾವುತರ ದಾಳಿ)

4. 5, 5 + 5, 5 + 5. 5. 5ಗ. ಹೀಗೇ ಇನ್ನೊಮ್ಮೆ (ವಸಂತಕಾಲದೊಲುಮೆ 50, ಹೊಳೆಕೆರೆ 6)

ಹೊಳೆ ಬೆಳಗಿ ಜಾರುವುದು
ಗಿಳಿ ನೆಗೆದು ಹಾರುವುದು
ಬೆಳೆದ ಹೊಲ ಬಿಸಿಲಲ್ಲಿ ಮಲಗಿರುವುದು
ತಿಳಿಯಾದ ಬಾನಿನಲಿ
ಬಿಳಿಮುಗಿಲು ತೇಲುವುದು
ಮಳೆಸೋತ ದಳದಂತೆ ಸದ್ದಡಗಿತು (ಹೊಳೆಕೆರೆ)

5. 5, 5 ಮೂರು ಪಾದಗಳು + 5 5 5 ಗ ಎರಡು ಪಾದ + 5, 5 ಎರಡು ಪಾದ + 5 5 5 ಗ

(ಅಡವಿ ಮರದಡಿಯಲ್ಲಿ 3)

ಆಸೆ ಬಲೆಯನು ತೊಲಗಿ
ಬಿಸಿಲ ಕಾಯುತ ಮಲಗಿ
ಉಣ್ಣುವೂಟವ ಕಂಡು
ತಣ್ಣನೆಯೆ ತಣಿದುಂಡು ನಲಿವನಾರ್ರೈ
ಇತ್ತಬಾ ಇತ್ತಬಾ ಇತ್ತಬಾರೈ
ಎತ್ತ ನೋಡಿಲ್ಲೆಲ್ಲ
ಮತ್ತೆ ಹಗೆಯೊಂದಿಲ್ಲ
ಕೊರೆವ ಚಳಿ ಬಿರುಗಾಳಿಯಲ್ಲದಿಲ್ಲೈ

ಮಾವಮೂಲಿ ಷಟ್ಪದಿಯಲ್ಲಿ ಆರಂಭದಲ್ಲಿ ಎರಡರ ಬದಲು ಮೂರು ಪಾದಗಳು ಬಂದಿವೆ. ಮೂರನೇ ಪಾದ ಪುನರುಕ್ತಗೊಂಡಿದೆ. ಇಲ್ಲೊಂದು 'ಕಳ್ಳಪ್ರಾಸ' ಗಮನೀಯ. ಈ ಮಾತು ಏಕೆಂದರೆ ಗಮನಿಸದಿದ್ದರೆ ಅದು ಕಾಣುವುದಿಲ್ಲ. ಮೊದಲೆರಡು ಪಾದಗಳ ಕೊನೆಯಲ್ಲಿ ತೊಲಗಿ–ಮಲಗಿ ಎಂದು ಪ್ರಾಸವಿದೆ. ಮೂರನೇ ಪಾದದ ಕೊನೆಯ ಕಂಡು ? ಅದರ ಕೆಳಗೇ ಇರುವ 'ದುಂಡು' ಎನ್ನುವುದೇ ಪ್ರಾಸ. 'ಉಣ್ಣುವೂಟವ ಕಂಡು–ತಣ್ಣನೆಯೆ ತಣಿದುಂಡು' ಸಮಾನಭಾಗ. 'ನಲಿವನಾರ್ರೈ' ಅಭಿವೃದ್ಧ ಭಾಗ.

6. 5 5 + 5 ಪ ಹೀಗೆ ಒಟ್ಟು ಎಂಟು ಪಾದಗಳು + "4" ರಂತೆ ಎರಡು ಷಟ್ಪದಿಗಳು. (ಮುಪ್ಪುಯೌವನ 4)

ನರೆಮುಪ್ಪುಯೌವನಕೆ
ಇಲ್ಲದೊಡನಾಟ
ಯೌವನವು ಸುಮ್ಮಾನ
ಮುಪ್ಪು ಮಿಡುಕಾಟ

ಹೀಗೆಯೇ ಇನ್ನೂ ನಾಲ್ಕು ಸಾಲು. ಅನಂತರ '4' ರಲ್ಲಿ ಹೇಳಿದಂತೆ ಕುಸುಮ ಷಟ್ಪದಿಗಳೆರಡು.

7. 5 5 5 ಪ

(ಅ) ದ್ವಿಪದೀ ಮಾಲೆ ಅಥವಾ ರಗಳೆ (ಮನಸ್ತಾಪ 83)

ಜಗವೆಲ್ಲ ಬೆಳಗಿಹುದು ಕಣ್ಗೆ ಪಾಳೆಲ್ಲ
ಸೊಗಸಾದ ಕಟ್ಟಿಹುದು ಚಿತ್ರಪಟವಿಲ್ಲ

ಹೀಗೇ ಎಂಟು ಸಾಲುಗಳು, ಇದಕ್ಕೆ ಮುನ್ನ

ಅರೆಯಾವು । ದಿಲ್ಲಿ
ಜ್ವಲಿಸುವ ವಸಂತವಿದೆ
ತಿಳಿನೀಲಿ ಗಗನವಿದೆ
ಕೊರತೆ ಇ । ನ್ನೆಲ್ಲಿ

ಅನಂತರ :

ಜಡವಾಗಿ ಸತ್ತಿಲ್ಲಿ
ಕಡೆದಿರುವು । ದೆಲ್ಲ
ಜೀವಕಳೆ ತುಂಬುವುದು
ಪ್ರೇಮವು । ಕ್ಕುವುದು
ಪ್ರೇಮವು । ಕ್ಕುವುದು

(ಅ) ನಾಲ್ಕು ಪಾದಗಳು (ಹೇಳದಿರು......92)

ಹೇಳದಿರು ಹೋರಾಡಿ ಫಲವಿಲ್ಲವೆಂದು
ತೋಳದಣಿಸಿದೆ ಬರಿದೆ ಘಾಸಿಯಾಯ್ತೆಂದು
ಗೆಲ್ಲುವುದ ಕಾಣೆ ಹಗೆ ಹಿಮ್ಮೆಟ್ಟನೆಂದು
ಎಲ್ಲ ಇದ್ದಂತಿಹುದು ಅಲ್ಲಾಡದೆಂದು

(ಇ) ಐದು ಪಾದಗಳು (ದೇಶಸೇವಕ 35)

ನಾನಕಟ ಸೂರ್ಯನನು ತರಲು ನೆಗೆದವನು
ನಾಡಿನೊಲುಮೆಯ ಜನದ ಕಯ್ಗೆ ಕೊಡಲದನು
ಮಾನವನು ಮಾಡುವುದನೆಲ್ಲ ಮಾಡಿದೆನು
ನೋಡೆನ್ನ ಪಾಡೀಗ ನಾ ಬೆಳೆದ ಬೆಳಸು
ಒಂದು ವರುಷವು ಕಳೆದು ನಾ ಕೊಯ್ವ ಕೊಯಲು

8. 5 5 5 ಪ ನಾಲ್ಕು ಪಾದ : ಅನಂತರ ಮತ್ತೆ ಹಾಗೇ ನಾಲ್ಕು ಪಾದ + 5 5 5 5 + 5 5 ಪ ಎಂಬಂತೆ ನಾಲ್ಕುಪಾದ. ಕೊನೆಯ ನಾಲ್ಕು ಪಾದಗಳಿಗೆ

ಉದಾ : (ಜೀವ 96)

ಹೇಳದೆಯೆ ಕದ್ದು ನಡೆ ಮೆಲ್ಲನೆಚ್ಚರ ಕೊಡದೆ
ನಿನ್ನ ಸಮಯವ ನೋಡಿ । ಜಾರ್ವೆ
ಹೊರಟೆನಿರುಳಾಯ್ತೆನದೆ ನಲಿವನಾಡೆಲ್ಲಲ್ಲಿ
ಏಳು ಬೆಳಗಾಯ್ತೆನುತೆ । ಬಾರ್ವೆ

9. 5 5 5 ಪ ಎರಡು ಪಾದಗಳು + 5 5 5 5 + 5 5 ಪ

(ನಿನ್ನೊಳೆನಗೊಲವಿಲ್ಲ 56)

ನಿನ್ನೊಳೆನಗೊಲವಿಲ್ಲ ಇಲ್ಲ ಒಲವಿಲ್ಲ
ನೀನತ್ತ ಹೋದೆಯೆನೆ ಕಂದುವೆನದೇನು
ಬಾನ ತಣ್ಬೆಳಕೆಲ್ಲ ಕಣ್ದಣಿಯ ನಿನ್ನನ್ನು
ನೋಡಿ ನಲಿವುವೆ ಎಂದು ಕರುಬುವೆನದೇನು

10. 5 5 5 ಪ ಹೀಗೆ ಆರು ಪಾದಗಳು + 5 5 5 5 + 5 5 ಗ – 5 + 5 5 ಗ, ಕೊನೆಯ ಮೂರು ಪಾದಗಳಿಗೆ ಉದಾ : (ಪ್ರೇಮ ರಹಸ್ಯ 48)

ಬೇರೆ ಇರಲಾರವೆಯೆ ಮೀರದೆಯೆ ಸೇರುವುವು
ನೀನೇಕೆ ಬೇರೆ ಇರುವೆ–ಎಲೆ ಚೆನ್ನೆ
ನೀನೇಕೆ ಬೇರೆ ಇರುವೆ

11. 5 5 5 5 + 5 5 5 ಪ ಹೀಗೆ ನಾಲ್ಕು ಪಾದಗಳು (ಸುಖಜೀವನ 94, ಆಳೌ ಬ್ರಿಟಾನಿಯಾ 28)

ರಾಗಗಳು ತನಗೊಡೆಯರಾಗದವೊಲಾಳುವನು
ಜೀವವನು ಸಾವಿಗಣಿಮಾಡಿ ಬಾಳುವನು
ಎಂತು ಧಣಿಯೊಲವೆಂದು ನೆರೆಯಮೆಚ್ಚೆಂತೆಂದು
ಮಿಡುಮಿಡುಕಿ ಲೋಕವನು ಕಟ್ಟಿಕೊಳದವನು

(ಸುಖಜೀವನ)

'ಆಳೌ ಬ್ರಿಟಾನಿಯಾ' ಕವನದಲ್ಲಿ ಮೊದಲನೇ ಹಾಗೂ ಕೊನೆಯ ಚರಣಗಳ ಕೊನೆಯಲ್ಲಿ, ನಾಲ್ಕು ಪಾದಗಳ ಅನಂತರ 5 5 5 ಪ ಎಂದು ಎರಡು ಪಾದಗಳು ಬಂದಿವೆ – ಪಲ್ಲವಿಯಂತೆ.

ಆಳೌ ಬ್ರಿಟಾನಿಯಾ ಆಳು ತೆರೆಗಳನು
ಎಂದಿಗೂ ಬ್ರಿಟನನಡಿಯಾಳೆನಿಸಿಕೊಳನು.

12. (ಅ) 5 5 ಪ ಎರಡು ಪಾದ + 5 5 5 ಪ + 5 5 ಪ ಬೇಡ ಬಿಡು......51)

ಬೇಡ ಬಿಡು ನಾವಲೆವುದಿನ್ನು
ಇರುಳಲ್ಲಿ ಮರೆತು ಹೊತ್ತನ್ನು
ಆದರೂ ಮೊದಲಂತೆ ಒಲಿದೆ ಇಹೆನಲ್ಲಾ
ತಿಂಗಳೂ ಬೆಳಗುತಿಹುದಲ್ಲಾ

(ಆ) 5 5 ಪ ಎರಡು ಪಾದ + 5 5 ಗ ಎರಡು ಪಾದ + 5 5 ಪ ಎರಡು ಪಾದ + 5 5 + 5 5 5 ಗ (ನೆಮ್ಮುಗೆಯ ನಾಡು 89)

ನಾಸವೆದು ಸರಿಯುತಿಹೆ । ನಮ,
ಬೇಸಗೆಯ ಮಂಜಿನಂ । ತಮ್ಮ
ನಾಸವೆದು ಸರಿವೆನ । ಮ್ಮ
ನೆಮ್ಮುಗೆಯ ನಾಡ ಬಳಿ । ಗೆ
ಅಲ್ಲಿ ಕೊರಗೆಂಬುದಿ । ಲ್ಲಮ್ಮ
ಅಲ್ಲಿ ಛಳಿ ಛಿದ್ರ ವಿ । ಲ್ಲಮ್ಮ
ಬಾಳು ಬ । ಲ್ಸೊಗಸಮ್ಮ
ನೆಮ್ಮುಗೆಯ ನಾಡಿನೊಳ । ಗೆ

13. 5 5 ಗ + 5 5 5 ಗ ಹೀಗೆ ಒಟ್ಟು ಎಂಟು ಪಾದಗಳು. ಇಲ್ಲಿ ನಾಲ್ಕನ್ನು ಕೊಟ್ಟಿದೆ (ಪ್ರೇಮದ ಸಂಕಟ 58)

ಸೊಡಲುರುಳಿ ಮುರಿಯುತ್ತಲೇ
ಹುಡಿಯೊಳಗೆ ಬೀಳುವುದು ನಂದಿ ಬೆಳಕು
ಮೋಡಗಳು ಚೆದರುತ್ತಲೇ
ಬಾಡುವುದು ಮಳೆಬಿಲ್ಲ ಬಣ್ಣ ಬೆಡಗು.

14. 5 5 5 5 + 5 5ಗ ಹೀಗೆ ಒಟ್ಟು ಎಂಟು ಪಾದಗಳು.

ಇಲ್ಲಿ ನಾಲ್ಕು ಪಾದಗಳನ್ನು ಕೊಟ್ಟಿದೆ. (ಒಂದು ಮಾತನು ಲೋಕ ಹೊಲೆಗೆಡಿಸಿಕೊಂಡಿಹುದು 55). ನಾಲ್ಕೇ ಪಾದಗಳು (ಹೆದರುವೆಸು ನಾ ನಿನ್ನ ಬಿನ್ನಾಣಕೆಲೆ ಹೆಣ್ಣೆ 54).

ಅನುರಾಗವೆಂದು ಜನರಾಡಿಕೊಳುವುದ ಕೊಡೆನು
ಕೊಡುವೆನಿದ ನೀ ಕೊಳುವೊಡೆ
ದೇವರೊಪ್ಪುವ ತೆರದಿ ಮೇಲಬಯಸುವ ಹೃದಯ
ಪೂಜೆ ಗೈವಂತ ಪೂಜೆ (ಒಂದು ಮಾತನು ..)

15. 5 5 5 5 + 5 5ಗ ಹೀಗೆ ಒಟ್ಟು ನಾಲ್ಕುಪಾದ + (5 5 5 5 + 5 5 5 ಪ) (ಪ್ರಾರ್ಥನೆ 97)

ಎಷ್ಟು ದಿನ ಸಲಹಿರುವೆ ಮೂರ್ಖನನು ಮುಂದೆಯೂ
ಕೈಹಿಡಿದು ನಡೆಸದಿಹೆಯಾ
ಕಷ್ಟವಡವಿಯ ಕಳೆದು ಬೆಟ್ಟ ಹೊಳೆಗಳ ಹಾದು
ಇರುಳನ್ನು ನೂಕದಿಹೆಯಾ
ಬೆಳಗಾಗ ಹೊಳೆಯದೇ ಹಿಂದೊಮ್ಮೆ ನಾನೊಲಿದು
ಈ ನಡುವೆ ಕಳಕೊಂಡ ದಿವ್ಯಮುಖ ನಗುತ

16. 5 5 5 5 + 5 5 5ಗ ಚತುಷ್ಪದಿ (ಕನಕಾಂಗಿ 44, ನನ್ನ ಪ್ರೇಮದ ಹುಡುಗಿ 41)

ಮೆತ್ತನೆಯ ತೋಳಿನೊಳಗರೆ ಬಳಸಿಕೊಂಡೆನ್ನ
ನೊತ್ತಿದಳು ತನ್ನೆದೆಗೆ ಅಳುಕಿ ಬಳುಕಿ
ತಲೆಯ ಹಿಂದಕೆ ಸರಿದು ಕತ್ತೆತ್ತಿ ನೋಟವನು
ನಿಲಿಸಿದಳು ನಾಟಿದಂತೆನ್ನ ಮುಖದಿ
(ಕನಕಾಂಗಿ 47)

17. 5 5 5 5 + 5 5 5 ಗ ಹೀಗೆ ನಾಲ್ಕುಪಾದ + 5 5 5 ಪ ಎರಡು ಪಾದ (ಕವಿಶಿಷ್ಯ 93)

ನನ್ನಾಶೆಗಳು ಹೋಗಿ ಸತ್ತವರ ಸೇರಿದುವು
ಅವರೊಡನೆ ಕಲಿವೆ ನಾನಿಂದು ನಾಳೆ
ಕಲೆತು ನಾನವರೊಡನೆ ಪಯಣ ನಡೆವೆನು ಮುಂದೆ

ಸವೆಯದೆಯೆ ನೀಡುವಾ ಕಾಲವೆಲ್ಲಾ
ನಡೆಯುತ್ತ ನೆಚ್ಚಿರುವೆನಿಲ್ಲಿ ನಾನೊಂದು
ಹುಡಿಯೊಳಳಿಯದ ಹೆಸರ ಬಿಟ್ಟಿರುವೆನೆಂದು

18. ಮೂರು ಕವನಗಳನ್ನು ಇಲ್ಲಿ ಪ್ರತ್ಯೇಕವಾಗಿ ಗಮನಿಸಬೇಕಾಗಿದೆ.

(ಅ) 5 5 ಪ+5 5 5 ಗ+5 5 5 5+5 5 5 ಗ
(ಹೊಯ್ ಹೊಯ್ ಹೊಯ್ 88).

ಸದ್ಯಕ್ಕೆ ಲಕ್ಷಣವನ್ನು ಹೀಗೆ ಹೇಳಿದೆ. ಆದರೆ ಹೀಗೇ ಇರಬೇಕೆಂದೇನೂ ಇಲ್ಲ. ಈ ಮೇಲಿನ ಕವನದಲ್ಲಿ ನಾಲ್ಕು ಪಾದಗಳ ನಾಲ್ಕು ಚರಣ (ಭಾಗ)ಗಳಿವೆ. ಮೊದಲನೇ ಪಾದಗಳನ್ನು ತೆಗೆದುಕೊಂಡರೆ ಎರಡರಲ್ಲಿ 'ಹೊಯ್ ಹೊಯ್ ಹೊಯ್' ಎಂಬುದೇ ಇದೆ. ಇನ್ನೆರಡರಲ್ಲಿ

'ಗಂಭೀರದಲಿ ನಡೆದು ಹಡಗು'

ಎಂಬಂತೆ 5 5 ಪ ಇದೆ. ಎರಡನೆಯ ಪಾದಗಳು : ಎರಡು ಚರಣಗಳಲ್ಲಿ

'ನಿನ್ನರೆಗಳಡಿಯಲ್ಲಿ ಕಡಲೇ'

ಎನ್ನುವಂತೆ 5 5 ಪ ಇದೆ. ಇನ್ನೆರಡು ಚರಣಗಳಲ್ಲಿ–

'ತಂಗಿಯೊಡನಾಡುತ್ತ ಕೂಗುತಿಹನೇ'

ಎಂಬಂತೆ '5 5 5 ಗ' ಇದೆ. ಮೂರನೇ ಪಾದ ಎರಡು ಚರಣಗಳಲ್ಲಿ

'ನನ್ನೆದೆಯೊಳೇಳುತಿಹ ಬಗೆಗಳನು ನಾಲಗೆಗೆ'

ಎಂಬಂತೆ 5 5 5 5 ಬಂದರೆ ಒಂದು ಚರಣದಲ್ಲಿ 5 5 ಪ ಎಂದೂ, ಇನ್ನೊಂದರಲ್ಲಿ 555 ಗ ಎಂದೂ ಬಂದಿದೆ.

(ಕ) ಏನೊಸಗೆ ಅಂಬಿಗರ ಮಗುಗೆ

(ಖ) ಅಯ್ಯೊ ಆ ಬಯಲಾದ ಕಯ್ಯಸೋಂಕೇ

ಇನ್ನು ನಾಲ್ಕನೆಯ ಪಾದ. ಎರಡು ಚರಣಗಳಲ್ಲಿ 5 5 5 ಗ ಎಂದೂ, ಇನ್ನೆರಡರಲ್ಲಿ 5 5 5 ಗ ಎಂದೂ ಬಂದಿದೆ

(ಗ) ತಂದು ನಾನುಡಿಯಲುಹುದೇ

(ಘ) ತೆರೆಯ ಮೇಲೋಡದಲಿ ಹಾಡುತಿಹನೇ

ಎಂದರೆ ವಾಸ್ತವವಾಗಿ ಯಾವಪಾದ ಹೇಗಾದರೂ ಇರಬಹುದೆಂದಾಯಿತು. ಅವು 5 5 ಗ, 5 5 ಪ, 5 5 5 ಗ, 5555. ಇವುಗಳಲ್ಲಿ ಯಾವುದಾದರೂ ಒಂದಾಗಿದ್ದರೆ ಸಾಕು. 5 5 5 5 ವಿಶೇಷವಾಗಿ ಮೂರನೇಪಾದದಲ್ಲಿ ಅಲ್ಲದೆ ಅನ್ಯತ್ರ ಬೇಡ.

ಹೊಯ್ᐱ । ಹೊಯ್ᐱ । ಹೊಯ್ᐱ ।
ನಿನ್ನರೆಗಳಡಿಯಲ್ಲಿ ಕಡಲೇ
ಅಳಿದುಹೋದಾ ಹಗಲಿನಕ್ಕರಿನ ಸಿರಿಯೊಂದು
ಮಗುಳ್ದಿನ್ನು ಬಾರದೆನಗೆ

ಇಲ್ಲಿ 'ಹೊಯ್' ಐದು ಮಾತ್ರೆಗಳನ್ನು ತೆಗೆದುಕೊಳ್ಳುತ್ತದೆ. ಯ್, ರ್, ಲ್, ವ್, ಅನುನಾಸಿಕಗಳು ಕೊನೆಯಲ್ಲಿ ಬಂದಾಗ ಅವನ್ನು ಎಳೆಯಲೂಬಹುದು. ಮೂರನೇ 'ಹೊಯ್' ಎರಡು ಗಣಗಳಷ್ಟು ವಿಸ್ತರಿಸುತ್ತದೆ. ನಾಲ್ಕನೇ ಗಣದಲ್ಲಿ ಮೌನ ಆಘಾತವಿದೆ.

(ಆ) 5 5 5 5+5 5 ಗ ಒಟ್ಟು ಹತ್ತು ಪಾದಗಳು. ಮೊದಲಪಾದ ಹಾಗೂ ಏಳನೇ ಪಾದ ವಿಶಿಷ್ಟ. (ಇಂಗ್ಲೆಂಡನಾವಿಕರು 26)

ಕೋಟೆಗಳು ಕೊತ್ತಳಗ । ಳು— । ಬೇಡದೆ ಬ್ರಿ
ಟಾನಿಯಳು ಹದುಳವಿಹಳು
ಬೆಟ್ಟದೆರೆಗಳ ತಲೆಯ ಮೆಟ್ಟುವಳು ದಾಳಿಯಲಿ
ಕಡಲು ಮನೆಯಾಗಿರುವಳು
ಗುಡುಗಿ ತನ್ನಡವಿಗಳ ತೇಗುಮರದೊಡಲಿಂದ
ಅಡಗಿಸುವಳಡಿಯ ಹೊನಲ
ಕರೆಯ । ಲ್ಲಿ— ಮೊರೆವ । ಲ್ಲಿ
ಬಿರುಗಾಳಿ ತೀಡುತಿರಲು
ಹಿರಿದಾಗಿ ಕಾಳಗವು ಬೊಬ್ಬಿರಿದು ಹಬ್ಬಿರಲು
ಬಿರುಗಾಳಿ ತೀಡುತಿರಲು

ಮೊದಲನೇ ಪಾದದಲ್ಲಿ ಮೂರನೇ ಗಣದಲ್ಲಿ 'ಳು' ಒಂದು ಗಣದಷ್ಟು. ಪ್ರತಿಚರಣಗಳ ಏಳನೆಯ ಗಣ ಗಮನಾರ್ಹ. 3–5ರಂತೆ ಭಾವಿಸಿ

ಕರೆಯ — ಲ್ಲಿss । ಮೊರೆವ — ಲ್ಲಿss
3 5 3 5

ಮಾಡಿಕೊಳ್ಳಬೇಕು. ಇಲ್ಲಿ 'ಲ್ಲಿ' ಐದು ಮಾತ್ರೆಗಳನ್ನು ತೆಗೆದುಕೊಳ್ಳುತ್ತದೆ. ಕರೆಯಲ್ಲಿ ; ಮೊರೆವಲ್ಲಿ ಎಂದೇ ನುಡಿದು ಮುಂದೆ ಒಂದೊಂದು ಗಣದಷ್ಟು ಕಾಲ ಮೌನವನ್ನೂ ಕೊಡಬಹುದು. ಇದಕ್ಕೆ ಮೂಲದ ಸಮರ್ಥನೆಯೂ ಇದೆ.

(ಇ) 'ಇಂಗ್ಲೆಂಡ್' ಪದ (ಪು 30) ಇನ್ನೊಂದು ರೀತಿಯಿಂದ ವಿಶಿಷ್ಟ. ತಾಳಜ್ಞಾನ ಇಲ್ಲದವರಿಗೆ ಇದರ ಲಯ ಹಿಡಿತಕ್ಕೆ ಸಿಕ್ಕುವುದು ಕಷ್ಟವಾಗಬಹುದು. ನಾಲ್ಕಾರು ಬಾರಿ ಕೇಳಿದರೆ ಹಿಡಿತಕ್ಕೆ ಸಿಗುವುದು ಕಷ್ಟವಾಗದು.

ಏನ ಮಾಡಿದೆ ನಾನು ನಿನಗೆ
ಇಂಗ್ಲೆಂಡ್ ನನ್ನಿಂಗ್ಲೆಂಡ್
ಏನಮಾಡೆನು ಹೇಳು ನಿನಗೆ
ನನ್ನ ಇಂಗ್ಲೆಂಡ್

ಎಂದಿಷ್ಟನ್ನು ಉದಾಹರಿಸಿ 'ಇಲ್ಲಿನ ಎರಡು ನಾಲ್ಕನೆಯ ಚರಣಗಳು ಭಿನ್ನಲಯದಲ್ಲಿ ಸಾಗುವುದು ಕಾಣುತ್ತದೆ. ಇವನ್ನು ಆಯಾ ನುಡಿಯ ಲಯದೊಡನೆ ಹೊಂದಿಸಿ ಹೇಳುವುದು ಎನ್ನಲಾಗಿದೆ.[1] ಭಿನ್ನಲಯಗಳು ಹೇಗೆ ಹೊಂದಿಕೊಳ್ಳುತ್ತವೋ ಹಾಗಿರಲಿ, ಇಲ್ಲಿರುವುದು ಭಿನ್ನಲಯವಲ್ಲ. ಹಾಡಬಹುದಾದ್ದು ಹೀಗೆ :

ಏನಮಾ । ಡಿದೆ ನಾನು । ನಿನಗೆ∧
ಇಂಗ್ಲೆಡ್∧ । — ನ । ನ್ನಿಂಗ್ಲೆಂಡ್∧
ಏನಮಾ । ಡೆನು ಹೇಳು । ನಿನಗೆ∧
ನನ್ನ ಇಂ । ಗ್ಲೆಂಡ್....
(ಅಥವಾ)
ನನ್ನ∧ । — ಇಂಗ್ಲೆಂಡ್ ।—

ದೇವನೊರೆವುದ ಕೇಳಿ
ಕಣ್ಣಮಿನುಗನು ತಾಳಿ
ಘೋರಯುಜ್ವವ ಬೇಳಿ
ಗಾನದಲಿ ತುತ್ತೂರಿಯ ನೀನೂದಲು
ಇಂಗ್ಲೆಡ್∧ ।.... ...
ಇಳೆ ಬಳಿಸಿ ತುತ್ತೂರಿಯ ನೀನೂದಲು

## ಮೂರುನಾಲ್ಕರಯದವು

1. 3434+343 ಗ ಹೀಗೆ ನಾಲ್ಕುಪಾದಗಳು (ಬಿಟ್ಟಹೆಣ್ಣು 60, ಕಳೆದ ಹಿಂದಿನ ದಿನಗಳು 82), ಆರು ಪಾದಗಳು (ಮೇಲುನೋಟಕೆ ಮರೆಯಲಾರಳು 43), ಎಂಟುಪಾದಗಳು (ಗಾನ ಮೆಲುಪಿನ ಕೊರಲುಕುಗ್ಗಲು 75)

ಚೆಲುವು ಚೆಲ್ಲುವ ತೊರೆಯ ಕೆರೆಗಳ
ಎಂತು ಮರೆವಿರೊ ಅರಳುತ
ಎಂತು ಕಲೆವಿರೊ ಹಕ್ಕಿಗಳಿರಾ
ಹಲುಬುತಿಹೆನೇ ನರಳುತ

2. ಮೇಲಿನಂತೆ ನಾಲ್ಕುಪಾದಗಳು+34 34 343 ಗ

ಆರು ನೀನೆಲೆ ಹರುಷ ಮೂರುತಿ
ಹಕ್ಕಿ ಎಂಬರೆ ನಿನ್ನನು
ತೋರಿ ದಿವಿಜರು ಸುಳಿವ ಬಳಿ ಸುಖ
ವುಕ್ಕಿ ಬಹ ನಿನ್ನೆದೆಯನು

---

1. ಕನ್ನಡ ಛಂದಃಸ್ವರೂಪ. ಪು 599

ಹಾರಿನೆಸೆಯುದ ಕಲೆಯು ಕುಶಲದ* ಭೂರಿಗಾನದೊಳೆರೆಯುವೆ. ಈ ಐದನೇ ಪಾದ ಎರಡಾಗಿ ಒಡೆದು ಆರುಪಾದಗಳಂತೆಯೇ ಆಗುತ್ತದೆ. ಹಾರಿ–ಭೂರಿ ಪ್ರಾಸಗಮನಿಸಿ.

3. 3434 ಹೀಗೆ ಮೂರು ಪಾದಗಳು + 343 ಗ,
(ಕಾರಿಹೆಗ್ಗಡೆಯ ಮಗುಳು 66, ಅಳಿನಿ 72)

ತೂರುಗಾಳಿಗೆ ಕಡಲು ಕುದಿಯಿತು
ನೀರ ದೆವ್ವಗಳರಚಿಕೊಂಡವು
ಹೆಪ್ಪು ಮೋಡದ ಹುಬ್ಬುಗಂಟಿಗೆ
ಕಪ್ಪಗಾದುವು ಮುಖಗಳು (ಕಾರಿಹೆಗ್ಗಡೆ...)

4. 3434 ಹೀಗೆ ಮೂರುಪಾದಗಳು + 3 ಗಗ (ನನ್ನ ಮೇರಿ 84)

ಕಾಣೆ ನಿನ್ನಲಿ ಮೊದಲ ಹಮ್ಮು
ದಿನದಿನಕೆ ಬಲ ಕುಗ್ಗಿತಮ್ಮ
ನನ್ನ ಕೊರಗೇ ಕೊರೆದುದಮ್ಮ
ನನ್ನ । ಮೇs । ರಿ^

ಇಲ್ಲಿ 'ಮೇ' ನಾಲ್ಕು ಮಾತ್ರೆ ತೀ. ನಂ. ಶ್ರೀ. ಅವರು ಇದನ್ನು ಗಮನಿಸಿದ್ದಾರೆ. ಮೂರು ನಾಲ್ಕು ಎಂಬುದು 2–5 ಅಥವಾ 5–2 ರಂತೆ ಪರಿವೃತ್ತಿಗೊಳ್ಳಬಹುದು. ಈ ಮೇಲೆ 'ದಿನದಿನಕೆ–ಬಲ' ಅಂಥದೊಂದು. ಹಾಗೆಯೇ : 'ಕನವರಿಕೆವೊಲು' ಕಲಸಿಬಹುದು ; 'ಬಿರಿಯದೇ–ಎದೆ' ನಿನಗೆ ಕಡೆಗೆ. ನಾಲ್ಕು ಮಾತ್ರೆಗಳ ಗಣದ ಸ್ಥಾನದಲ್ಲಿ ಕಡಮೆ ಬಂದರೆ ಎಳೆದು ಸರಿದೂಗಿಸಬೇಕು : ನೋಟ 'ತಕ್ಕ' ನೋಟ 'ವೇನು' ; ಏಳ 'ಹೋಗಿ' ಉಸಿರು 'ಹತ್ತಿ'.

5, 3 4 3 4 ನಾಲ್ಕು ಪಾದಗಳು (ಒಂದು ಮುತ್ತು 57)

ಒಂದು ಮುತ್ತುs ಮತ್ತೆ ಬಾರೆನು
ಒಂದು ಮುತ್ತುs ಮತ್ತೆ ಹೋರೆನು
ಹಿಂದು ಮುಂದಿನ ಬೇಗೆಯೆಲ್ಲಾ
ನಂದೆ ಒಂದೇ ಮುತ್ತು ನಲ್ಲೆs

6, 34, 34, 34, 34 + 34, 34, 34, 3 ಗ ಚತುಷ್ಪದಿ, (ಮುದಿಯ ರಾಮಂಗೌಡ 52)

ಬಿಕ್ಕಿ ಬಿಕ್ಕಿs ನುಡಿಸಿ ನುಡಿಸಿs ದುಃಖವೆಲ್ಲಾ ಹೇಳಿಕೊಂಡೆವು
ಒಂದು ಮುತ್ತs ಸೆಳೆದುಕೊಂಡೆವು ಅಟ್ಟಬಿಟ್ಟ ಆಗಲೆ
ಸಾಯ ಒಲ್ಲೆನೆ ನಾನು ಪಾಪಿs ಅಯ್ಯೊ ಪಾಪಿಗೆ ಸಾವು ಬಹುದೆs
ಹುಟ್ಟದೇ ಇರಬಾರದೇ ಈ ಬೇಗೆ ಬಾಳನು ತಾಳೆನೇ

7. 34, 34, 34, 3 ಗ ಮೂರು ಪಾದ (ಹಳೆಯ ಪಳಕೆಯ ಮುಖಗಳು 87)

ಕೆಲವರಳಿದರು ಕೆಲವರುಳಿದರು ಕೆಲವರೊಗ್ಗದೆ ಮುಳಿದರು
ಕೆಲವರೆನ್ನನು ದೂರಿ ಪಳಿದರು ಹೊರಗೆ ಹಾಕಿದರೆಲ್ಲರೂ
ಎಲ್ಲ ಎಲ್ಲಾ ಮಾಯವಾದುವು ಹಳೆಯ ಪಳಕೆಯ ಮುಖಗಳು

8. 3, 4, 3 ಗ ಎರಡು ಪಾದ + 34.34 + 34 3 ಗ (ರಾಯಲ್‌ಜಾರ್ಜ್ ಮುಳುಗಿಹೋದದ್ದು 24)

ಅಳಿದರೇ ಹಾ ಧೀರರು
ಕಳೆದು ಹೋದರೆ ಧೀರರು
ತಮ್ಮ ನಾಡಿನ ಕರೆಯೊಳೆಲ್ಲರು
ಮುಳುಗಿ ಹೋದರು ತೆರೆಯೊಳು

ಮೊದಲನೇ ಪಾದ 34, 34 ಆಗಬಹುದು: 'ನೇಣುಗಳ ನೆಲಗಾಳಿ ಕುಲುಕಿತು', ಕೊನೆಯಪಾದವೂ: 'ಅಡಗಿದರೆಯನು ಹಾಯಲಿಲ್ಲs'. ಎರಡನೇ ಪಾದವೂ: 'ಬೆರಳಲಿದ್ದುದು ಬರೆವ ಕಡ್ಡಿs.' ಮೂರನೇ ಪಾದದ್ದು ಮಾತ್ರ ಗಟ್ಟಿ.

## ಅಂಶಛಂದಸ್ಸಿನವು

ಇಂಗ್ಲಿಷ್ ಗೀತಗಳಲ್ಲಿ ಅಂಶಛಂದಸ್ಸಿಗೆ ಸಿಗುವ ಉದಾಹರಣೆಗಳು ಎರಡೇ. ಆ ಎರಡೂ ಬಹುಮಟ್ಟಿಗೆ ಸಂಪ್ರದಾಯಬದ್ಧವೆಂದೇ ಹೇಳಬಹುದು. ಇದರಲ್ಲಿ ಹೊಸ ವೇನೂ ಇಲ್ಲ. ಇವುಗಳಿಂದ ಪ್ರಾಯಶಃ ಯಾರೂ ಪ್ರಭಾವಿತರೂ ಆಗಲಿಲ್ಲ.

1. ವಿವಿವಿವಿ + ವಿವಿಬ್ರ ಹೀಗೆ ಒಟ್ಟು ನಾಲ್ಕು ಪಾದಗಳು + (ವಿವಿವಿವಿ + ವಿವಿವಿಬ್ರ) (ಬ್ಲೆನ್ ಹೀಮ್ ಕದನ 32)

ಅಜ್ಜ ತೆಗೆದುಕೊಂಡ ಕೈಗದ ಹುಡುಗನು
ನಿಂದ ಹತ್ತಿರ ಕಿವಿಗೊಟ್ಟು
ನೋಡಿ ಆ ಮುದುಕನು ತಲೆಯನಲ್ಲಾಡಿಸಿ
ಮರುಗುತ ನಿಟ್ಟುಸಿರಿಟ್ಟು
ಪಾಪ ಇದಾರದೂ ತಲೆಯೋಡು ಯಾವನೊ
ಬಿದ್ದವನಾ ದೊಡ್ಡ ಜಯದಲಿ ಎಂದ

2. ವಿವಿವಿವಿ + ವಿವಿವಿಬ್ರ, ಚತುಷ್ಪದಿ (ಸರ್ ಜಾನ್ ಮೂರನ್ನು ಹೂಳಿದ್ದು 19).

ಒಡಲ ಪೇಳಿಗೆಯಲಿ ಒಪ್ಪಮಾಡಲು ಇಲ್ಲ
ಬಟ್ಟೆ ದುಪ್ಪಟೆಯಲಿ ಸುತ್ತಲು ಇಲ್ಲ
ನಿದ್ದೆ ಹೋಗುವ ವೀರನಂದದಿ ಬಿದ್ದಿದ್ದ
ಯುದ್ಧದ ನಿಲುವಂಗಿ ಮುಚ್ಚಿಮೈಯೆಲ್ಲ

ಮೊದಲನೆಯ ಪಾದಾಂತದಲ್ಲಿ ವಿಷ್ಣುವಿಗೆ ಪರ್ಯಾಯವಾಗಿ ಬ್ರಹ್ಮ ಬಂದಿರುವು ದುಂಟು :

ಬೇಗ ಒಂದೆರಡು ಪ್ರಾರ್ಥನೆಯನು ಹೇಳಿ

## ಇತರದಲ್ಲಿ ಒಂದು

ಇತರದಲ್ಲಿ ಉಳಿದುದು 'ವಸಂತ' ಮತ್ತು 'ಕಾಳಗದ ಪದ', ವಸಂತವನ್ನು ಕುರಿತು ತೀ. ನಂ. ಶ್ರೀ. ಅವರು 'ಪ್ರಸ್ತಾವನೆ'ಯಲ್ಲಿ ಅಂಶಗಣಗಳಲಯವೆಂದು ಅನಂತರ[1] ನಾಲ್ಕುಮಾತ್ರೆಯ ಗಣದ್ದು ಎಂದು ಭಾವಿಸಿದ್ದಾರೆ. ಇದನ್ನು ಮತ್ತೆ ನೋಡೋಣ. ತೀ. ನಂ. ಶ್ರೀ. ಅವರು ಪ್ರಸ್ತಾವನೆಯಲ್ಲಿ "ಕಾಳಗದ ಪದದಲ್ಲಿಯೂ ಅಂಶಗಣದ ಛಾಯೆಯಿದೆ" ಎಂದಿದ್ದಾರೆ. ಕಾಳಗದ ಪದದ ಛಂದೋಗತಿಯ ವಿವಿಧ ಭಂಗಿಗಳು, ತಾಳಯತಿಗಳ ಆಂದೋಲನ–ಕುರಿತು ಬೇಂದ್ರೆಯವರು ಕೊಂಡಾಡಿ ದ್ದಾರೆ.

ಕಾಳಗದ ಪದವನ್ನು (ಪು. 16) ಮೂರು ಇಲ್ಲವೆ ಆರು ಮಾತ್ರೆಗಳ ಲಯದಲ್ಲಿ ಹಾಡಬೇಕೆಂದು ತೋರುತ್ತದೆ, ಅದಕ್ಕೆ ತಕ್ಕಂತೆ ಅಳವಡಿಸಿಕೊಳ್ಳಬೇಕು.

ಕಾಳೆ ಹರೆs । ಕೊಂಬುಗಳs
  ಏಳಿ ಮೊಳಗಿ । ಏಳಿ∧
ನಾಡುಗಳs । ಕುಳಗಳನುs
  ಕೂಡಿ ಕೊಳs । ಹೇಳಿ∧
ಬನ್ನಿರಣ್ಣ। ಬನ್ನಿರಣ್ಣ
  ಅದೊs ಕೂಗು । ಕೇಳಿ∧
ಮನ್ನೆಯರs । ಬಂಟರಿರs
  ಒದಗಿ ಏಳಿ । ಏಳಿ∧.

ಹೀಗೆಯೆ

ಕೆ । ಚ್ಚೆದೆಯ । ಮಕ್ಕ। ಳಿರs
  ಮೈ । ಜೋಡ । ತೊಡರೊ∧
ಬಿಚ್ಚುಗ । ತ್ತಿಯ ಝಳವs
  ಕೈ । ಝಾಡಿ । ಸಿಡಿರೊ.

ಇಲ್ಲಿ ಮೊದಲ ಪಾದ 'ಕೆ', ಎರಡನೆಯದರ 'ಮೈ', ನಾಲ್ಕರ 'ಕೈ' ಮೂರು ಮಾತ್ರೆ ಗಳು.

---

1. ಸಮಾಲೋಕನ ; ತೀ. ನಂ. ಶ್ರೀ. ಪ್ರ : ಶಾರದಾಮಂದಿರ, ಮೈಸೂರು, 1958, ಅರಿಕೆ ಪುಟ 6.

ಕಾಡ । ಸೀ । ಳುತ ಗಾಳಿs
ಬರುವಂತೆs । ಬನ್ನಿ ^
ಓಡ । ಕೊ । ಚ್ಚುತ ಕಡಲುs
ಬರುವಂತೆs । ಬನ್ನಿ ^

ಇಲ್ಲಿ ಮೊದಲ ಪಾದದ 'ಸೀ', ಮೂರನೇ ಪಾದದ 'ಕೊಚ್' ಮೂರು ಮಾತ್ರೆಗಳು.

ಹಿರಿ ಕತ್ತಿs । ಇರಿಸುರಗಿs
ಸರಿs । ಮುಂದೆ । ಆಳು
ಅರಿಯೆದೆಯುs । ಬಿರಿಕಾಳೆs
ತರಿs । ಕೊಲ್ಲ । ಹೇಳು.

## ಅವಳ ತೊಡಿಗೆ ಇವಳಿಗಿಟ್ಟು

ಇಲ್ಲಿ ಪ್ರಾತಿನಿಧಿಕವಾಗಿ ಕೆಲವೇ ತುಣುಕುಗಳನ್ನು ಮೂಲದೊಡನೆ ತೋರಿಸಲು ಯತ್ನಿಸಲಾಗಿದೆ.

1.

'Proud 'Maisic ^ is in *th*e 'wood
'Walking 'so 'early
'Sweet 'Robin 'sits on the 'bush
'Singing 'so 'rarely

ಒಂದು ಮೂರನೇ ಪಾದಗಳಲ್ಲಿ ನಾಲ್ಕು ಮುಖ್ಯ ಆಘಾತಗಳು (Primery stress), ಎರಡು ನಾಲ್ಕನೇ ಪಾದಗಳಲ್ಲಿ ಅವು ಮೂರು. ಇಲ್ಲಿನ ಮೊದಲನೇ ಪಾದದಲ್ಲಿ ಮೂರನೇ ಆಘಾತ ಮೌನ ಆಘಾತ (silent stress).

ಚಿಮ್ಮುತ । ನಿರಿಯನು । ಬನದಲಿ । ಬಂದಳು
ಬಿಂಕದ । ಸಿಂಗಾ । ರಿ
ಹೊಮ್ಮಿದ । ಹಸುರಲಿ । ಮೆರೆಯಿತು । ಹಕ್ಕಿ
ಕೊರಲಿನ । ದನಿ ತೋ । ರಿ.

ಇಲ್ಲಿ ಛಂದಸ್ಸು ಚೆನ್ನಾಗಿ ಅನುವದಿತಗೊಂಡಿದೆ. ಮೂಲದಲ್ಲಿ ಎರಡು ನಾಲ್ಕನೇ ಪಾದಾಂತದ ಪ್ರಾಸ ಇಲ್ಲೂ ಬಂದಿದೆ. ಜೊತೆಗೆ ಚಿಮ್ಮುತ-ಹೊಮ್ಮಿದ ಎಂದು ಪ್ರಾಸ ವಿಶೇಷವಾಗಿ ಬಂದಿದೆ. ಬಂದಳು–ಹಕ್ಕಿ ಎಂಬಲ್ಲೂ ಪ್ರಾಸ ಇದ್ದರೆ ಚೆನ್ನ ಎನ್ನುವುದು ದುರಾಸೆಯಾಗಬಹುದು.

2.

My 'hearts 'leaps up ^ when I be'hold
A 'rainbow ^ in the 'sky
'So was it ^ when my 'life be'gan

'So is it 'now ∧ I am a 'man
'So be it ∧ when I shall 'grow 'old
'Or ∧ let me 'die
The 'Child is 'father of the 'Man
And I could 'wish my 'days to 'be
Bound 'each to 'each by 'natural 'piety

ಇಲ್ಲಿ ಗಮನಿಸಬೇಕಾದುದು ಇಷ್ಟು : ಎರಡು, ಏಳು, ಎಂಟು ಈ ಪಾದಗಳಲ್ಲಿ ಗಣಾಘಾತ ಬೀಳುವುದು ಮೂರೇ. ಉಳಿದಲ್ಲಿ (6 ನೇ ಪಾದ ಬಿಟ್ಟು) ಮೌನಾಘಾತವೂ ಸೇರಿ ನಾಲ್ಕು. ಇನ್ನೊಂದು ಅಂಶ ಪ್ರಾಸ. ಒಂದಕ್ಕೊಂದು ಕುಣಿಕೆಗೊಂಡು ಇಡೀ ವೃತ್ತವನ್ನೇ ಬಂಧಿಸಿದೆ. ಒಂದು ತಸ ತಂದಿದೆ. behold ಎಂಬುದು old ಎಂಬಲ್ಲಿಗೆ ಕೈಬಿಟ್ಟಿತು. sky ಎಂಬುದು die ವರೆಗೂ ಬಂತು. ಈ ಮಧ್ಯೆ began–man. ಇದು die ಆದ ಮೇಲೂ ಒಂದು ಓಡಿತ ತೆಗೆದುಕೊಂಡಿತು. ಮುಗಿಯಿತು ಎನ್ನು ವಷ್ಟಕ್ಕೆ ಕೊನೆಯೆರಡುಪಾದ, be-piety. ಇದು ಆಂಗ್ಲ ಛಂದಸ್ಸಿನ ಪ್ರಾಸದ ಅಚ್ಚುಕಟ್ಟು. ಸಾಧಿಸುವ ಚೌಕಟ್ಟು.

ಮುಗಿಲಿನಲಿ । ಮಳೆಬಿಲ್ಲ । ಕಾಣುತಲೆ । ನಾನು
ನೆಗೆದು ಕುಣಿ । ದಾಡುವುದು । ಹೃದಯ ತಾ । ನು
ಅಂತೆ ಇ । ದ್ದುದು ಮೊದಲು । ಚಿಕ್ಕಂದಿ । ನಂದು
ಅಂತೆ ಇಹು । ದೀ ಮೆರೆವ । ಯೌವನದ । ಲಿಂದು
ಅಂತೆ ಇರ । ಲೆನಗಿನ್ನು । ಮುಪ್ಪಿನಲಿ । ಮುಂದೆ
ಅಂತಿರದೆ । ಸಾವು ಬರ । ಲಂದೆ
ಮನುಜನಿಗೆ । ಮಗುತಂದೆ । ನಾನದನು । ಬಗೆದು
ಹೊಂದಿಸಲು । ಬಯಸುವೆನು । ದಿನಗಳನು । ತೆಗೆದು
ಒಂದ ಕೊಂ । ದನು ಪ್ರಕೃತಿ । ಭಕ್ತಿಯಲಿ । ಬಿಗಿದು

(ಮಳೆಬಿಲ್ಲು 7)

ಇಲ್ಲಿ ಎರಡು ಹಾಗೂ ಆರನೇ ಪಾದ ಬಿಟ್ಟರೆ ಉಳಿದುವು ಮಾನವಮಿ ಚೌಪದದ ದಾಟಿ. ಪ್ರಾಸ : ಮೊದಲಿನ ಎರಡು ಪಾದ ಒಂದು ಘಟಕ (ಅದನ್ನು ಪ್ರಾಸ ಎಂದು ಕೊಂಡರೆ), ಆನಂತರದ ನಾಲ್ಕು ಪಾದಗಳು ಒಂದು ಘಟಕ, ಕೊನೆಯ ಮೂರು ಪಾದ ಮತ್ತೊಂದು ಘಟಕ–ಹೀಗೆ ಒಡೆಯುತ್ತವೆ. ಪ್ರಾಸ ಬಂಧೈಕ್ಯಕ್ಕೆ ಕಾರಣ ವಾಗಿಲ್ಲ. ಇದು ಬೇರೆಯೇ ಒಂದು ಮಾದರಿಯನ್ನು ಕೊಟ್ಟಂತಾಗಿದೆ. or-let-me die ಎಂದೂ ಭಾಗಿಸಿ ಮೂರು ಆಘಾತ ಕಲ್ಪಿಸಿದರೆ 'ಅಂತಿರದೆ ಸಾವು ಬರಲಂದೆ' ಎನ್ನುವುದು ಸಮೀಪವಾಗಬಹುದು. ಇಲ್ಲಿ ಛಂದಸ್ಸಿನ ಅನುವಾದ ಸಾಕಷ್ಟು ದೂರ ವಾಗಿದೆ ಎನ್ನಬಹುದೆಂದು ತೋರುತ್ತದೆ.

3.

The 'twentieth 'year is 'well nigh 'past
Since 'first our 'sky was 'over 'cast
Ah 'would that this 'might be the 'last
My 'Mary

ವರುಷ । ಇಪ್ಪ । ತ್ತಾಯಿ । ತೀಗ
ನಮ್ಮ । ಗಗನವ । ಮುಸುಕಿ । ಮೇಘ
ಆಹ । ಇನ್ನಿದೆ । ಕಡೆಯ । ದಾಃಗ
ನನ್ನ । ಮೇಃss । ರಿ (ನನ್ನ ಮೇರಿ 84)

ಕೊನೆಯ ಪಾದದಲ್ಲಿ ಶ್ರೀ ಅವರು ಹೊಸ ಕಲ್ಪನೆಯನ್ನೇ ತೋರಿದ್ದಾರೆ. ಅದು ಬಿಟ್ಟರೆ ಪ್ರಾಸ ಗಣ ಎಲ್ಲ ರೀತಿಯಲ್ಲೂ ಮೂಲಛಂದಸ್ಸು ಕನ್ನಡಕ್ಕೆ ಬಂದಿದೆ ಎನ್ನಬಹುದು. ಪ್ರಾಸದ ಅಗತ್ಯವಿಲ್ಲದಿದ್ದರೆ 'ಮೇಘ'ಕ್ಕೆ ಪ್ರತಿಯಾಗಿ 'ಮೋಡ' ಎಂದೇ ಶ್ರೀಯವರು ಬಳಸುತ್ತಿದ್ದರೇನೊ!

4.

'Take her up 'tenderly
'Lift her with 'care
'Fashioned so 'slenderly
'Young and so 'fair

ಮೆಲ್ಲಗಿವ । ಳನು ಮುಟ್ಟು
ಮರುಗಿ ಹಿಡಿ । ದೆತ್ತು
ಏನು ಕೋ । ಮಲ ಕಾಯ
ಹೊಳಪು ಹೊಸ । ಪ್ರಾಯ (ದುಃಖಸೇತು 61)

ಅನುವಾದದಲ್ಲಿನ ಪ್ರಾಸ ಗಮನಾರ್ಹ. care–fair ಎಂಬಲ್ಲಿನ 'ರ್'ಅನ್ನು ಎಳೆಯಲೂ ಬಹುದು. ಇಲ್ಲದಿದ್ದರೆ ಒಂದು ಗಣ ಮತ್ತೊಂದು ಗುರು ಸಾಕಾಗುತ್ತಿತ್ತು.

5.

'Duncan 'grey cam 'here to 'woo
Ha 'ha, the 'wooing o't ʌ
On 'bhythe yule 'night when 'we were fou
Ha 'ha the 'wooing o't ʌ
'Maggie 'coost her 'head fu 'high
'Looked as'klent and 'unco 'skeigh
'Gart poor 'Duncan 'stand a'beigh
Ha 'ha the 'wooing o't ʌ

ಬೇಟಕಾರ ಬಂದ ಮಾದ
ಹಹ್ಹ ಏನು ಬೇಟವೋ
ಬೇಡಿ ಸತ್ತು ಸುಣ್ಣವಾದ
ಹಹ್ಹ ಏನು ಬೇಟವೊ
ಮಾದಿ ಕತ್ತನೊಲೆದುದೇನು
ಅತ್ತ ಇತ್ತ ಸಿಡಿದುದೇನು
ಮಾದ ಪಾಪ ಮಿಡಿದುದೇನು
ಹಹ್ಹ ಏನು ಬೇಟವೊ (ಮಾದಮಾದಿ 39)

'ಹಹ್ಹ' ಅಥವಾ 'ಏನು' ಎನ್ನುವುದನ್ನು ತೆಗೆದರೆ, ಎಂದರೆ ಹಹ್ಹ ಬೇಟವೊ ; ಏನು ಬೇಟವೋ ಎನ್ನುವಂತಿದ್ದರೆ ಮೂಲಕ್ಕೇ ನೇರ ಸರಿ. ಪ್ರಾಸ ಮೂಲಕ್ಕೆ ನಿಷ್ಠವಾಗಿದೆ

6.

'Ye 'Mariners of 'England ʌ
That 'guard our 'native 'seas
Whose 'flags has 'braved a 'thousand 'years
The 'battle ʌ and the 'breeze
Your 'glorious 'standered 'Launch a'gain
To 'match ano'ther 'foe ʌ
And 'sweep ʌ through 'deep ʌ
While the 'storming 'winds do 'blow
While the 'battle 'rages 'loud and 'long
And the 'stormy 'winds do 'blow

ಇಂಗ್ಲೆಂಡ । ನಾವಿಕರಿ । ರಾ — । ಕಾಯುವಿರಿ
ನೀವೆಮ್ಮ । ಕಡಲುಗಳ । ನು
ನಿಮ್ಮ ಬಾ । ವುಟ ತವೆಯಿ । ತೊಂದು ಸಾ । ವಿರ ವರುಷ
ಗಾಳಿಯನು । ಕಾಳಗವ । ನು
ಇನ್ನೊಮ್ಮೆ । ನಿಮ್ಮ ವಿಜ । ಯಧ್ವಜವ । ತೂಗಬಿಡಿ
ಇನ್ನೊಮ್ಮೆ । ಹಗೆಯ ತಾ । ಗಿ
ಕಡಲ । ಲ್ಲಿ — । ನಡೆಗೊ । ಳ್ಳಿ—
ಬಿರುಗಾಳಿ । ತೀಡುತಿರ । ಲು
ಹಿರಿದಾಗಿ । ಕಾಳಗವು । ಬೊಬ್ಬಿರಿದು । ಹಬ್ಬಿರಲು
ಬಿರುಗಾಳಿ । ತೀಡುತಿರ । ಲು (ಇಂಗ್ಲೆಂಡ ನಾವಿಕರು 26)

ಪ್ರಾಸಕ್ಕಿಂತ ಲಯವನ್ನು ಇಲ್ಲಿ ನೇರವಾಗಿ ಅನುಸರಿಸಲಾಗಿದೆ. ನಾಲ್ಕು ಹಾಗೂ ಮೂರು ಗಣಾಘಾತಗಳು ಸುಸ್ಪಷ್ಟವಾಗಿ ಮೂಡಿವೆ. ಗೇಯವೂ ಆಗಿದೆ.

7.

We 'buried him 'darkly at the 'dead of 'night
The 'sods with our 'boyonets 'turning
By the 'struggling 'moonbeans's 'misty 'light
And the 'lantern 'dimly 'burning.

ಹೂಳಿದೆ । ವವನನು । ಸರಿಹೊತ್ತಿ । ನಿರುಳಲಿ
ಮಣ್ಣ ಬಂ । ದೂಕದ । ಮೊನೆಯಿಂದ । ತಿರುವಿ
ನುಸುಳಿ ಬ । ರುವ ಬೆಳ । ದಿಂಗಳ । ಮಂಜಲ್ಲಿ
ಮಂಕಾದ । ಬೆಳಕಿನ । ಲಾಂದರ । ದಲ್ಲಿ (ಜಾನ್ ಮೂರನ್ನು ಹೂಳಿದ್ದು 19)

ಒಂದು ಮತ್ತು ಮೂರನೇ ಪಾದ ನಾಲ್ಕು ಗಣಗಳು ಬರಬೇಕಾದ್ದು ಸರಿ. ಎರಡು ಹಾಗೂ ನಾಲ್ಕನೇ ಪಾದಗಳಲ್ಲಿ ವಿವಿಧ್ರ ಬಂದಿದ್ದರೆ ಮೂಲಕ್ಕೆ ಇನ್ನೂ ಹತ್ತಿರವಾಗುತ್ತಿತ್ತು.

8.

'Youth is 'full of 'sport
'Age's 'breath is 'short
'Youth is 'nimble, 'Age is 'lame
'Youth is 'hot and 'bold
'Age is 'weak and 'cold
'Youth is 'wild and 'Age is 'tame

ಯೌವನಕೆ । ಚೆಲ್ಲಾಟ
ಮುಪ್ಪಿಗುಸಿ । ರೆಳೆದಾಟ
ಹುಲ್ಲೆಸಗೆ । ಯೌವನವು । ಹೆಳವು ಮು । ಪ್ಪು
ಯೌವನದ । ರಕ್ತಬಿಸಿ
ಮುಪ್ಪೆಲ್ಲ । ಕುಗ್ಗುಕುಸಿ
ಎದೆಗೆಚ್ಚು । ಯೌವನವು । ಪೆಚ್ಚು ಮು । ಪ್ಪು (ಮುಪ್ಪುಯೌವನ 4)

ಕಿರಿಚರಣಗಳಿಗೆ ಇನ್ನೊಂದು ಗುರು ಸೇರಬಹುದಿತ್ತು.

9.

'Spring the 'Sweet 'spring, is the 'years 'pleasant 'King
Then 'blooms 'each 'thing, then 'maids 'dance in a 'ring,
'Cold 'doth not 'sting, the 'prethy 'birds do 'sing
'Cockoo, 'jug jug, 'pu-we, 'to-witta 'woo

ಈ ಮೇಲೆ ಆರಾರು ಗಣಗಳು ಮೂರುಮೂರರಂತೆ ಒಡೆಯುವುದನ್ನು ನೋಡಬಹುದು. ಅನುಪ್ರಾಸವೂ ಗಮನಾರ್ಹ, spring – king ; dhing – ring ಇತ್ಯಾದಿ. 'ವಸಂತ' ಕವನದ ರಚನೆ ಹೀಗಿರಬೇಕೆಂದು ತೋರುತ್ತದೆ.

ವಸಂತ । ಬಂದ — । ಋತುಗಳ
ರಾಜ ತಾ । ಬಂದ
ಚಿಗುರನು । ತಂದ — । ಹೆಣ್ಗಳ
ಕುಣಿಸುತ । ನಿಂದ
ಚಳಿಯನು । ಕೊಂದ — । ಹಕ್ಕಿಗ
ಳುಲಿಗಳೆ । ಚೆಂದ
ಕೂವ್ವೂ । ಜಗ್ ಜಗ್ — । ಪುವ್ವೀ
ಟೂವಿಟ್ಟ । ವೂ.

ಕೊನೆಯ ಎರಡು ಚರಣಗಳಗಲ್ಲಿ ಇದರ ಸುಳಿವು ಸಿಕ್ಕೀತು.

ಬಂದ ವ । ಸಂತ — । ನಮ್ಮಾ
ರಾಜ ವ । ಸಂತ

ಬಿ. ಎಂ. ಶ್ರೀ ಅವರು ಆಂಗ್ಲ ಛಂದಸ್ಸುಗಳನ್ನು ಮಕ್ಕೀಕಾಮಕ್ಕಿಯಾಗಿ ಅನುಕರಿಸಿಲ್ಲ ; ಅದರ ಜೀವಾಳವೇನಿದೆ ಅವನ್ನು ತೋರಿಸಿಕೊಟ್ಟಿದ್ದಾರೆ. ಕನ್ನಡದ ಜಾಯಮಾನದೊಳಗೆ ಆ ವೈವಿಧ್ಯಗಳನ್ನೆಲ್ಲಾ ತೋರಿಸಿಕೊಟ್ಟಿದ್ದಾರೆ. ಅವರ ಅನುವಾದದ ಬಗೆಗೆ ಆಕ್ಷೇಪಗಳಿವೆ. ಆದರೆ ಕೇವಲ ಅನುವಾದವಾಗಿದ್ದರೆ ಅದನ್ನು ಚೆನ್ನಾಗಿಯೇ ಮಾಡುತ್ತಿದ್ದರು. ತಿಳಿಯದೆ ತಪ್ಪುಮಾಡಿದ್ದಲ್ಲ. ಅದೇ ಛಂದಸ್ಸಿನ ಕಟ್ಟನ್ನೂ ಹಾಕಿಕೊಂಡರು. ನಮಗಾಗಿ ಹಾಕಿಕೊಂಡರು. ಆ ಛಂದದಲ್ಲೇ ಆ ಪದ್ಯವನ್ನು ಅನುವದಿಸಿದುದು – ಅದ್ಭುತ ಸಾಧನೆ. ಅದಾದುದು ಕನ್ನಡದ ಪುಣ್ಯ.

# ಶ್ರೀಯವರ ಕನ್ನಡ ಸಾಹಿತ್ಯ ಚರಿತ್ರೆ

---

— ಶ್ರೀ ಪ್ರಭುಶಂಕರ್

ಕನ್ನಡಿಗರಿಗೆ ಅನೇಕ 'ಮೊದಲು' ಗಳನ್ನು ನೀಡಿದ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಕನ್ನಡಿಗರಿಗೆ ಮೊದಲನೆಯ ಸಾಹಿತ್ಯ ಚರಿತ್ರೆಯನ್ನು ನೀಡಿದ್ದಾರೆ. ಆದು ಸ್ವಲ್ಪ ಭಾಗದವರೆಗೆ ಮಾತ್ರ ನಡೆಯಿತು ಎಂಬುದೇ ಬೇಸರದ ಸಂಗತಿ.

ಶ್ರೀಯವರಿಗೆ ಮುಂಚೆ ಸಾಹಿತ್ಯ ಚರಿತ್ರೆಯ ರಚನೆಯ ಪ್ರಯತ್ನ ನಡೆದಿತ್ತು. ಕನ್ನಡಕ್ಕೆ ತುಂಬ ಸೇವೆ ಸಲ್ಲಿಸಿರುವ ಜರ್ಮನ್ ವಿದ್ವಾಂಸರಾದ ರೆ. ಎಫ್. ಕಿಟ್ಟೆಲ್ ರವರು 1875 ರಲ್ಲಿ ನಾಗವರ್ಮನ ಛಂದೋಂಬುಧಿಯನ್ನು ಪ್ರಕಟಿಸಿದರಷ್ಟೆ. ಆ ಗ್ರಂಥದ ಪೀಠಿಕೆಯಾಗಿ ಅದುವರೆಗೆ ತಮಗೆ ತಿಳಿದಿದ್ದ ಕವಿಗಳ ವಿಷಯವಾಗಿ ಒಂದು ಪ್ರಬಂಧವನ್ನು ಬರೆದಿದ್ದಾರೆ. ಶ್ರೀಯವರ ಮಾತಿನಲ್ಲಿ : "ಕನ್ನಡ ಸಾಹಿತ್ಯದ ಚರಿತ್ರೆಯನ್ನು ಸಾಧಿಸುವುದಕ್ಕೆ ಇದೇ ಮೊದಲ ಆಯುಧ ಪೂಜೆ".

ಅನಂತರ ಲೂಯಿಸ್ ರೈಸ್ ಅವರು ಭಟ್ಟಾಕಳಂಕನ ಶಬ್ದಾನುಶಾಸನಕ್ಕೆ ಪೀಠಿಕೆಯಾಗಿ 1890 ರಲ್ಲಿ ಒಂದು ಸಣ್ಣ ಸಾಹಿತ್ಯ ಚರಿತ್ರೆಯನ್ನು ರಚಿಸಿದರು. ಅಲ್ಲದೆ ಮೈಸೂರು ಗೆಜಿಟಿಯರ್ ಪುಸ್ತಕದಲ್ಲಿ ಸಂಕ್ಷೇಪವಾಗಿ ಕನ್ನಡ ಭಾಷೆ, ಸಾಹಿತ್ಯಗಳ ವಿಷಯವಾಗಿ ಒಂದು ಅಧ್ಯಾಯವನ್ನು ಸೇರಿಸಿದರು.

ಮುಂದೆ, ಮತ್ತೆ ಶ್ರೀಯವರ ಮಾತಿನಲ್ಲಿ: "ಕಿಟ್ಟೆಲ್ ಮತ್ತು ರೈಸ್ ಸಾಹೇಬರುಗಳು ಹಾಕಿದ ತಳಪಾಯದ ಮೇಲೆ ಎಸ್. ಜಿ. ನರಸಿಂಹಾಚಾರ್ಯರು ಮತ್ತು ಆರ್. ನರಸಿಂಹಾಚಾರ್ಯರು ಅನೇಕ ಹಸ್ತಪ್ರತಿಗಳ, ಶಾಸನಗಳ ರಾಜವಂಶಾವಳಿಗಳ. ಮತ್ತು ಗುರು ಪರಂಪರೆಗಳ ಶೋಧನೆಗಳಿಂದ ಬಹು ಶ್ರಮಪಟ್ಟು ಬೇಕಾದಷ್ಟು ಹೊಸ ವಿಷಯಗಳನ್ನೂ. ಎಷ್ಟೋ ಮಂದಿ ಹೊಸ ಕವಿಗಳನ್ನೂ, ಕಂಡು ಹಿಡಿದು ಕರ್ಣಾಟಕ ಕವಿ ಚರಿತೆಯ ಮೊದಲನೆಯ ಭಾಗವನ್ನು (1907) ರಚಿಸಿದರು. ಈಚೆಗೆ ತಮ್ಮ ಸಹಕೃರ್ತಗಳು ಗತಿಸಿದ ಮೇಲೆ, ಆರ್. ನರಸಿಂಹಾಚಾರ್ಯರು ತಾವೊಬ್ಬರೇ ಕನ್ನಡದ ಮೇಲಿನ ಪ್ರೇಮದಿಂದ ಹಿಡಿದ ಕಾರ್ಯವನ್ನು ಬಿಡದೆ, ಎರಡನೆಯ ಭಾಗವನ್ನು (1919) ಪೂರೈಸಿ, ಮೂರನೆಯ ಭಾಗವನ್ನೂ ಪ್ರಕಟಿಸಿ ಕವಿ ಚರಿತೆಯನ್ನು ಪೂರ್ಣಗೊಳಿಸುವುದರಲ್ಲಿದ್ದಾರೆ. ಈ ಮಹನೀಯರ ಗ್ರಂಥದ ಬಲವಿಲ್ಲದೆ ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಕಾಲಿಡಲು ಯಾರಿಗೂ ಸಾಧ್ಯವಿಲ್ಲ. ಇವರ ಗ್ರಂಥದ ಆಧಾರದ ಮೇಲೆ ಲ್ಯೂಯಿಸ್ ರೈಸ್ ಸಾಹೇಬರ ತಮ್ಮಂದಿರಾದ ಇ. ಪಿ. ರೈಸ್

ಸಾಹೇಬರು ಇಂಗ್ಲಿಷಿನಲ್ಲಿ ಸೂಕ್ಷ್ಮವಾಗಿ ಆಯಾ ಮತ ವಿಷಯುಗಳನ್ನೂ, ಕಾಲಗುಣವನ್ನೂ ತಿಳಿಸಿ ಮುಖ್ಯ ಕವಿಗಳನ್ನು ನಿರ್ದೇಶಿಸಿ ಒಂದು ಸಣ್ಣ ಪುಸ್ತಕವನ್ನು ಬರೆದಿರುತ್ತಾರೆ. (1915, 1921) ಇನ್ನೂ ಕೆಲವರು ಪಂಡಿತರು ಪರಿಷತ್ಪತ್ರಿಕೆ, ಪ್ರಬುದ್ಧ ಕರ್ಣಾಟಕ ಮುಂತಾದ ಪತ್ರಿಕೆಗಳಲ್ಲಿ ಕವಿಗಳ ಕಾವ್ಯ ಶೈಲಿ, ಯೋಗ್ಯತೆ ಮೊದಲಾದ ವಿಷಯುಗಳನ್ನು ಕುರಿತು ವಿಮರ್ಶೆ ಮಾಡುತ್ತಾರೆ."

ಕೀಟ್ಟೆಲ್ ಮತ್ತು ರೈಸ್ ಸಹೋದರರ ಸಂಕ್ಷಿಪ್ತ ಸಾಹಿತ್ಯ ಚರಿತ್ರೆಗಳು ಇಂಗ್ಲಿಷಿನಲ್ಲಿವೆ. ರಾ. ನರಸಿಂಹಾಚಾರ್ಯರ ಕೃತಿ—ಬೃಹತ್ಪ್ರಮಾಣದ್ದಾದರೂ—ಅದು ಕವಿಚರಿತ್ರೆಯೇ ಹೊರತು ಸಾಹಿತ್ಯ ಚರಿತ್ರೆಯಲ್ಲ. ಹೀಗಾಗಿ ಕನ್ನಡ—ಸಾಹಿತ್ಯ ಚರಿತ್ರೆಯನ್ನು ರಚಿಸಲು ಮೊದಲ ಪ್ರಯತ್ನ ಶ್ರೀಯವರದ್ದೇ.

ಶ್ರೀಯವರು ತಮ್ಮ ಉದ್ದೇಶವನ್ನು ಸ್ಪಷ್ಟವಾದ ಮಾತುಗಳಲ್ಲಿ ಹೇಳಿದ್ದಾರೆ :

"ಈ ಭಾಷಾಪ್ರೇಮಿಗಳೆಲ್ಲರ ಸಹಾಯವನ್ನು ಕೃತಜ್ಞತೆಯಿಂದ ಸ್ಮರಿಸಿ, ಈ ಸಣ್ಣ ಪುಸ್ತಕಭಾಗವನ್ನು ಬರೆಯಲಾಗಿದೆ. ಇದರಲ್ಲಿ ದೊಡ್ಡ ಗ್ರಂಥದಲ್ಲಿ ಹೇಳಬಹುದಾದ ಕವಿಗಳನ್ನೆಲ್ಲಾ ಹೇಳಲಾಗುವುದಿಲ್ಲ. ಕಾವ್ಯ, ಸಾಹಿತ್ಯ, ಎಂಬ ಶಬ್ದಗಳ ಶ್ಲಾಘ್ಯವಾದ ಅರ್ಥದ ಮೇಲೆ ದೃಷ್ಟಿಯಿಟ್ಟು, ವಿದ್ಯಾರ್ಥಿಗಳ ಪ್ರಥಮ ಪರಿಚಯಕ್ಕಾಗಿ, ಪ್ರಸಿದ್ಧರಾಗಿಯೂ, ಬೇರೆ ಬೇರೆ ಮತಗಳಿಗೆ ಪ್ರತಿನಿಧಿಗಳಾಗಿಯೂ ಯಾವುದಾದರೂ ಒಂದು ಕಾರಣದಿಂದ ಗಣ್ಯರಾಗಿಯೂ ಇರುವ ಕವಿಗಳನ್ನು ಮಾತ್ರ ಆಯ್ದುಕೊಂಡು, ಒಟ್ಟಿನ ಮೇಲೆ ಕನ್ನಡ ಸಾಹಿತ್ಯದ ಬೆಳವಣಿಗೆ, ವಿಭಾಗಗಳು, ಸ್ವರೂಪ, ಯೋಗ್ಯತೆ ಇವುಗಳನ್ನು ಸ್ಪಷ್ಟಪಡಿಸಬೇಕೆಂದು ಪ್ರಯತ್ನಪಟ್ಟಿರುತ್ತದೆ. ಕಾವ್ಯವಿಮರ್ಶೆಯ ಭಾಗದಲ್ಲಿ ವ್ಯವಸ್ಥೆಯಾಗಿ ಎಲ್ಲರೂ ಒಪ್ಪಬಹುದಾದ ಅಭಿಪ್ರಾಯಗಳು ಪ್ರಚಾರದಲ್ಲಿಲ್ಲವಾದ್ದರಿಂದಲೂ, ಹೊಸದಾಗಿ ಸಿಕ್ಕಿರುವ ನಿಕ್ಷೇಪವನ್ನು ಕನ್ನಡಿಗರು ಇನ್ನೂ ಆಶ್ಚರ್ಯಪಟ್ಟು ಹೊಗಳಿಕೊಳ್ಳುವ ಸಂಭ್ರಮದಲ್ಲಿಯೇ ಇರುವುದರಿಂದಲೂ, ಪೂರ್ವದ ಸಂಪ್ರದಾಯವಾದ ಸಂಸ್ಕೃತ ಕಾವ್ಯಲಕ್ಷಣರುಚಿಗೂ ಈ ಕಾಲದ ಇಂಗ್ಲಿಷ್ ಕಾವ್ಯಾಭ್ಯಾಸದಿಂದ ಉಂಟಾಗಿರುವ ಹೊಸರುಚಿಗೂ ಬಹಳ ತಾರತಮ್ಯವಿರುವುದರಿಂದಲೂ ಆ ಭಾಗಕ್ಕೆ ಇಲ್ಲಿ ಹೆಚ್ಚಾಗಿ ಪ್ರವೇಶಮಾಡುವುದು ಸೂಕ್ತವಾಗಿ ಕಾಣಿಸಲಿಲ್ಲ."

ಸಾಹಿತ್ಯ ಎಂದರೇನು ? ಶ್ರೀಯವರ ಅಭಿಪ್ರಾಯದಲ್ಲಿ 'ಸಾಹಿತ್ಯ' ಎಂದು ಕರೆಯಿಸಿಕೊಳ್ಳಬಹುದಾದ ಬರವಣಿಗೆಯ ಲಕ್ಷಣ ಇದು :

"ಒಂದು ಭಾಷೆಯಲ್ಲಿ ಬರೆದ ಬರವಣಿಗೆಯೆಲ್ಲಾ ಸಾಹಿತ್ಯವೆಂಬ ಹೆಸರಿಗೆ ಅರ್ಹವೇ ? ಎಂದು ವಿಚಾರಮಾಡಿದರೆ, ಕೇವಲ ಜ್ಞಾನ ಪ್ರಸಾರಣೆಗಾಗಿ, ಪಾಂಡಿತ್ಯ ಪ್ರದರ್ಶನಕ್ಕಾಗಿ ಬರೆದ ಗ್ರಂಥಗಳಿಗಿಂತಲೂ, ವಿಷಯುವೇನೆ ಆಗಿರಲಿ, ಸರಸ್ವತೀ ಪ್ರಸಾದವನ್ನು ಪಡೆದು ರಸೋತ್ಪಾದನಶಕ್ತಿ ಕಲ್ಪನಾಶಕ್ತಿಗಳಿಂದ ಕೂಡಿ, ತನ್ನದೇ ಒಂದು ಪ್ರತಿಭೆಯೂ ರೀತಿಯೂ ವ್ಯಕ್ತಿತ್ವವೂ ತನ್ನ ಕಾವ್ಯದಲ್ಲಿ ಉಕ್ಕುವಂತೆ ಮಾಡಿ, ಓದುವವರ

ಹೃದಯವನ್ನು ಹೊಕ್ಕು, ಅಲ್ಲಿ ಸೌಂದರ್ಯದ, ಆನಂದದ: ಅನುಭವಗಳನ್ನುಂಟು ಮಾಡಬಲ್ಲ ಕವಿಗಳ ಗ್ರಂಥಗಳೇ ಸಾಹಿತ್ಯವೆನ್ನಿಸಿಕೊಳ್ಳುವುದಕ್ಕೆ ಯೋಗ್ಯವಾದುವು ಗಳೆಂದು ಹೇಳಬೇಕಾಗುತ್ತದೆ. ಇಂಥಾ ಕವಿಗಳು ಮಹಾಕವಿಗಳೇ ಆಗಿರಬೇಕೆಂಬ ನಿಯಮವಿಲ್ಲ; ಇಂಥ ಕಾವ್ಯಗಳು ಉತ್ಕೃಷ್ಟ ಕಾವ್ಯಗಳೇ ಆಗಿರಬೇಕೆಂಬ ನಿರ್ಬಂಧವಿಲ್ಲ. ಕವಿ ನಿಜವಾಗಿಯೂ ಕವಿಯಾಗಿದ್ದರೆ ಸರಿ: ಕಾವ್ಯ ನಿಜವಾಗಿಯೂ ಕಾವ್ಯಜಾತಿಗೆ ಸೇರಿದ್ದರೆ ಸಾಕು. ಆದರೆ ಶುಷ್ಕಪಾಂಡಿತ್ಯವೂ ಭಾಷಾಡಂಬರವೂ, ಸಾಧಾರಣ ಭಾವಗಳೂ, ಬರಿಯ ತಿಳಿವಳಿಕೆಯ ಸಂಗತಿಗಳೂ, ಎಷ್ಟೇ ದೊಡ್ಡದಾದ ಗ್ರಂಥವನ್ನೂ ಸಾಹಿತ್ಯವೆನ್ನಿಸಲಾರವು."

ಶಾಸ್ತ್ರ ವಿಷಯಗಳನ್ನು ಕುರಿತು ಸ್ವಲ್ಪಮಟ್ಟಿಗೆ ಹೇಳುವುದಾಗಿ ಶ್ರೀಯವರು ಹೇಳಿದ್ದಾರೆ.

ಜೈನ, ವೀರಶೈವ ಮತ್ತು ವೈಷ್ಣವ ಧರ್ಮಗಳ ಪ್ರಾಧಾನ್ಯದಿಂದ ರಚಿತವಾದ ಸಾಹಿತ್ಯದ ಘಟ್ಟಗಳನ್ನು ಗುರುತಿಸಿ ನಾಲ್ಕನೆಯದಾದ ಪಾಶ್ಚಾತ್ಯರ ಸಾಹಿತ್ಯದ ಪ್ರಭಾವದಿಂದ ಹುಟ್ಟಿದ ಆಧುನಿಕ ಘಟ್ಟವನ್ನೂ ಅದಕ್ಕೆ ಸೇರಿಸಿ ಶ್ರೀಯವರು ತಮ್ಮ ಸಾಹಿತ್ಯ ವಿಭಜನೆಯ ಕ್ರಮವನ್ನು ಮುಕ್ತಾಯಮಾಡಿರುವ ರೀತಿ ಇದು:

"ಈ ನಾಲ್ಕು ಘಟ್ಟಗಳಲ್ಲಿ ಹರಿದುಬಂದಿರುವ ನಮ್ಮ ಕನ್ನಡ ಸಾಹಿತ್ಯವನ್ನು, ನಮ್ಮ ಕನ್ನಡ ನಾಡಿನ ಏರುತಗ್ಗಿನ ಘಟ್ಟಗಳಲ್ಲಿ ನುಗ್ಗಿ ಬರುವ ಕಾವೇರೀ ನದಿಗೆ ಹೋಲಿಸಬಹುದು. ಅದರಂತೆಯೇ, ನಮ್ಮ ಸಾಹಿತ್ಯದ ಮೂಲವೂ ಕಾಡಿನಲ್ಲಿ ಅಡಗಿಹೋಗಿದೆ. ಆ ಬಳಿಕ ಉಪನದಿಗಳು ಒಂದೊಂದಾಗಿ ಸೇರುವಂತೆ, ಜೈನ ಸಾಹಿತ್ಯ ಪ್ರವಾಹವೂ, ವೀರಶೈವ ಸಾಹಿತ್ಯ ಪ್ರವಾಹವೂ, ಬ್ರಾಹ್ಮಣ ಸಾಹಿತ್ಯ ಪ್ರವಾಹವೂ. ಒಂದಾದಮೇಲೊಂದು, ಒಂದರ ಕೂಡ ಮತ್ತೊಂದು ಬಂದು ಮಿಳಿತವಾಗಿ ಮೂರು ಬಣ್ಣದ ನೀರುಳ್ಳ ದೊಡ್ಡ ಹೊಳೆಯಾಗಿದೆ. ಕಡೆಗೆ ಈಗ ಇಂಗ್ಲಿಷ್ ಸಾಹಿತ್ಯ ವೃಷ್ಟಿ ಯಿಂದ ಹುಚ್ಚುಹೊಳೆಯಾಗಿ ಮೊರೆಯುತ್ತ, ಬಂಡೆಗಳ ನಡುವೆ ನುರಾರು ಕವಲಾಗಿ ಒಡೆಯುತ್ತ, ಜನ್ಮಭೂಮಿಯ ಘಟ್ಟಗಳನ್ನು ತೊರೆದು ದಿವ್ಯ ವೇಗದೊಡನೆ ಕೆಳಕ್ಕೆ ದುಮುಕಿ, ಸ್ವತಂತ್ರವಾಗಿ, ವಿಸ್ತಾರವಾಗಿ, ಬಯಲುನಾಡಿನಲ್ಲಿ ಪಯಿರ ಸಮೃದ್ಧಿ ಯನ್ನು ಪಡೆದು ವಿಹಾರಮಾಡಲು ತವಕಿಸುತ್ತಿದೆ."

ಅವರದು ಕವಿ ಹೃದಯ. ಪಾಂಡಿತ್ಯದ ಪ್ರಭಾವ ಎಷ್ಟೇ ಇರಲಿ, ಶುದ್ಧ ಶಾಸ್ತ್ರ ಸೃಷ್ಟಿ ಅವರಿಂದ ಸಾಧ್ಯವೇ ಇರಲಿಲ್ಲ. ಮೇಲಿನ ಹೇಳಿಕೆಯಲ್ಲದೆ ಮುಂದಿನ ಅವರ ವಿಮರ್ಶಾ ವಿಧಾನವೂ ಈ ಹೇಳಿಕೆಯನ್ನೇ ಸಮರ್ಥಿಸುತ್ತದೆ.

ಪಂಪನನ್ನು ಕುರಿತು ಬರೆಯ ಹೊರಟವರೇ ಶಾಸ್ತ್ರದ ನಿಷ್ಕೃಷ್ಟ ಭಾಷೆಯನ್ನು ಕೈಬಿಟ್ಟು ಕಾವ್ಯದ ಉತ್ಸಾಹದ ಶೈಲಿಯನ್ನು ಅವಲಂಬಿಸುತ್ತಾರೆ:

"ಕನ್ನಡ ಕವಿಗಳಿಗೆಲ್ಲಾ ಆದಿಕವಿ, ಸಮ್ರಾಜ", "ಪಸರಿಪ ಕನ್ನಡಕ್ಕೊಡೆಯ ನೊರ್ವನೆ ಪಂಪ", ಈತನನ್ನು ಹೆತ್ತು ಕನ್ನಡ ಮಾತೆ ಮಹಾಕವಿಮಾತೆಯಾದಳು. ಈತನ ಕಾವ್ಯಗಳು ಹಿಂದಿನ ಕಾವ್ಯಗಳನ್ನೆಲ್ಲಾ "ಇಕ್ಕಿ ಮೆಟ್ಟಿದುವು"—ಮುಂದಿನ ಕಾವ್ಯಗಳಿಗೆಲ್ಲಾ ಬಟ್ಟೆದೋರಿದುವು. (ಪುಟ 43)

"ಒಂಬತ್ತು ತಿಂಗಳಲ್ಲಿ ಕನ್ನಡತಾಯಿ ಪಂಪಾಪತಿಯ ಪ್ರಸಾದದಿಂದ ಎಲ್ಲರ ಹೃದಯದಿಂದಲೂ ಹೊಮ್ಮುವ ಬಿರುದಿನ ಕವಿರತ್ನವನ್ನು ಕವಿಚಕ್ರವರ್ತಿಯನ್ನು ಹಡೆದಳು". ಪಂಪನ ಕೆಲವು ಪದ್ಯಗಳನ್ನು ಉದ್ಧರಿಸಿ ಅವನ ವಕ್ತಿತ್ವವನ್ನು ಚಿತ್ರಿಸುತ್ತಾರೆ :

> ವ್ಯಾಸ ಮುನೀಂದ್ರ ರುಂದ್ರ ವಚನಾಮೃತವಾರ್ಧಿಯನೀಸುವೆಂ ; ಕವಿ
> ವ್ಯಾಸನೆನೆಂ ಗರ್ವಮೆನಗಿಲ್ಲ, ಗುಣಾರ್ಣವನೊಳ್ಪು ಮನ್ಮನೋ
> ವ್ಯಾಸಮನೆಯ್ದೆ ಪೇಳ್ವೆನದಲ್ಲದೆ, ಗರ್ವಮೆ ದೋಷಮ್. ಅಳ್ತಿಗಂ
> ದೋಷಮೆ ? ಕಾಣೆನೆ, ಎನ್ನರಿವ ಮಾಳ್ಕೆಯೆ ಪೇಳ್ವೆನಿದಾವ ದೋಷಮೋ.
> ಕವಿತೆಯೊಳಾಸೆಗೆಯ್ದು ಫಲಮಾವುದೊ ? ಪೂಜೆ ನೆಗಳ್ತೆ, ಲಾಭಮೆಂ
> ಬಿವೆ ಫಲಮ್ ; ಇಂದ್ರಪೂಜೆ, ಭುವನಸ್ತುತಮಪ್ಪ ನೆಗಳ್ತೆ ಮುಕ್ತಿ ಸಂ
> ಭವಿಸುವ ಲಾಭಮೆಂಬಿವೆ ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ
> ರವೆ ? ಪೆರರೀವುದೇಂ, ಪೆರರ ಮಾಡುವುದೇಂ, ಪೆರರಿಂದಮಪ್ಪುದೇಂ ?

ಅದನ್ನು ಹೇಳಿ :

"ಇಷ್ಟು ಪದಗಳಲ್ಲಿಯೇ ಪಂಪನ ಗಂಭೀರ ಮೂರ್ತಿ ನಮ್ಮ ಕಣ್ಣೆದುರಿಗೆ ಎದ್ದು ನಿಲ್ಲುತ್ತದೆಯಲ್ಲವೆ ? ಕರ್ಣಾಟಕದ ಸ್ವರ್ಣಯುಗಕ್ಕೆ ತಕ್ಕ ಆತ್ಮಜ್ಯೋತಿ. ನಡೆ ನುಡಿ, ಆಕಾರ ಕೆಚ್ಚು.

ಇನ್ನು ವಿಕ್ರಮಾರ್ಜುನ ವಿಮರ್ಶೆ ಎಂಬ ತಲೆಬರಹವನ್ನು ಬರೆದು ಮುಗಿಸುವ ಮೊದಲೇ ಶ್ರೀಯವರಲ್ಲಿನ ವಿಮರ್ಶಕನಿಗಿಂತ ಮುಂದಾಗಿ ಕವಿ ಮೈಕೊಡವಿ ಎದ್ದು ನಿಲ್ಲುತ್ತಾನೆ, ಹಾಡ ತೊಡಗಿ ಶ್ರುತಿಗಾಗಿ ತಂಬೂರಿಯನ್ನು ಮಿಡಿಯುತ್ತಾನೆ :

"ಆದಿಪುರಾಣದಲ್ಲಿ ಮಾಣಿಕ, ಜಿನೇಂದ್ರ ಬಿಂಬವನ್ನು ಕಡೆದು, ದಿವ್ಯಚೈತ್ಯವನ್ನು ಕಟ್ಟಿ ಪಂಪನ ಕೈ ಸೋಲಲಿಲ್ಲ ; ಒಡನೆಯೇ ಮಹಾಭಾರತದ ಗಾಂಡೀವವನ್ನು ಬಾಗಿಸಿ, ಕನ್ನಡ ಕಲಿಗಳ ಕ್ಷಾತ್ರ ತೇಜಸ್ಸನ್ನೂ, ಕನ್ನಡ ರಾಯರ ಸದ್ಗುಣಾವಳಿಗಳನ್ನೂ, ಕನ್ನಡ ನಾಡಿನ ಅಂದಚೆಂದಗಳನ್ನೂ ಅದರಲ್ಲಿ ಹೂಡಿ, ತಿಳಿಯಾದ, ಎಲ್ಲರೂ ತಿಳಿಯ ಬಹುದಾದ, ತಿರುಳುಗನ್ನಡದಲ್ಲಿ ಭಾರತಭೂಮಿಯ ಅತ್ಯುತ್ತಮವಾದ ಇತಿಹಾಸ ವನ್ನು ಕನ್ನಡಿಗರಿಗೆ ಕಾಣಿಕೆಯಾಗಿ ಒಪ್ಪಿಸಿದನು. ಜಿನಪಾದಪದ್ಮವನ್ನು ಹೃದಯದ ಲ್ಲಿಟ್ಟು, ಸಂಸಾರ ಸಮುದ್ರದ ಹುಚ್ಚು ತೆರೆಗಳನ್ನು ಅಡಗಿಸಿ, ಮುಕ್ತಿಸೋಪಾನವನ್ನು ಏಕ ಮನಸ್ಕನಾಗಿ ಹತ್ತಿದನು—ಅಲ್ಲಿ ; ಇಲ್ಲಿ, ಧರ್ಮಸಾಮ್ರಾಜ್ಯದಿಂದ ಒಂದು ಮೆಟ್ಟಲಿಳಿದು, ಸಂಸಾರವನ್ನು ಗಂಭೀರಧ್ವನಿಯಿಂದ ಲೋಕಕ್ಕೆ ಸಾರಿದನು. ತನ್ನ

ರಾಜನ ಹೆಸರನ್ನು ಚಿರಸ್ಥಾಯಿಯಾಗುವಂತೆ ಮಾಡಿ ಆತನ ಮನ್ನಣೆಯನ್ನು ಪಡೆದನು —ಉದ್ದೇಶದಿಂದಲ್ಲ; ಉಜ್ವಲ ಕರ್ನಾಟಕ ಭಕ್ತಿಯ ಅನುಷಂಗಿಕಫಲವಾಗಿ. ಆತನ ಕೆಚ್ಚನ್ನು ಆಗಲೇ ಬಲ್ಲೆವಲ್ಲವೆ ?—.

"ಪೆರರೀವುದೇನೆ ? ಪೆರರ ಮಾಡುವುದೇನೆ ? ಪೆರರಿಂದಮಪ್ಪುದೇನೆ ?"

ಪಂಪನ ವಿಷಯದಲ್ಲಿ ಅವರಿಗಿರುವ, ಸಕಾರಣವಾದ, ಅತ್ಯುತ್ಸಾಹ ತಮ್ಮ ನೆಚ್ಚಿನ ಕವಿ ಎನ್ನುವಾಗಲೂ ಮಾತುಗಳನ್ನು ಪಕ್ಷಪಾತದಿಂದ, ಎಚ್ಚರಿಕೆಯಿಂದ ಬಳಸುತ್ತಾರೆ. (ಪುಟ 88)

"ಅರಿಕೇಸರಿಯ ದಾಕ್ಷಿಣ್ಯದಲ್ಲಿ ಭಾರತದ ಕವಿ ಜಾರಿದನು : (ಕಣ್ಣು ಬಿಟ್ಟು ಕೊಂಡೇ ಜಾರಿರುವನು)." ಜಾರಿದವನು ಪಂಪನಲ್ಲ, ಭಾರತದ ಪಂಪ ಮಾತ್ರ.

ಕರ್ಣನ ಪಾತ್ರವನ್ನು ಮೆಚ್ಚಿ ಹಾಡಿ ಹೊಗಳುತ್ತಾ ಈ ಪದ್ಯಗಳನ್ನು ಎತ್ತಿ ಹೇಳುತ್ತಾರೆ :

ಭಯಮುಂ ಲೋಭಮುಮೆಂಬ ತಮ್ಮೆರಡುಂ ಪಾಪಕ್ಕೆ ಪಕ್ಕಾಗೆ ಪಾ
ಳಿಯನೊಕ್ಕಾಳ್ದನ ಗೆಯ್ದ ಸತ್ಕೃತಮುಮಂ ಪಿಂತಿಕ್ಕಿ ಜೋಳಕ್ಕೆ ತ
ಪ್ಪಿಯುಮಿನ್ನೆ ಬಾಳ್ವುದ ಪೂಣ್ಬು ನಿಲ್ಲದಿಕೆಯಿಂ ಬಾಳ್ವಂತು ವಿಖ್ಯಾತ ಕೀ
ರ್ತಿಯಪ್ಪೋಲೀಯೊಡಲಪ್ಪೆ ಪೇಳಿಮೆನಗೇಂ ಕಲ್ಪಾಂತರ ಸ್ಥಾಯಿಯೇ ?

ಮೀಂಗುಲಿಗನೆನಾಗಿಯುಮಣ
ಮಾಂ ಗುಣಮನೆ ಬಿಸುಟೆನಿಲ್ಲ ನಿಮಗಂ ಮಗನಾ
ದಂಗೆನಗೆ ಬಿಸುಡಲಕ್ಕುಮೆ
ನೀಂ ಗಳ ಪಂಬಲನೆ ಬಿಸುಡಿಮಿನ್ನೆನ್ನೆಡೆಯೊಳ್

ಅಂದೆಂ ನೆಟ್ಟನೆ ಬೆಟ್ಟನಿಂತು ನುಡಿವೈ ನೀಂ ಕಂದ ಪೋಗಿಂದೆ ಕೆ
ಟ್ಟಳಿವತ್ತಾಗದೆ ಸೋಮವಂಶಮೆನಗಿನೆ ಬಾಳ್ವಾಸೆಯಲ್ಲಿತ್ತೊ ಬಿ
ಟ್ಟಳಿದೆಂ ಪುತ್ರಿನ ಮಕ್ಕಳಾಸೆಯುಮನಾನೆಂದಳ್ಗಿ, ಶೋಕಾಗ್ನಿ ಪೊಂ
ಪುಳಿವೋಗುತ್ತಿರೆ ಕರ್ಣನೆಂದನನಿತೇನೆ ಪೇಳಪ್ಪೆ ಚಿಂತಾಂತರಂ.

ಪಿಡಿಯೆಂ ಪುರಿಗಣೆಯಂ ನರ
ನೆಡಗೊಂಡೊಡಮುಳಿದ ನಿನ್ನ ಮಕ್ಕಳನಿನ್ನೇ
ರ್ದೊಡಮುಳಿಯೆಂ ಪರ್ಜನಮನೆ
ಪಿಡಿದೆನ್ನನೆ ರಣದೊಳಳಿವೆನಿರದಡಿಯೆತ್ತಿಂ.

ಅನಂತರ ವಿಮರ್ಶೆ :

ಇದಲ್ಲವೆ ಮಹಾಕವಿಯ ಬರವಣಿಗೆ. ತಿಳಿಯಾದ ಕನ್ನಡ ಶೈಲಿ, ಗಂಭೀರಭಾವ ಪ್ರವಾಹ, ಒಂದು ಮಾತು ಹೆಚ್ಚಿಲ್ಲದ ವಾಕ್ಸಂಯಮ, ಸ್ವಾಭಾವಿಕತೆಯನ್ನು ಸ್ಪಷ್ಟ ವಾಗಿ ಕಂಡ ಕಲ್ಪನಾದೃಶ್ಯ ; ಮೈತ್ರಿಯ, ಸ್ವಾಮಿಭಕ್ತಿಯ, ಧರ್ಮನಿಷ್ಠೆಯ ಸ್ವಾರ್ಥ

ತ್ಯಾಗದ ಪರಾಕಾಷ್ಠೆ—ಈ ಪಂಪನ ಕರ್ಣನ ಮುಂದೆ ವಿಕ್ರಮಾರ್ಜುನನೇನು ? ಕಡೆಗೆ ಕೃಷ್ಣನೂ ಏನು ? "ಕರ್ಣಂ ತನಗೆಂತುಮೊಡಂಬಡದುದುಂ, ನಿರ್ಣಯಮಾಗಿರಿದು ಪೋದ ನಾರಾಯಣಂ" ಸ್ವಲ್ಪ ನಾಚಿಕೆಪಟ್ಟುಕೊಂಡು ಹೋಗಿರಬೇಕಲ್ಲವೆ ?

ಸುಮಾರು ನೂರಎಂಬತ್ತೈದು ಪುಟಗಳ ಸಾಹಿತ್ಯ ಚರಿತ್ರೆಯಲ್ಲಿ ಪಂಪನಿಗೇ 60 ಪುಟಗಳು ಮೀಸಲು. ಆದರೂ ತೃಪ್ತಿಯಿಲ್ಲ. ಹೇಳುತ್ತಾರೆ : "ಕೆಲವು ರತ್ನ ಗಳನ್ನು ಮಾತ್ರ ಪಂಪನ ಅಪಾರರತ್ನಾಕರದಿಂದ ತೆಗೆದಿಟ್ಟು ತೃಪ್ತನಾಗುತ್ತೇನೆ. —ಹೆಚ್ಚು ಹೊರಟರೆ ಈ ಸಾಹಿತ್ಯ ಚರಿತ್ರೆಯೆಲ್ಲಾ ಪಂಪನೇ ಆದಾನು. — ರನ್ನ ಕಾದಿದ್ದಾನೆ." (ಪುಟ 97) ಉಳಿದ ಕವಿಗಳಿಗೆ ಅನ್ಯಾಯವಾಗಬಹುದು ಎಂಬ ಅಳುಕು ಅವರಿಗಿಲ್ಲ. ಪಂಪನ ಅನಂತರ ಅವರನ್ನು ಕೈಬೀಸಿ ಕರೆಯುತ್ತಿರುವವನು ರನ್ನನೇ.

ಪೊನ್ನನ ವಿಷಯದಲ್ಲಿ ಶ್ರೀಯವರಿಗೆ ಎಳ್ಳಷ್ಟೂ ಉತ್ಸಾಹವಿಲ್ಲ. ಅವರು ಸತ್ಕಾವ್ಯ ಪಕ್ಷಪಾತಿಗಳೇ ಹೊರತು ಸಾಹಿತ್ಯದ ಹೆಸರಿನಲ್ಲಿ ಸೃಷ್ಟಿಯಾಗಿರುವ ಎಲ್ಲ ಕಗ್ಗಕ್ಕೂ ಅವರ ಮನ್ನಣೆಯಿಲ್ಲ.

ರನ್ನನನ್ನು ಮುಟ್ಟುವುದಕ್ಕೆ ಓಡುವ ಭರದಲ್ಲಿ ರಮ್ಯ ಸುಂದರ ಕಾವ್ಯವಾದ ಕಾದಂಬರಿಗೆ ನ್ಯಾಯವಾಗಿ ಕೊಡಬೇಕಾದಷ್ಟು ಸ್ಥಳಾವಕಾಶವನ್ನು ಶ್ರೀಯವರು ಕೊಡಲಿಲ್ಲ. ಬಾಣ—ನಾಗವರ್ಮರ ಕೃತಿಭಾಗಗಳನ್ನು ಹೋಲಿಸಿ ಹೀಗೆ ಮುಕ್ತಾಯ ಹಾಡಿದ್ದಾರೆ :

"ಬಾಣಭಟ್ಟನೂ, ಆತನ ಮಗ ಭೂಷಣಭಟ್ಟನೂ ಇಜ್ಜೋಡಾಗಿ ಬರೆದ ಮೂಲವನ್ನು ಒಕ್ಕೈಯಾಗಿ ಒಂದೇ ವ್ಯಕ್ತಿತ್ವದಲ್ಲಿ ನಿರ್ಮಿಸಿದ್ದಾನೆ. ಸಂಸ್ಕೃತಸಾಹಿತ್ಯ, ಉಪನಿಷತ್ತು, ವ್ಯಾಸ ವಾಲ್ಮೀಕಿಗಳು, ಭಾಸ ಕಾಳಿದಾಸರ ರಸಪ್ರಧಾನತೆಯನ್ನೂ ಸರಳತೆಯನ್ನೂ ಹಿಂದಿಟ್ಟು, ಚಮತ್ಕಾರ ಪ್ರೌಢಿಮೆ ಶಬ್ದಾರ್ಥಾಲಂಕಾರಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟ ಹೊಸರುಚಿಯ ಪ್ರತಿಬಿಂಬವಿದರಲ್ಲಿ ತಕ್ಕಷ್ಟು ಇದ್ದರೂ, ಕನ್ನಡಿಸುವಾಗ ಬಿಡುವುದು ಬಿಟ್ಟು, ಇಟ್ಟದ್ದು ಎದ್ದು ನಿಂತು, ಎರಡು ಪ್ರೇಮ ಕಥೆ ಗಳ ಪಾತ್ರ ರಸಪೋಷಣೆಗಳು ಮುಂದಾಗಿ, ಕನ್ನಡದ ಸೌಲಭ್ಯದಲ್ಲಿ ಕಾದಂಬರಿ ನಾಗವರ್ಮನ ನುಡಿಬೆಡಗಿನಲ್ಲಿ ನಿರ್ದೋಷವೂ ಸೇವ್ಯವೂ ಆಗಿದೆ."

ರನ್ನನನ್ನು ಸಮೀಪಿಸುತ್ತಲೇ ಅವರ ಉತ್ಸಾಹ ಗರಿಗೆದರುತ್ತದೆ. ಮೊದಲು ಅಜಿತ ಪುರಾಣದ ಪರಿಚಯ ಮಾಡಿಸಿದ್ದಾರೆ. ಆ ಕೃತಿಯ ವೈಶಿಷ್ಟ್ಯವನ್ನೆಲ್ಲ ಕೆಲವೇ ಮಾತುಗಳಲ್ಲಿ ಸುಂದರವಾಗಿ ಸಂಗ್ರಹಿಸುತ್ತಾರೆ.

"ಭವಾವಳಿಯ ತೊಡಕಿಲ್ಲದ ಎರಡನೆಯ ತೀರ್ಥಂಕರನನ್ನು ಆಯ್ದುಕೊಂಡು ವೈರಾಗ್ಯದ ಪರಮಾವಧಿಯ ವರ್ಣನೆಯಿಂದಲೂ, ಭಕ್ತಿಯ ಪರಾಕಾಷ್ಠೆಯಿಂದಲೂ ಲಘುವಾದ ಕಾವ್ಯವೊಂದನ್ನು (12 ಆಶ್ವಾಸ, ಪುಟ 780 ಪದ್ಯಗಳು) ನಿರ್ಮಿಸಿದ್ದಾನೆ. ಸಗರ ಚಕ್ರವರ್ತಿಯ ಕಥೆಯನ್ನು ಜೋಡಿಸಿದ್ದಾನೆ. ಮಂತಪ್ರಕ್ರಿಯೆಗಳಿಂದಲೂ

ಪುರಾಣಪ್ರತಿಪಾದನಕ್ರಮದಿಂದಲೂ, ಕವಿಗೆ ಪ್ರತಿಭಾಪ್ರದರ್ಶನಕ್ಕೆ ಅವಕಾಶ ಹೆಚ್ಚು ಸಿಕ್ಕಿಲ್ಲ. ಆದರೂ ವೈರಾಗ್ಯವನ್ನು ಬೋಧಿಸುವ ಭಾಗದಲ್ಲಿ (11.50-112) ಕೆಲವು ಪದ್ಯಗಳು ಕನ್ನಡ ಸಾಹಿತ್ಯದಲ್ಲಿ ಎಣೆಯಿಲ್ಲದುವು ಎಂದು ಹೇಳಬಹುದು. ಅತ್ತಿಮಬ್ಬೆಯನ್ನು ಸ್ತುತಿಸುವ ಭಾಗವೂ ಗೌರವ ವಿಶ್ವಾಸಗಳಿಂದ ಕೂಡಿ ಹೃದಯಂಗಮವಾಗಿವೆ."

ಜೊತೆಗೆ ಅಜಿತಪುರಾಣದ ಸಾರವತ್ತಾದ ಪದ್ಯಗಳನ್ನು ಎತ್ತಿತೋರಿಸಿದ್ದಾರೆ :

ಎನಿತೆನಿತು ಕಳೆದ ಭವಮುಂ
ನೆನೆದಪೆ, ಎನಿತೆನಿತು ಭವದ ಬಂಧುಗಳಂ ನೀನೆ
ನೆನೆದಪೆ, ಎನಿತೆನಿತೊಡಲಂ
ನೆನೆದಪೆ, ಎಲೆ ಜೀವ, ನೀನೆ ಪೇಳೆ ಪವಣೊಳವೇ ?

ಎನಿತಂ ಕುಕ್ಕುಳಗುದಿದಪೆ,
ಎನಿತಂ ಕಕ್ಕಳಗಳಲ್ದಪೆ, ಜೀವನೆ ನೀ
ನೆನಿತಂ ಮಲ್ಮಂಮರುಗುವೆ,
ಎನಿತಂ ಸಂಸಾರದೊಳಗೆ ತಿರ್ರನೆ ತಿರಿವೈ

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ ಬಗೆವೆಯಪ್ಪೊಡೆನ್ನುಕ್ತಿಗೊಡಂ
ಬಡು ಜೀವ ನಿನ್ನ ಕಾಲಂ
ಪಿಡಿವೆಂ ಧರ್ಮಮನೆ ಮಗುಳೆ ಬಳ್ವಿಡಿವಿಡಿಯಾ.

"ಸಾಹಸಭೀಮ ವಿಜಯ" ಅಥವಾ "ಗದಾಯುದ್ಧ" ಶ್ರೀಯವರಿಗೆ ಅತ್ಯಂತ ಪ್ರಿಯವಾದ ಕೃತಿ. ಅದನ್ನು ನಾಟಕವಾಗಿ ಪರಿವರ್ತಿಸುವಷ್ಟು ಸ್ಫೂರ್ತಿ ಅವರಿಗೆ ದೊರಕಿತ್ತಷ್ಟೆ. ಈ ಕೃತಿಯ ಬಗ್ಗೆ ಅವರಿಗಿರುವ ಉತ್ಸಾಹ ಇದೇ : 'ಕನ್ನಡ ಸಾಹಿತ್ಯದ ಅತ್ಯುತ್ಕೃಷ್ಟವೆಂದು ಹೇಳಬಹುದಾದ' (ಪುಟ 138) ಕಾವ್ಯ ಎಂದು ಅವರಿಂದ ಹೇಳಿಸಿದೆ. ಅತ್ಯುತ್ಸಾಹ, ಎಂತಹ ಮಹಾ ವಿದ್ವಾಂಸರನ್ನು ವಿಮರ್ಶೆಯ ಕ್ಷೇತ್ರದಲ್ಲಿ ದಾರಿತಪ್ಪಿಸಬಹುದು ಎಂಬುದಕ್ಕೆ ಶ್ರೀ ಅವರ ಈ ಮುಂದಿನ ಮಾತುಗಳು ಸಾಕ್ಷಿಯಾಗಿವೆ, ಉಳಿದ ಸಾಹಿತ್ಯ ವಿಮರ್ಶಕರಿಗೆ ಎಚ್ಚರಿಕೆಯ ಸಂಕೇತವೂ ಆಗಿವೆ ; ಇನ್ನು ಗದಾಯುದ್ಧ ಕೃತಿಯ ಪರಿಚಯ ಪ್ರಾರಂಭವಾದಾಗ ಅವರಲ್ಲಿ ವಿಮರ್ಶಕ ಮುದುರಿ ಕುಳಿತು ಅವರಲ್ಲಿಯ ವೀಕ್ಷಕ ವಿವರಣಕಾರನ ಬಾಯಿ ಜೋರಾಗುತ್ತದೆ.

ಉದಾಹರಣೆ ನೋಡಿ :

"ರನ್ನನ ರಕ್ತ ಇನ್ನೂ ಬಿಸಿಹತ್ತಿಲ್ಲ."

"ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀ ಮುಖಾಂಭೋಜದೊಳ್"

(ಇಲ್ಲ. ಇನ್ನೂ ಬಂದಿಲ್ಲ).

ಉದ್ದಕ್ಕೂ ಹೀಗೆ — It is a regular running commentary of an enthusiast of a play, a novice, Gut not that of a critical spectator.

ಇನ್ನು ತಜ್ಞನಾದ ವೀಕ್ಷಕ ವಿವರಣಕಾರನ ಪಾತ್ರವೂ ಮಸುಳಿಹೋಗಿ ಉತ್ಸಾಹಿಯಾದ ದಸರಾ ವಿವರಣಕಾರನಾಗಿಬಿಡುತ್ತಾರೆ, ಶ್ರೀಯುವರು. ಅವರ ಮಾತುಗಳಲ್ಲೇ :

"ಈ ಪಶುವಂ ಬೇಳ್ದಿಂ ಕೋಪಾಗ್ನಿಯಿಂ" (46) ; "ಸುಹುತಂ ಕೌರವ್ಯಕ್ರವ್ಯ ಹವ್ಯದಿಂದೆನ್ನ ಕೋಪಹವ್ಯವಹಂ". "ಪಗೆ ಮುಡಿದುದು ಮುಡಿ" (45–48) ಮುಡಿದ ದ್ರೌಪದಿಯ ಶೃಂಗಾರ ವರ್ಣನೆ — ಇದು ಇಲ್ಲಿ ಬೇಕೆ? ಭೀಮನ ಬಯ್ಗಳೂ, ಇವಳ "ಸ್ತನಕುಂಭಂ ಪೂರ್ಣಕುಂಭಕ್ಕೆಣೆಯೆನೆ" .... ಮುಂತಾದ ಸೌಭಾಗ್ಯವೂ ಸರಸವೋ, ವಿರಸವೋ — ಈ ಸಂದರ್ಭದಲ್ಲಿ? ಕಥೆಯು ನೂಲು ನೂಲುತ್ತಾ ಹೋಗಿ ಅಶ್ವತ್ಥಾಮನ ಸೇಡುತೀರಿಕೆಯನ್ನೂ: ಲಕ್ಷ್ಮಿಯು ಪಾಂಡವರ ಕೂಡಿಕೆಯನ್ನೂ, ಭೀಮನ ಪಟ್ಟಾಭಿಷೇಕವನ್ನೂ, ಮುಗಿಸಿ, "ಸಾಹಸ ಭೀಮ ವಿಜಯ" ತೇರು ನಿಂತಂತೆ ನಿಲ್ಲುತ್ತದೆ. ಹಣ್ಣುಕಾಯಿ ಮಾಡಿಕೊಂಡು ಮಂಗಳ ಮಯವಾಗಿ ಮನೆಗೆ ಹೋಗಬಹುದು. ಅದೇನು ಕಾರಣವೋ, ಈ ನಿಲುಗಡೆಯಲ್ಲಿ ಗ್ರಂಥಭ್ರಂಶವಾಗಿ ಪಂಪನ ವಾಕ್ಯೋ ರನ್ನನ ವಾಕ್ಯೋ ಗುರುತುಹಿಡಿಯದಂತಾಗುತ್ತದೆ. ರನ್ನ ನಿಲ್ಲಿಸಿದ್ದೆಲ್ಲಿ ತಿಳಿಯುವುದಿಲ್ಲ.

ಹೋಗಲಿ—ಮುನ್ನುಡಿ, ಹಿನ್ನುಡಿಗಳೂ, ನಡುವಣ ಆಶ್ವಾಸಾಂತ, ಆರಂಭ ಪದ್ಯಗಳೂ, ಆಶ್ವಾಸಾಂತ ಗದ್ಯಗಳೂ ಚಾಳುಕ್ಯಚಕ್ರವರ್ತಿ ಸಾಹಸಭೀಮನ ವಿಜಯವನ್ನೂ, ಕಠೋರಗರ್ಜನೆಯನ್ನೂ ಪಲ್ಲವಿಯಂತೆ ಘಂಟಾಘೋಷವಾಗಿ ಹೇಳುತ್ತವೆ. ಧರ್ಮಯುದ್ಧ, ಧರ್ಮಜಯವನ್ನು ಸಾರುತ್ತವೆ. ಈ ಕೋಲಾಹಲದಲ್ಲಿ ಪಾಪಿ ದುರ್ಯೋಧನನ (ದುರೆ–ಏದಲ್ಲವೆ ಜನರ ಮನಸ್ಸಿನಲ್ಲಿ ಇವನ ಹೆಸರು ನೆಟ್ಟಿರುವುದು ?) ಹೃದಯಭೇದಿಯಾದ ಸಂಕಟವನ್ನು ಕೇಳುವವರು ಯಾರು ? ಕೆಟ್ಟ; ಕಾಲಲ್ಲಿ ತುಳಿದು ನಮ್ಮ ಧರ್ಮಪಕ್ಷಪಾತವನ್ನು ಬೆನ್ನುತಟ್ಟುವ.

ಆದರೆ ರನ್ನ, ರನ್ನನ ಸಹೃದಯ ? — ಈ ಪಟ್ಟಾಭಿಷೇಕದ ಕೋಲಾಹಲದಲ್ಲಿ ಒಂದು ಸಣ್ಣ ದನಿ ಆ ಪಾಪಿ ಕೌರವನನ್ನು ನೆನೆಯಿಸದೆ ? ಆ ಸಣ್ಣ ದನಿ ದೊಡ್ಡದಾಗಿ ಈ ಗರ್ಜನೆಯನ್ನು ನುಂಗದೆ ? ಮಹಾಕವಿಗಳ ಮಾರ್ಗವನ್ನು ಲಾಕ್ಷಣಿಕರ "ಮಾರ್ಗ"ದಿಂದ ಅಳೆಯಬಹುದೆ ? ಕಳೆಯಬಹುದೆ ? ರನ್ನನ ಕೈವಾಡ, ಚೆಲವು ಕೆಲಸ ಎಲ್ಲಿ— ಭೀಮನಲ್ಲೇ ? ದುರ್ಯೋಧನನಲ್ಲೇ ? ಪಂಪನ, ಜೈನಧರ್ಮದ ಶಲಾಕಾ ಪುರುಷರ ಕರ್ಮದಲ್ಲಿ ತೊಳಲಿ ಮೋಕ್ಷಗಾಮಿಗಳಾಗುವರ, ಮಾರ್ಗ ಎತ್ತ ಸಾಗುತ್ತದೆ ; ಮೇಲ್ಪಂಕ್ತಿ ಹೇಗಿದೆ ? ಬಲ್ಲವರೇ ಬಲ್ಲರು. : "ರಸೋ ವೈ ಸಃ," "ಏಕೋ ರಸಃ ಕರುಣ ಏವ."

ಪಂಪನು ಈ ಗದಾಯುದ್ಧದ ನಿಜವಾದ ನಾಯಕನನ್ನು, "ಮಹಾನುಭಾವ"ನನ್ನು ನೋಡಿದ್ದರೆ—"ಶಿಷ್ಯಾದಿಚ್ಛೇತ ಪರಾಜಯಃ" ಎಂದು ಹೇಳಿ ಆನಂದಪಡುತ್ತಿದ್ದನು. ರನ್ನನ ಕವಿತಾಹೃದಯವನ್ನು ರನ್ನನಿಂದಲೇ ಹೊರಪಡಿಸುವ: ವಾಗ್ದೇವಿಯ ಭಂಡಾರದ ಮುದ್ರೆಯನ್ನೊಡೆದವನಲ್ಲವೇ ಅವನು?"

ಮುಂದೆ ಶ್ರೀಧರಾಚಾರ್ಯನನ್ನೂ—ಶಾಂತಿನಾಥನನ್ನೂ ಸುಮಾರು ಇಪ್ಪತ್ತು ಪಂಕ್ತಿಗಳಲ್ಲಿ ಮುಗಿಸಿದ್ದಾರೆ. ಶಾಂತಿನಾಥನನ್ನು ಕುರಿತು ಅವರು ಹೇಳುವುದಿಷ್ಟೇ:

"ಶಾಂತಿನಾಥನು ಸುಕುಮಾರ ಚರಿತ್ರವನ್ನು ಬರೆದಿದ್ದಾನೆ (1048). ಬನವಸೆಯಲ್ಲಿ ಅಧಿಕಾರಿಯಾಗಿದ್ದನು." (ಪುಟ 151)

ನಾಗಚಂದ್ರನ ರಾಮಚಂದ್ರ ಚರಿತ ಪುರಾಣ ಅಥವಾ ಪಂಪರಾಮಾಯಣ ಮುಂದಿನ ತಂಗುದಾಣ ಶ್ರೀಯವರಿಗೆ. ಅದೂ ಅವರ ಮೆಚ್ಚುಗೆಯನ್ನು ಪಡೆದ ಕಾವ್ಯ. ಹದಿನಾಲ್ಕನೆಯ ಆಶ್ವಾಸದ ಹದಿಮೂರು ಪದ್ಯಗಳನ್ನು ಮೆಚ್ಚಿ ಉದ್ಧರಿಸಿದ್ದಾರೆ. ಅವುಗಳಲ್ಲಿ ಕೊನೆಯ ಎರಡು ಇವು:

ಜಸದಳಿವಂ ಪರಾಭವದ ಪತ್ತುಗೆಯುಂ ದೊರೆವೆತ್ತ ತಮ್ಮ ಮಾ
ನಸಿಕೆಯ ಕೇಡುಮುನ್ನತಿಯ ಬನ್ನಮನನ್ಯಭವಾನುಬದ್ಧಮ
ಪ್ಪ ಸುಗತಿಯುಂ ಸುಹೃಜ್ಜನದ ಬೇವಸಮುಂ ಜನತಾಪವಾದಮುಂ
ವ್ಯಸನಿಗಳಾರುಮೆತ್ತಲುಮವರೆ ವಿಷಯಾಸವಮತ್ತ ಚೇತಸರೆ.

ಇರದುಯ್ದ್ದೀಗಳೆ ಕೊಟ್ಟೊಡೆನ್ನ ಕಡುಪುಂ ಕಟ್ಟಾಯಮುಂ ಬೀರಮುಂ
ಬಿರುದುಂ ಬೀಸರಮಕ್ಕುಮೋಸರಿಸಿದಂತಾಗಿರ್ಕುಂ, ಅಂತಾಗದುಂ
ತಿರೆ ದೋರ್ಗರ್ವಮನಿರ್ವಲಂ ಪೊಗಳ್ವಿನಂ ಸೌಮಿತ್ರಿಯುಂ ರಾಮನಂ
ವಿರಥರೆ ಮಾಡಿ ರಣಾಗ್ರದೊಳ್ ಪಿಡಿದುತಂದಾನೆ ಕೊಟ್ಟಪೆಂ ಸೀತೆಯುಂ.

ಇವನ್ನು ವಿಮರ್ಶಿಸುತ್ತಾ ಹೇಳಿರುವ ಮಾತು ಇದು:

"ಇಂಥ ಬರವಣಿಗೆ ಕನ್ನಡ ಸಾಹಿತ್ಯದಲ್ಲಿ ಅಪೂರ್ವ; ಪದ, ಅರ್ಥ, ಭಾವ ರಸ ಮನುಷ್ಯ ಹೃದಯಜ್ಞಾನ, ಔದಾರ್ಯ ಸೀತೆಯ ರಾವಣನ ಉದಾತ್ತ ಚಿತ್ರ—ಎಲ್ಲಕ್ಕೂ ಮೇಲೆ ಧರ್ಮದೃಷ್ಟಿ; ಒಂದು ನುಡಿ ಬಿಡದ ಹಾಗೆ, ಒಂದು ನುಡಿ ಸೇರಿಸದ ಹಾಗೆ ಕನ್ನಡದ ಸಂಸ್ಕೃತದ ಶಬ್ದವಿನ್ಯಾಸ, ಸರಳ, ಗಂಭೀರ, ನಾಟಕೀಯಶೈಲಿ, ವೃತ್ತ ಕಂದ ವಚನಗಳ ಸಮುಕಟ್ಟು. ಎಲ್ಲಾ ಹದಿಮೂರೇ ಪದ್ಯ. ನಮ್ಮ ಕವಿಗಳು ಸಾಮಾನ್ಯವಾಗಿ—ಉತ್ತಮ ಕವಿಗಳೂ ಕೂಡ—"ಕಯ್ಯಿಂದ ಬಿತ್ತು, ಚೀಲವೆಲ್ಲಾ ಬಿತ್ತಬೇಡ" ಎಂಬ ಗ್ರೀಕ್ ಬುದ್ಧಿವಾದವನ್ನು ಮರೆಯುತ್ತಾರೆ. ಒಳಕಟ್ಟು, ಕಟ್ಟಡ, ಭಾವ ಚೆನ್ನಾಗಿಯೇ ಇರುತ್ತದೆ-ಆದರೆ ಕಾಡಿನೊಳಗಣ ಗುಪ್ತಗಾಮಿನಿಯಂತೆ, ತೆರೆದು, ಸೋಸಿ, ಸಂಗ್ರಹಿಸಬೇಕಾಗುತ್ತದೆ. ಇಂತಹ ಕಾವ್ಯ ಸ್ಥಾನಗಳಲ್ಲಿ

ನಮ್ಮವರು ಯಾರಿಗೂ ಕಡಿಮೆಯಲ್ಲ. ಇಂತಹ ಕಾವ್ಯ ಘಟ್ಟಗಳೇ ನಮಗೆ ಹೆರರ ಗೌರವವನ್ನು ತರತಕ್ಕುವು: ಉತ್ತಮ ಕವಿಗಳಲ್ಲಿ ಕೂಡ ಇರುವ ಚರ್ವಿತಚರ್ವಣ ಗಳಲ್ಲ. ಶಬ್ದಜಾಲವಲ್ಲ, ಅತಿಯಾದ ಉಕ್ತಿ ಚಮತ್ಕಾರಗಳಲ್ಲ, ಸಂಪ್ರದಾಯದ ಸಂಕೋಲೆಗಳಲ್ಲ: — ಅಗ್ಗದ ನೀತಿಯಲ್ಲ, ಇಲ್ಲಿ ಅವರು ಕಾಲ ಧರ್ಮವನ್ನನುಸರಿ ಸುತ್ತಾರೆ: ಕಾವ್ಯಸನಾತನಧರ್ಮವನ್ನಲ್ಲ."

ಇಲ್ಲಿಗೆ ಅವರ ಕೃತಿ ನಿಂತುಹೋಗಿದೆ.

ಈಗ ಕನ್ನಡ ಸಾಹಿತ್ಯ ಚರಿತ್ರೆಗಳ ಚರಿತ್ರೆಯಲ್ಲಿ ಶ್ರೀಯವರ ಅಪೂರ್ಣ ಸಾಹಿತ್ಯ ಚರಿತ್ರೆಯ ಸ್ಥಾನವೇನು ಎಂಬುದನ್ನು ನೋಡಬೇಕು. ಇದನ್ನು ಕುರಿತು ಈಗಾಗಲೇ ವ್ಯಕ್ತವಾಗಿರುವ ಎರಡು ತೀರ ಭಿನ್ನವಾದ ಅಭಿಪ್ರಾಯಗಳನ್ನು ಮೊದಲು ಎತ್ತಿ ಹೇಳುತ್ತೇನೆ: ಮೊದಲನೆಯದು ಶ್ರೀ ಕುವೆಂಪು ಅವರದ್ದು:

"ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಗಿದ್ದ ವಿದ್ವತ್ತು, ಪರಿಶ್ರಮ, ಸಹೃದಯತೆ, ರಸಜ್ಞತೆ, ತೋಲನ ಸಾಮರ್ಥ್ಯ, ಸೂಕ್ಷ್ಮದೃಷ್ಟಿ, ಉಕ್ತಿಗಾಂಭೀರ್ಯ, ಒಮ್ಮೊಮ್ಮೆ ದಾಕ್ಷಿಣ್ಯಪರವಾದರೂ ಒಟ್ಟಿನಲ್ಲಿ ನಿಷ್ಪಕ್ಷಪಾತವಾದ ಋಜುಮತಿ ಮತ್ತು ಪ್ರಥಮ ವರ್ಗದ ವಿಮರ್ಶಕನಿಗೆ ಸಹಜವಾದ ಸವಿನಯ ಅಧಿಕಾರವಾಣಿ ಇವುಗಳ ಪ್ರಯೋಜನ ಕನ್ನಡನಾಡಿಗೆ ಸಂಪೂರ್ಣವಾಗಿ ಲಭಿಸಿ 'ಕನ್ನಡ ಸಾಹಿತ್ಯ ಚರಿತ್ರೆ' ಅವರ ಕೈಯಿಂದಲೆ ಸಮಗ್ರವಾಗಿ ರಚಿತವಾಗಿದ್ದರೆ, ಸಾಹಿತ್ಯದ ಚರಿತ್ರೆ ಮಾತ್ರವಲ್ಲದೆ ಅದೆಂತಹ ರಸ ವಿಮರ್ಶೆಯ ಜೇನುಣಿಸು ಕನ್ನಡಿಗರಿಗೆ ಲಭಿಸುತ್ತಿದ್ದಿತು ಎಂಬುದಕ್ಕೆ ಪ್ರಕಟವಾಗಿರುವ ಈ ಗ್ರಂಥಭಾಗವೆ ಸಾಕ್ಷಿಯಾಗಿದೆ. ಆ ಭಾಗ್ಯ ನಮ್ಮದಾಗಲಿಲ್ಲ. ಆದರೂ ಒಂದು ಸಮಾಧಾನ: ಅನಾಗತ ಚರಿತ್ರೆಯ ಸೃಜನ ಕಾರ್ಯದಲ್ಲಿ ಆಸಕ್ತರಾಗಿ ತಮ್ಮ ಬದುಕೆಲ್ಲ ವನ್ನೂ ಅದಕ್ಕೆ ಮೀಸಲಾಗಿಸಿದ ಅವರಿಗೆ ಅಗತ ಚರಿತ್ರೆಯನ್ನು ಬರೆದು ಪೂರೈಸಲು ವಿಧಿ ಕೊಟ್ಟಿದ್ದ ಆಯುಃಪ್ರಮಾಣದಲ್ಲಿ ಸಾಧ್ಯವಾಗಲಿಲ್ಲ.

ಕನ್ನಡನಾಡಿಗೂ ಕನ್ನಡಕ್ಕೂ ಶ್ರೀಕಂಠಯ್ಯನವರು ಸಲ್ಲಿಸಿರುವ ಸೇವೆ ಅಪಾರ ವಾಗಿ ಅನೇಕಮುಖವಾಗಿದೆ. ಆದರೆ ಚಿರಕಾಲದ ದೃಷ್ಟಿಯಿಂದ ಹೇಳುವುದಾದರೆ, ಅವರ ಸಾಹಿತ್ಯಸೃಷ್ಟಿ ಮತ್ತು ಪ್ರಕೃತ ಗ್ರಂಥದಂತಹ ಲಿಖಿತಗಳಲ್ಲಿ ಪ್ರಕಾಶಿತವಾಗಿರುವ ಅವರ ಸಾಹಿತ್ಯವಿಮರ್ಶನ ದೃಷ್ಟಿ ಇವುಗಳಿಗೆ ಒಂದು ಮಾನನೀಯವಾದ ಶೃಂಗಸ್ಥಾನ ದೊರೆಯುವುದರಲ್ಲಿ ಸಂದೇಹವಿಲ್ಲ.

ಎರಡನೆಯದು ಡಾ. ಹಾ. ಮಾ. ನಾಯಕರದ್ದು:

"ಬಿ. ಎಂ. ಶ್ರೀಕಂಠಯ್ಯನವರು ಬರೆಯಲಾಶಿಸಿದ್ದ ಕನ್ನಡ ಸಾಹಿತ್ಯಚರಿತ್ರೆಯ ಆರಂಭದ ಭಾಗ 'ಕನ್ನಡ ಕೈಪಿಡಿ'ಯ ಎರಡನೆಯ ಭಾಗವಾಗಿ ಪ್ರಕಟವಾಗಿದೆ. ಇದೇ 1947ರಲ್ಲಿ ಪ್ರಕಟವಾಗಿದ್ದರೂ ಶ್ರೀಕಂಠಯ್ಯನವರು ಇದನ್ನು 1929ಕ್ಕಿಂತ ಮೊದಲೇ ಬರೆಯಲಾರಂಭಿಸಿದ್ದರೆಂದು ಹೇಳಬಹುದು. ಕನ್ನಡ ಸಾಹಿತ್ಯವನ್ನಷ್ಟೇ ಅಲ್ಲದೆ

ಅನೇಕ ಸಾಹಿತ್ಯಗಳನ್ನು ಚೆನ್ನಾಗಿ ಬಲ್ಲವರಾಗಿದ್ದ ಅವರು ಶ್ರೇಷ್ಠ ಸಾಹಿತ್ಯ ಚರಿತ್ರೆಯನ್ನೂ ರಚಿಸಬಲ್ಲ ಸಮರ್ಥರಾಗಿದ್ದರು. ಆದರೆ ಉದಾಹರಣೆಗಳ ಭಾರದಿಂದ ಕುಸಿದಿರುವ ಪ್ರಕಟಿತಭಾಗ ಮಾತ್ರ ಈ ಸಾಹಿತ್ಯಚರಿತ್ರೆ ಅತ್ಯುತ್ತಮವಾಗಿರುತ್ತಿತ್ತೆಂಬುದನ್ನೇನೂ ತೋರಿಸುವುದಿಲ್ಲ. "—ಡಾ. ಹಾ. ಮಾ. ನಾಯಕ. ಕ.ಸಾ.ಚ. ಪು. 37

ಶ್ರೀಯವರು ಬರೆದಿರುವಷ್ಟು ಭಾಗವನ್ನು ನಿಷ್ಪಕ್ಷಪಾತವಾಗಿ ವಿಮರ್ಶಿಸಿ ನಮ್ಮ ಅಭಿಪ್ರಾಯವನ್ನು ಹೀಗೆ ಮಂಡಿಸಬಹುದು.

ಶ್ರೀಯವರು ಯೋಜಿಸಿದಂತಹ ವಿಸ್ತಾರವಾದ, ರಸಸ್ಥಾನ ನಿರ್ದೇಶಕವಾದಂತಹ ಸಾಹಿತ್ಯ ಚರಿತ್ರೆಯ ಅಗತ್ಯ ಕನ್ನಡಕ್ಕೆ ಉಂಟು. ಶ್ರೀಯವರದು ರಸಯಾತ್ರೆ ಇಂತಿಂಥ ತಾರೀಖು ಇಂತಿಂಥಲ್ಲಿ ನಿಲ್ಲತಕ್ಕದ್ದು–ತಾಜ್‌ಮಹಲ್ ನೋಡಲು ಎರಡು ಘಂಟೆ. ಅನಂತರ ಮುಂದೆ ಹೋಗತಕ್ಕದ್ದು—ಕಾಶೀ ಪುಣ್ಯ ಕ್ಷೇತ್ರ. ಅಲ್ಲಿ ಮೂರು ದಿನ ತಂಗತಕ್ಕದ್ದು—ಗಯಾದಲ್ಲಿ ಶ್ರಾದ್ಧಕ್ಕೆ ಎರಡು ದಿನ—ಹೀಗೆ ಕಾಲ ನಿರ್ಧಾರಮಾಡಿ ಹೊರಟ ಯಾತ್ರೆಯ ರೈಲಲ್ಲಿ ಅವರ ಸಾಹಿತ್ಯ ಚರಿತ್ರೆ. ಇಷ್ಟಬಂದರೆ ತಾಜಮಹಲನ್ನು ಐದುದಿನವೂ ನೋಡಿ ಸಂತೋಷಪಡುತ್ತಾ ನಿಂತಿರಬಹುದು–ಕಷ್ಟವಾದರೆ ಕಾಶಿ, ಗಯಗಳಿಗೆ ಹೋಗದೆಯೇ ಇರಬಹುದು—ಹೀಗೆ ಸ್ವಸಂತೋಷಕ್ಕಾಗಿ ಕಾಲದ ಪರಿಮಿತಿಯಿಲ್ಲದೆ ಯಥಾಸಾವಕಾಶವಾಗಿ ಹೊರಟ, ಹೆಚ್ಚಿನ ಮಟ್ಟಿಗೆ ಸೌಂದರ್ಯೋಪಾಸನೆಯ ಯಾತ್ರೆ ಅದು. ತಾವು ಮೆಚ್ಚಿದ, ಸವಿದ ರಸಸ್ಥಾನಗಳನ್ನು ಸಹೃದಯರಿಗೂ ತೋರಿಸಿ, ವಿವರಿಸುವ ಉತ್ಸಾಹ ಶ್ರೀಯವರದು.

ಆದರೆ ವಿದ್ವತ್ತು, ರಸಸ್ಥಾನ ನಿರ್ದೇಶನ ಶಕ್ತಿ, ನಿಜವಾದ ಕಾವ್ಯತ್ವದ ಆಸ್ವಾದನೆ ಈ ವರಗಳನ್ನು ಪಡೆದಿದ್ದ ಶ್ರೀಯವರಿಗೆ ಸರಿಯಾದ ವಿಮರ್ಶಕನಿಗಿರಬೇಕಾದ ದಾಕ್ಷಿಣ್ಯ ದೂರತ್ವ ಇರಲಿಲ್ಲ ಎಂದು ಒಪ್ಪಿಕೊಳ್ಳಬೇಕು. ರನ್ನನಂತಹ ಕವಿಯನ್ನು ಕುರಿತು ಅವರು ಹೇಳಿರುವ ಮಾತುಗಳು ಈ ಹೇಳಿಕೆಯನ್ನು ಪುಷ್ಟಿಗೊಳಿಸುತ್ತದೆ :

ಒಂದು ವಿಷಯವನ್ನು ನಾವು ಮರೆಯುವಂತಿಲ್ಲ—ಶ್ರೀಯವರು ಈ ಸಾಹಿತ್ಯ ಚರಿತ್ರೆಯನ್ನು ಬರೆದದ್ದು ಐವತ್ತು ವರ್ಷಗಳ ಹಿಂದೆ. ಆಗ ಕನ್ನಡದ ಬಗ್ಗೆ ಹೊಸ ಉತ್ಸಾಹವನ್ನು ಜನತೆಯಲ್ಲಿ ಮೂಡಿಸಬೇಕಾದ ಹೊರೆ ಅವರ ಮೇಲಿತ್ತು. ಅವರಿಗಿದ್ದ ಮೂಲ ಸಾಮಗ್ರಿಗಳ ಕೊರತೆಯನ್ನು ಗಮನಿಸಬೇಕು. ಅಂಥ ಪರಿಸರದಲ್ಲಿ ಇಂಥದೊಂದು ಸಾಹಸಕ್ಕೆ ಕೈಹಾಕಿದ ಶ್ರೀಯವರು ಅಭಿವಂದನೀಯರು.

**— ಪ್ರಭುಶಂಕರಾ**

# ಬಿ. ಎಂ. ಶ್ರೀ ಅವರ-ಗ್ರಂಥ ಸಂಪಾದನೆ

**ಎಲ್. ಬಸವರಾಜು**

ನಾನು ಹುಟ್ಟುವ ಹೊತ್ತಿ (1919) ಗಾಗಲೇ ಅವರು Junior Professor of English ಆಗಿದ್ದರು. ನಾನು ಮಿಡ್ಲ್‌ಸ್ಕೂಲಿನಲ್ಲಿ ಓದುವ ಹೊತ್ತಿಗೆ (1930) ಅವರು ಮೈಸೂರುವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿದ್ದರು. ನನಗೆ ಬುದ್ಧಿ ಬಂದು ಇಂಟರ್ ಮಿಡಿಯೇಟ್ ಓದುವ ಕಾಲ (1938) ಕ್ಕೆ ಅವರ ಶಿಷ್ಯರಾದ ವೆಂಕಣಯ್ಯ ನವರು– ಎ. ಆರ್. ಕೃಷ್ಣಶಾಸ್ತ್ರಿಗಳು ನಮ್ಮ ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾಗಿದ್ದರು. ಆ ಕಾಲದ ಅವರ ಸ್ನೇಹಿತರಾದ ಜಿ.ಪಿ. ರಾಜರತ್ನಂ, ವಿ. ಸೀತಾರಾಮಯ್ಯ, ಅನಂತರಾಮಯ್ಯ ನನ್ನ ಉಪಾಧ್ಯಾಯ ವರ್ಗದಲ್ಲಿದ್ದರು, ಒಂದು ಕಡೆ ಬೇಂದ್ರೆ ಇನ್ನೊಂದು ಕಡೆ ಕುವೆಂಪು ಅವರಿಂದ ನಾನು ಪ್ರಭಾವಿತನಾಗಿದ್ದೆ. ಆ ಸಮಯಕ್ಕೆ ಪರಿಷತ್ತಿನ ಅಧ್ಯಕ್ಷರಾಗಿದ್ದ ಬಿ. ಎಂ. ಶ್ರೀಯವರ ಭಾಷಣಗಳನ್ನು ಕೇಳಲು ಕನ್ನಡ ಸಾಹಿತ್ಯ ಪರಿಷತ್ತಿಗೆ ಹೋಗುತಿದ್ದು ಕನ್ನಡದ ಬಗ್ಗೆ ನನಗಿದ್ದ ಅಭಿಮಾನ ಪ್ರೀತಿ ಮಮತೆ ಶ್ರೀಕಂಠಯ್ಯನವರ ಉತ್ತೇಜಕಮಾತುಗಳಿಂದ ನನ್ನ ಮನಸ್ಸಿನಲ್ಲಿ ಆಳವಾಗಿ ಬೇರುಬಿಟ್ಟವು. ಆ ಕಾರಣದಿಂದಲೇ ನಾನು 1939ರಲ್ಲಿ ಇಂಟರ್ ಪಾಸು ಮಾಡಿದ ಮೇಲೆ ಮೈಸೂರಿಗೆ ಕನ್ನಡ ಬಿ. ಎ. ಆನರ್ಸ್ ಓದಲು ಹೋದೆ. ನಾನು ಪರಿಷತ್ತಿನಲ್ಲಿ ಶ್ರೀಯವರು ಹರಿಹರನ ಬಸವರಾಜದೇವರ ರಗಳೆಯನ್ನು ಕುರಿತು ಕೊಟ್ಟ ಒಂದು ಉಪನ್ಯಾಸವನ್ನು ಕೇಳಿದ ನೆನಪಿದೆ. ವೆಂಕಣ್ಣಯ್ಯನವರು ಸಂಪಾದಿಸಿರುವ ಬಸವರಾಜದೇವರ ರಗಳೆಯಲ್ಲಿ ಪರಮತದ್ವೇಷದ ಮಾತುಗಳು ಬಹಳ ಇದೆಯೆಂದೂ ಅಂಥ ಮಾತುಗಳಲ್ಲಿ ಕೆಲವನ್ನು ತಾವು ಅಚ್ಚು ಮಾಡಿಸುವಾಗ ಬಿಟ್ಟಿರುವುದಾಗಿಯೂ ಹರಿಹರನಿಗೆ ಕೆಟ್ಟ ಹೆಸರು ಬರದಿರಲೆಂಬ ಒಳ್ಳೆಉದ್ದೇಶದಿಂದಲೇ ಹಾಗೆ ಮಾಡಿದುದಾಗಿಯೂ ಹೇಳಿದ ಮಾತು ಬಹಳ ಚೆನ್ನಾಗಿ ನೆನಪಿದೆ. ಅಂದರೆ ಶ್ರೀಯವರ ಶಿಷ್ಯರೇ ಆದ ವೆಂಕಣ್ಣಯ್ಯನವರು ಆ ರಗಳೆಯನ್ನು ಸಂಪಾದಿಸುವಾಗ ಬಿ. ಎಂ. ಶ್ರೀಯವರ ಪಾತ್ರವೇನಿತ್ತೆಂಬುದು ಸ್ಪಷ್ಟವೇ ಇದೆ.

15-1-1909 ರಂದು ಮೈಸೂರು ಮಹಾರಾಜಕಾಲೇಜಿನಲ್ಲಿ ಶ್ರೀಯವರು ಇಂಗ್ಲಿಷ್ ಅಧ್ಯಾಪಕ ಹುದ್ದೆಗೆ ಸೇರಿದ್ದರು. 1911ರ ಡಿಸೆಂಬರ್ ತಿಂಗಳಲ್ಲಿ ವಿದ್ಯಾವರ್ಧಕಸಂಘದ ಆಶ್ರಯದಲ್ಲಿ ಧಾರವಾಡದಲ್ಲಿ– ಕನ್ನಡ ತಲೆಯೆತ್ತಿ ತನ್ನ ತನವನ್ನು ಸ್ಥಾಪಿಸಿಕೊಳ್ಳಬೇಕಾದ ವಿಷಯವನ್ನು ಕುರಿತು ಮಾತನಾಡಿದರು. ಅಲ್ಲಿಂದ 15 ವರ್ಷಗಳ ಕಾಲ ಅವರು ಎಲ್ಲಿಯೂ ಕನ್ನಡದಲ್ಲಿ ಸಾರ್ವಜನಿಕ ಭಾಷಣಗಳನ್ನು

ಮಾಡಲಿಲ್ಲ– ಅದಕ್ಕೆ ಕಾರಣ ಸಂಕುಚಿತ ಬುದ್ಧಿಯ ದುಷ್ಟರ ಟೀಕೆಗಳಿಗೆ ಆಸ್ಪದ ಕೊಡಬಾರದೆಂದೇ ಹಾಗಿದ್ದರೆಂದು ಎಸ್. ವಿ. ರಂಗಣ್ಣನವರು ಅಭಿಪ್ರಾಯ ಪಡುತ್ತಾರೆ. ಆಗಾಗಲೇ ಶ್ರೀಯುವರ ಮೇಲೆ ಸಂಸ್ಕೃತವಿರೋಧಿಗಳೆಂದೂ, ತಮಿಳಿನ ಪಕ್ಷಪಾತಿಗಳೆಂದೂ, ಕನ್ನಡವನ್ನೂ ಆಂಗ್ಲೀಕರಿಸಿ ಕೆಡಿಸುತ್ತಿರುವರೆಂದೂ, ವಿದೇಶೀರೀತಿನೀತಿಗಳ ಮೇಲೆ ವ್ಯಾಮೋಹವೆಂದೂ ದೇಶದ ಸ್ವತಂತ್ರ್ಯಚಳುವಳಿಯ ವಿರೋಧಿಗಳೆಂದೂ ಆಗದವರು ಆಪಾದನೆಗಳನ್ನು– (1940ರ ಸಂದರ್ಭಕ್ಕೂ) ಮಾಡುತ್ತಿದ್ದರು. ಈ ವಿದ್ವೇಷ ಪ್ರವೃತ್ತಿ ಅವರು ಕನ್ನಡ ಕಾರ್ಯಕ್ಷೇತ್ರವನ್ನು ಪ್ರವೇಶಿಸಿದ 1918ರ ಸಮಯಕ್ಕೂ ಇತ್ತಾಗಬಹುದು. ಆದ್ದರಿಂದಲೇ ಅವರು 1918 ರಲ್ಲಿ ಸೆಂಟ್ರಲ್ ಕಾಲೇಜಿನ ಕರ್ಣಾಟಕಸಂಘವನ್ನು ಉದ್ಘಾಟಿಸಲು ಒಪ್ಪಲಿಲ್ಲ– ಒಪ್ಪಿದ್ದರೆ ಕನ್ನಡದಲ್ಲಿ ಅವರು ಮಾತನಾಡಬೇಕಾಗಿತ್ತು. ಅವರು ಕರ್ನಾಟಕ ಪರಿಷತ್ತು ಎಂದು ಹಾಕಿಸಿದ ಬೋರ್ಡು ವ್ಯಾಕರಣಬದ್ಧವಲ್ಲವೆಂಬ ವಿವಾದವೆದ್ದು ವಿದ್ವಾಂಸರಲ್ಲಿ ರಂಪಾಟವಾಗಿ– ಕೊನೆಗೆ ಕನ್ನಡ ಸಾಹಿತ್ಯಪರಿಷತ್ತು ಎಂದು ತಿದ್ದುಪಡಿಯಾಯಿತು. ಈ ಎಲ್ಲ ರೇಜಿಗೆಯಿಂದಲೇ ಅವರು 1942 ರಲ್ಲಿ ಮತ್ತೆ ಪರಿಷತ್ತಿನ ಉಪಾಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಯಾಗಿ ನಿಲ್ಲುವಂತಾಗಲಿಲ್ಲ. 1938 ರಲ್ಲಿ ಅವರು ಪರಿಷತ್ತಿನ ಉಪಾಧ್ಯಕ್ಷರಾಗಿ ಚುನಾಯಿತರಾಗಿದ್ದು– ಅಂದಿನ ಯುವರಾಜರು ಅದರ ಅಧ್ಯಕ್ಷರು. ಕನ್ನಡ ತಮಿಳು ಇಂಗ್ಲಿಷ್ ವ್ಯಾಕರಣ ಬಲ್ಲ ಶ್ರೀಯುವರು ಕರ್ಣಾಟಕವೆಂಬ ಪದವನ್ನು ಬಿಟ್ಟು ಕರ್ನಾಟಕವನ್ನು ಬಳಸಿದ್ದು ಅದನ್ನೇ ದೊಡ್ಡದುಮಾಡಿ ಶ್ರೀಯುವರ ವಿರುದ್ಧ ವಿದ್ವಾಂಸರು ಮುಸೆದಾಡಿದ್ದು ದುರದೃಷ್ಟದ ಪ್ರಸಂಗ.

1919ರಲ್ಲಿ ಶ್ರೀಯುವರು ಜೂನಿಯರ್ ಪ್ರೊಫೆಸರ್ ಆಫ್ ಇಂಗ್ಲಿಷ್ ಮತ್ತು ಸೀನಿಯರ್ ಪ್ರೊಫೆಸರ್‌ಷಿಪ್‌ಗಳಲ್ಲಿ ಒಂದು ಆಯ್ದುಕೊಳ್ಳುವ ಸಂದರ್ಭಬಂದಾಗ ಇಂಗ್ಲೀಷಿನ ಜೂನಿಯರ್ ಪ್ರೊಫೆಸರ್‌ಷಿಪ್ಪನ್ನೇ ಅವರು ಆಯ್ದುಕೊಂಡರೆಂದು ಎಸ್. ವಿ. ರಂಗಣ್ಣನವರು ಹೇಳುತ್ತಾರೆ. ಆ ಕಾಲಕ್ಕೆ ಕನ್ನಡದಲ್ಲಿ ಏನಾದರೂ ಅಷ್ಟು ಕಿಮ್ಮತ್ತಿರಲಿಲ್ಲ.

ಮದ್ರಾಸಿನಲ್ಲಿ ಬಿ. ಎಲ್. ಪದವಿಯನ್ನು 1907ರಲ್ಲಿ ಮತ್ತು ಎಂ. ಎ. ಪದವಿಯನ್ನು 1909 ರಲ್ಲಿ ಪಡೆದರು. ಲಾಪದವಿಗೆ ಓದುತ್ತಿದ್ದಾಗ ಅವರು ತಮಿಳನ್ನು ಕಲಿತರು– ಆಗ ಅವರಿಗೆ ಹಳೆಗನ್ನಡ ಮತ್ತು ಹಳೆತಮಿಳುಗಳ ನಡುವೆಯಿದ್ದ ಸಮಾನಾಂಶಗಳನ್ನು ಗುರುತಿಸಿದರು. ಕನ್ನಡ ಮತ್ತು ತಮಿಳುಗಳೆರಡಕ್ಕೂ ಅನ್ವಯಿಸುವಂತೆ ಒಂದು ವ್ಯಾಕರಣ ಗ್ರಂಥವನ್ನು ಬರೆಯಬೇಕೆಂಬ ಬಲವಾದ ಆಶೆ ಅವರಿಗೆ ಅಂದೇ ಮನಸ್ಸಿನಲ್ಲಿತ್ತು. ಅದಕ್ಕೆ ಅವರು ಟಿಪ್ಪಣಿಯನ್ನೂ ಸಂಗ್ರಹಿಸಿಕೊಂಡಿದ್ದರು. 1908ರಲ್ಲಿ ಅವರು Mysore civil service ಪರೀಕ್ಷೆಯಲ್ಲಿ ಬೇಕಾದ ಅಂಕಗಳನ್ನು ಪಡೆಯಲಾರದೆಹೋದರು. ಅವರನ್ನು ಮೀರಿಸಿ ಆ ಪರೀಕ್ಷೆಯಲ್ಲಿ ತೇರ್ಗಡೆಯಾದ

ವರು ರಾಜಮಂತ್ರಪ್ರವೀಣ ಶ್ರೀ ಮಾಧವರಾಯರೊಬ್ಬರು, ಮತ್ತೊಬ್ಬರು ರಾಜಸೇವಾಸಕ್ತ ಶ್ರೀ ಎ. ವಿ. ರಾಮನಾಥನ್– ಇದರಿಂದ ಅವರ ಕಾರ್ಯಕ್ಷೇತ್ರವೇ ಬೇರಾಯಿತು. ಇಲ್ಲದೇ ಹೋಗಿದ್ದರೆ ಶ್ರೀಯವರ ಉತ್ತಮ ಅಧ್ಯಾಪಕಪ್ರವೃತ್ತಿಗಾಗಲಿ ವಾಗ್ಮಿತೆಗಾಗಲಿ ಸಾಕಷ್ಟು ಅವಕಾಶ ಸಿಗುತ್ತಿರಲಿಲ್ಲವೆನ್ನುತ್ತಾರೆ. ಎಸ್. ವಿ. ಆರ್. ಶ್ರೀಯವರು ಮದರಾಸಿನಲ್ಲಿದ್ದಾಗ ಸಮುದ್ರದ ದಂಡೆಯಲ್ಲಿ ಕುಳಿತು ಅನಂತ ಜಲರಾಶಿಯನ್ನು ದಿಟ್ಟಿಸುತ್ತ ಕನ್ನಡ ನಾಡುನುಡಿ ಸಾಹಿತ್ಯಗಳ ಸಂಬಂಧವಾಗಿ ಏನೇನೋ ಆಶೆ ಆಕಾಂಕ್ಷೆಗಳನ್ನೂ ಅದನ್ನು ಈಡೇರಿಸುವ ಮಾರ್ಗೋಪಾಯಗಳನ್ನೂ ನಿರ್ಧರಿಸಿಕೊಂಡರು. ಮೊದಲನೇ ಹೆಂಡತಿ ಸತ್ತಮೇಲೆ ಇದ್ದ ಮೂರು ಮಕ್ಕಳಿಗೆ ತಂದೆತಾಯಿ ಆಗಿ– ಬುದ್ಧನ ವಿಗ್ರಹವನ್ನು ತಮ್ಮ ಮೇಜಿನಮೇಲಿಟ್ಟುಕೊಂಡರು.

1923ರಲ್ಲಿ ಎರಡನೇದರ್ಜೆ ಇಂಗ್ಲೀಷ್ ಪ್ರಾಧ್ಯಾಪಕವೃತ್ತಿ ಅವರಿಗೆ ಖಾಯಂ ಆಯಿತು. 1926 ರಿಂದ 1930 ರವರೆಗೆ ಮೈ. ವಿ. ವಿ.ದ ಕುಲಸಚಿವರಾಗಿದ್ದರು. 1927ರ ಜುಲೈನಲ್ಲಿ ಕನ್ನಡ ಎಂ.ಎ. ಪ್ರಾರಂಭವಾಯಿತು ಮಹಾರಾಜಕಾಲೇಜಿನಲ್ಲಿ ಆಗ Dr. B. N. Seal ರು ಕುಲಪತಿಗಳಾಗಿದ್ದರು. ಶ್ರೀಕಂಠಯ್ಯನವರು ಆಗ ಕನ್ನಡದ ಗೌರವ ಪ್ರಾಧ್ಯಾಪಿಕೆಯನ್ನೂ ಒಪ್ಪಿಕೊಂಡರು. ಆ ವೇಳೆಗೆ 1926 ರಲ್ಲಿ ಗದಾಯುದ್ಧನಾಟಕ ಮತ್ತು ಇಂಗ್ಲೀಷ್ ಗೀತೆಗಳು ಪ್ರಕಟವಾಗಿದ್ದವು, 1927ರಲ್ಲಿ ನಾಲ್ಮಡಿಕೃಷ್ಣರಾಜಒಡೆಯರ ರಜತದ ಹಬ್ಬದ ಪ್ರಗಾಥವನ್ನೂ ಪ್ರಕಟಿಸಿದ್ದರು. 1928ರಲ್ಲಿ ಗುಲ್ಬರ್ಗದಲ್ಲಿ 14ನೇ (ಕನ್ನಡಸಾಹಿತ್ಯಪರಿಷತ್ತಿನ) ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆಗಿದ್ದರು. 1929ರಲ್ಲಿ ಅಶ್ವತ್ಥಾಮನ್ ಪ್ರಕಟವಾದಾಗ– ದೊಡ್ಡದೊಂದು ವಾದವಿವಾದ ವಿದ್ವತ್ಪ್ರಪಂಚದಲ್ಲಿ ಬಿರುಸಾಯಿತು. 1938ರಲ್ಲಿ ಕನ್ನಡ ಬಾವುಟ ಪ್ರಕಟವಾಯಿತು. ಆಗಲೇ ಅವರು ಪರಿಷತ್ತಿನ ಉಪಾಧ್ಯಕ್ಷರೂ ಆಗಿ ಆಯ್ಕೆಯಾಗಿದ್ದರು.

ಶ್ರೀಯವರನ್ನು ಸೀಲರೇ ಕನ್ನಡನವೋದಯದ ನಿರ್ಮಾಪಕರೆಂದು ಗುರುತಿಸಿ ಪ್ರೋತ್ಸಾಹಿಸಿದರು. ಮುಂದೆ ಕುಲಪತಿಗಳಾದ ಮೆಟಕಾಫರೂ ಶ್ರೀಯವರ ಬಗ್ಗೆ ತುಂಬ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಆ 1930ರ ವೇಳೆಗೆ ಶ್ರೀಯವರು ಇಂಗ್ಲೀಷ್ ಸೀನಿಯರ್ ಪ್ರೊಫೆಸರಾಗಿ ಬಡ್ತಿ ಪಡೆದು ಬೆಂಗಳೂರು ಸೆಂಟ್ರಲ್‌ಕಾಲೇಜಿಗೆ ಬಂದರು. ಶ್ರೀಯವರ ಪ್ರಚಾರಕಾರ್ಯಕ್ಕೆ ಮೆಟಕಾಫ್ ವಿಶೇಷ ರಿಯಾಯತಿಗಳನ್ನು ತೋರಿಸಿದರು. ಅವರ 58ರ ಹುಟ್ಟುಹಬ್ಬಕ್ಕಾಗಿ 1941ರಲ್ಲಿ ಉಪಾಯನವನ್ನು ಅರ್ಪಿಸಲಾಯಿತು.

ಶ್ರೀಯವರು ಮೊದಲನೆ ದರ್ಜೆ ಇಂಗ್ಲೀಷ್ ಪ್ರಾಧ್ಯಾಪಕರಾದ್ದು 1930ರಲ್ಲಿ. ಆದರೆ 1927 ರಲ್ಲೇ ಶ್ರೀಯವರು ಮೈಸೂರು ಮಹಾರಾಜಾಕಾಲೇಜಿನಲ್ಲಿ ಕನ್ನಡ

ಗೌರವ ಪ್ರಾಧ್ಯಾಪಕರಾಗಿದ್ದರು. ಅದೇ ವರ್ಷ ಕನ್ನಡ ಎಂ. ಎ,ಯನ್ನು ಬಿ. ಎಂ. ಶ್ರೀಯವರು ಪ್ರಾಧ್ಯಾಪಕರಾಗಲು ಒಪ್ಪುವ ಷರತ್ತಿನ ಮೇಲೆಯೇ ಅಂದಿಗೆ ವೈಸ್ ಛಾನ್ಸಲರಾಗಿದ್ದ ಬಿ. ಎನ್. ಸೀಲ್‌ರವರು ಮುಂಜೂರುಮಾಡಿದ್ದರು. ಇವರು ಇಷ್ಟಪಟ್ಟಿದ್ದರೆ– ಅಥವಾ ಧೈರ್ಯಮಾಡಿದ್ದರೆ 1919ರಷ್ಟು ಹಿಂದೆಯೇ ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪಿತವಾದ ಹೊಚ್ಚಹೊಸದರಲ್ಲೇ ಕನ್ನಡ ಹಿರಿಯಪ್ರಾಧ್ಯಾಪಕ ರಾಗಬಹುದಿತ್ತು. ಆದರೆ ಅದು ಹಾಗಾಗಲಿಲ್ಲ. ಆಗ ಕನ್ನಡದಲ್ಲಿ ಸ್ಥಾನಕ್ಕೆ ತಕ್ಕ ಮಾನವೇನೂ ಇರಲಿಲ್ಲ. ಇಂಗ್ಲೀಷಿನಲ್ಲಿ ಒಬ್ಬ ಕಿರಿಯ ಪ್ರಾಧ್ಯಾಪಕನಾದನೆಂದರೂ ಅವನು ಅಂದಿನ ಕಾಲದ ಕಣ್ಣಿಗೆ ಕನ್ನಡದಲ್ಲಿ ಹಿರಿಯ ಪ್ರಾಧ್ಯಾಪಕನಾಗುವುದಕ್ಕಿಂತ ಬಹಪಟ್ಟು ಅದು ಅಂತ್ಯತ ಪ್ರತಿಷ್ಠೆಯ ವಸ್ತುವಾಗಿತ್ತು. 1911 ರ ವೇಳೆಗೇ ಶ್ರೀಯವರು ಕನ್ನಡ ವಿದ್ವತ್ತನ್ನು ಪಡೆದು ಅದರ ಸಾಹಿತ್ಯವನ್ನು ಹೊಸ ದೃಷ್ಟಿಯಿಂದ ಸೃಷ್ಟಿಯಿಂದ ಪಾಶ್ಚಾತ್ಯ ಸಾಹಿತ್ಯಕ್ಕೆ ಹೆಗಲೆಣೆಯಾಗುವಂತೆ ಮಾಡಬೇಕೆಂಬ ಮುಂದಾಲೋಚನೆ ಮತ್ತು ಯೋಜನೆ ಅವರಲ್ಲಿ ಇತ್ತು. ಅದೇ 1911ನೇ ವರ್ಷ ಈ ವಿಚಾರವನ್ನು ಕುರಿತ ಒಂದು ಅಪೂರ್ವ ನವೀನ ಚಿಂತನೆಯ ಉದ್ದಾಮ ಭಾಷಣವನ್ನು ಕನ್ನಡದಲ್ಲಿ ಧಾರವಾಡದ ವಿದ್ಯಾವರ್ಧಕಸಂಘದ ಆಶ್ರಯದಲ್ಲಿ ಮಾಡಿದ್ದರು. ಆ ಉತ್ತಿಷ್ಠ ಜಾಗ್ರತ ವಾಣಿಯನ್ನು ಅಂದಿನ ಬಹುಪಾಲು ಜನ ಕೇಳಿ ಕಣ್ಣುಜ್ಜಿಕೊಂಡರು– ಆದರೆ ಕವಿಗಳು ಕಣ್ಣು ಕೆಂಪಗೆ ಮಾಡಿಕೊಂಡು ನಾಲಗೆಯ ಕೊಂಡಿಯಲ್ಲಿ ಅವರನ್ನು ಕುಟುಕಿದರು. ಈ ಕಾರಣದಿಂದಲೂ. "ಕನ್ನಡವೆಂದು ಬಹಳ ಮಾತನಾಡಿದರೇ ಇಂಗ್ಲೀಷಿನಲ್ಲಿ ಯೋಗ್ಯತೆ ಸಾಲದ್ದರಿಂದ ಈ ಮನುಷ್ಯ ಕನ್ನಡಕ್ಕೆ ತಿರುಗಿದ್ದಾನೆ ಎಂದು ಹೇಳುವ ಕಾಲ ಅದು" (ಮಾಸ್ತಿ) ಆ ಕಾರಣದಿಂದಲೂ ಶ್ರೀಯವರು 1923 ರಲ್ಲಿ ಎರಡನೇ ದರ್ಜೆಯ ಇಂಗ್ಲೀಷ್ ಪ್ರಾಧ್ಯಾಪಕರಾಗುವವರೆಗೆ ಆ ಮೇಲೆ 1926ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗುವವರೆಗೂ 1911 ರಿಂದ 1926ರ ವರೆಗೆ ಒಟ್ಟು 15 ವರ್ಷಗಳ ಕಾಲ ಕನ್ನಡದಲ್ಲಿ ಭಾಷಣಗಳನ್ನೆ ಮಾಡಲಿಲ್ಲ. ಈ ಹಿನ್ನೆಲೆಯಲ್ಲಿ– ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವನ್ನು ಕನ್ನಡದಲ್ಲಿ ಮಾತಾಡಿ ಉದ್ಘಾಟಿಸಬೇಕೆಂದಾಗ ಶ್ರೀಯವರು ಯಾಕೆ ಸಕತ್ತಾಗಿ ನಿರಾಕರಿಸದರೆಂಬುದನ್ನು ಮನಗಾಣಬಹುದು. ಈ ಸಂದಿಗ್ಧ ಪರಿಸ್ಥಿತಿ ತಿಳಿಯಾದ 1926ರ ವೇಳೆಗೆ ಶ್ರೀಯವರಿಗೆ 42 ವರ್ಷ ವಯಸ್ಸಾಗಿತ್ತು. ಅಷ್ಟುಕಾಲ ಅವರು ಕನ್ನಡದ ಗುಪ್ತಭಕ್ತರಾಗಿದ್ದರು-ಹೊರಗಣ ವೇಷದಿಂದ ಹರಿದಾಸನಂತೆ ತೋರುತ್ತಿದ್ದು ಆಂತರ್ಯದಲ್ಲಿ ಗುಪ್ತಮಂಚಣ್ಣನೆಂಬ ಶಿವಶರಣ ಕಟ್ಟಾಶಿವಭಕ್ತನಾಗಿದ್ದನಂತೆ. ಹಾಗೆ ಶ್ರೀಯವರು ಹೊರಗೆ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದರೂ ಒಳಗೆ ಕನ್ನಡದ ಮಹಾಮಹೋಪಾಧ್ಯಾಯರಾಗಿದ್ದರು. ಅಲ್ಲಿಂದ ಮತ್ತು ಆ ಮೇಲೆಯೇ ಅವರ ಇಂಗ್ಲಿಷ್ ಗೀತೆಗಳು ಮರಾಳಿತೊಟ್ಟಿದ್ದು (1926) ಗದಾಯುದ್ಧ (1926) ಅಶ್ವತ್ಥಾಮನ್ (1929) ನಾಟಕಗಳು ಪ್ರಕಟವಾದವು.

1928ರಲ್ಲಿ ಗುಲ್ಬರ್ಗದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. 1929ರಲ್ಲಿ ಅವರ ದುರಂತ ನಾಟಕ ಅಶ್ವತ್ಥಾಮನ್ ಸಂಪ್ರದಾಯಸ್ಥರ ಪಂಚಪಾತ್ರೆಯಲ್ಲಿ ಬಿರುಗಾಳಿಯನ್ನೆಬ್ಬಿಸಿತು. ಅವರು ಸಂಸ್ಕೃತದ್ವೇಷಿಗಳೆಂದೂ, ಕನ್ನಡವನ್ನು ಕುಲಗೆಡಿಸುತ್ತಿರುವರೆಂದೂ ವಿದೇಶೀಯತೆಯನ್ನು ಬಿತ್ತಿ ಭಾರತೀಯತೆಯನ್ನು ನಾಶಪಡಿಸುತ್ತಿರುರೆಂದೂ ತಮಿಳಿನ ಸ್ತುತಿಪಾಠಕರೆಂದೂ ಲೊಟ್ಟೆಂದುಲೊಸಕೆಂದು ಪೊರೆಗಣ್ಣಿನ ಪಿಚ್ಚರು ನಾಲಗೆ ನುಲಿದಂತೆಲ್ಲ ಮಾತನಾಡಿದರು. ಆದರೆ ಸುಜ್ಞಾನಿಗಳೆಂದು ಪ್ರಖ್ಯಾತರಾದ ಬಿ. ಎಸ್. ಕೀಲ್, ಇ. ಪಿ. ಮೆಟ್‌ಕಾಫ್ ಮುಂತಾದವರು ಶ್ರೀಯವರು ಸಾರಸ್ವತ ಚಟುವಟಿಕೆಗಳನ್ನು ಮೆಚ್ಚಿ ಅವರು ಕನ್ನಡದ ಮುಂಬೆಳಕಿನ ಹರಿಕಾರರೆಂದೂ ರಾಷ್ಟ್ರೋತ್ಥಾನದ ಅಧ್ವರ್ಯುಗಳೆಂದೂ ಇದೇವೇಳೆಗೆ ಭರವಸೆಯನ್ನು ವ್ಯಕ್ತಪಡಿಸಿದ್ದರು. ವಾಸ್ತವವಾಗಿ ಶ್ರೀಯವರು 1929ರ ವೇಳೆಗೆ ಅವರ 45ನೇ ಹರೆಯಕ್ಕೆ ಕನ್ನಡ ಸಾಹಿತ್ಯ ಅವರ ಕಾವ್ಯಮೀಮಾಂಸೆ, ದ್ರಾವಿಡದ ಹಿನ್ನೆಲೆಯಲ್ಲಿ ಕನ್ನಡವ್ಯಾಕರಣ ಛಂದಸ್ಸು. ಹಳಗನ್ನಡ ಪೂರ್ವದ ಹಳಗನ್ನಡ– ಅದರ ತಳಬುಡ ಸಂಬಂಧಪಟ್ಟ ಮತ್ತಿತರ ಹಲವು ಹತ್ತು ವಿಷಯಗಳಲ್ಲಿ ಅವರಿಗೆ ಅಪಾರವಾದ ತಿಳಿವಳಿಕೆಯಿತ್ತು. 1926ಕ್ಕೆ ಹಿಂದೆ ಅವರು ಕನ್ನಡದ ಗುಪ್ತಭಕ್ತರಾಗಿದ್ದರೆಂಬ ಮಾತಿನಲ್ಲಿ ಸ್ವಲ್ಪ ಅತಿಶಯೋಕ್ತಿಯಿರುವುದೆನ್ನಬಹುದಾದರೂ 1929ರ ವೇಳೆಗಾಗಲೇ ಅವರು ಕನ್ನಡ ವಿಸ್ತಾರದಲ್ಲಿ ಸೂರ್ಯನಂತೆ ದೇದೀಪ್ಯಮಾನವಾಗಿದ್ದರೆಂಬುದರಲ್ಲಿ ಅತಿಶಯದಲವಲೇಶವೂ ಇಲ್ಲ. ಹೀಗೆ ಶಾಸ್ತ್ರ-ಸಾಹಿತ್ಯ ಈ ಎರಡೂ ಉತ್ತುಂಗ ಶಿಖರಗಳನ್ನು ತನ್ನ ಒಂದೊಂದೂ ಪಾದದಿಂದ ಮೆಟ್ಟಿನಿಂತ"

ಶ್ರೀಯವರ ಕೊಲಾಸಲ್ ಭಂಗಿಯೇ ಗ್ರಂಥಸಂಪಾದನ ಶಾಸ್ತ್ರಕ್ಕೆ ಬೇಕಾದ ನಿಲುವು. ಅವರ ಆಳ ಅಗಲವನ್ನು ಅಳೆಯುವ ನೋಟ ಮತ್ತು ಧಾಷ್ಟ್ಯ ಅವರಿಗಿತ್ತು, ಇಷ್ಟಾದರೂ ಅವರು ಈ ಕ್ಷೇತ್ರದಲ್ಲಿ ಅಮ್ಲಜನಕದಂತೆ ಹತ್ತಿ ಉರಿಯುವುದಕ್ಕೆ ಸಹಾಯಕರಾಗಿದ್ದರೇ ಹೊರತು ತಾವೇ ಹತ್ತಿ ಉರಿಯಲಿಲ್ಲ. ಹೀಗಾದದ್ದು ಅವರ ಅಂದಿನ ಇನ್ನಿತರ ಕಾರ್ಯಭಾರದ ಒತ್ತಡಗಳಿಂದಲೇ ಹೊರತು ಅವರ ಅಂತರ್ನಿಹಿತ ಶಕ್ತಿಸಾಮರ್ಥ್ಯಗಳ ಮಿತಿಯಿಂದಲ್ಲ.

### ಕನ್ನಡ ಸಾಹಿತ್ಯ ಚರಿತ್ರೆ : 5ನೇ ಭಾಗ : ಮೈ.ವಿ.ವಿ. 1947

**ಅಜಿತಪುರಾಣ :**

ಮತಿಗೆಟ್ಟು ಜೀವ ಧರ್ಮಾ । ಮೃತಮಂ ಜೀವಿಸದಧ ರ್ಮಮಂ ಸೇವಿಸಿದು
ರ್ಗತಿಬಂದೀ ಜವನೆಂಬಜಿ । ಪಿ[1] ತಿಂಬ[1] ದೈವಕ್ಕೆ ಪೋಗಿ [2]ಪಾಟಿಂಬಡುವೈ[2]

(ಎಂ. ಎ. ರಾ. ಅಜಿತಪು. 2–58)

---

1. ತಿನ್ಬ (ಶ್ರೀ) 2. ಪಾಟಿಂಬಿಡುವೈ (ಶ್ರೀ)

ಎನಿತೆನಿತು ಕಱಿದ ಭವಮಂ । ನೆನೆದಪೆಯೆನಿತೆನಿತು ಭವದ ಬಂಧುಗಳಂ [1]ನೀಂ[1]
ನೆನೆದಪೆಯೆನಿತೆನಿತೊಡಲಂ । ನೆನೆದಪೆಯೆಲೆ ಜೀವ ನೀನೆ ಪೇೞ್ ಪವಣೊಳವೇ
(ಎಂ. ಎ. ರಾ. ಅಜಿತಪು. 2–60)

ಎನಿತಂ [2]ಕುಕ್ಕಾಟಿಗುದಿದಪೆ[2] । ಎನಿತಂ [3]ತಕ್ಕಳಗಟಿಲ್ದಪೈ[3] ಜೀವನೆ ನೀ
ನೆನಿತಂ ಮಲ್ಮಲ ಮಱುಗುವೆ । ಯೆನಿತಂ ಸಂಸಾರದೊಳಗೆ [4]ತಿಱ್ಱನೆ[4] ತಿರಿಪೈ.
(ಎಂ. ಎ. ರಾ. ಅಜಿತಪು. 2–61)

[5]ಪೆಱವೊಳವುಳ್ಳುವಿಲ್ಲಿ[5] ಯೊಳವಾಗಮ ಭಾಷೆಗಳಿಲ್ಲಿಯುಳ್ಳುವಂ
[6]ಪೆಱವುಳಿ[6] ಕಾಣಲಾಗದೆನೆ ಪಂಪನ ಪೊನ್ನನ ಪೇೞ್ದ ಕಬ್ಬದೊಳ್
ನೆಱ[3]ಯೆ ಪರಿಸ್ಫುಟಂ ನೆಱಿಯುದಿರ್ದುದುಮಂ ನುಡಿದೆಯ್ದೆ ಬಲ್ಮೆ ಕ
ಣ್ದೆಱಿಯೆ ನೆಗೞ್ಚಿದಂ ಕವಿಚತುರ್ಮುಖನಾಗಮವೇದಿಯಪ್ಪುದಂ
(ಎಂ. ಎ. ರಾ. ಅಜಿತಪು. 12–32)

ಕವಿಜನದೊಳ್ [7]ರತ್ನತ್ರಯಃ । ಪವಿತ್ರಮೆನೆ[7]ನೇಗೞ್ದ ಪಂಪನುಂ ಪೊನ್ನಿಗನುಂ
ಕವಿರತ್ನನುಂ...
(ಎಂ. ಎ. ರಾ, ಅಜಿತಪು 12–37)

ಬೆಳುಗಲಿ[8]ಯಯ್ಯಾ ಜಱೊಳ । ಗ್ಗಳ[8] ಮೆಱಿಸುವ ಜಂಬುಖಂಡಿ[9]ಯೆಪ್ಪತ್ತರ್ಕಂ[9]
ತಿಳಕಮೆನೆ ನೆಗೞ್ದ ಮುದುವೊಳಿ । ಲೊಳೆಪುಟ್ಟಿ
(ಎಂ. ಎ. ರಾ, ಅಜಿತಪು. 12–45)

**ಗದಾಯುದ್ಧ :**

ಎನಗಿರ್ವರುಮೆರಡು ತೋೞ । ಳೆನಗಿರ್ವರುಮೆರಡು [10]ತಣ್ಣಳೆನ್ನರೆ[10] ಯುವರಾ
ಜನುಮಂಗರಾಜನುಂ... 3–7
ಇನನಂದನ ವಿಯೋಗಮೆಂತಾದು[11]ದಱಿಯೆನಂಗಾಧಿಪತಿ[11] (5-24)
ಕಲ್ಲೆರ್ದೆತನದಿಂದೆನ್ನಂತು [12]ಬರ್ದ[12]ನಾವನುಮೊಳನೇ (5-28)

---

1. ನೀನ್ (ಶ್ರೀ). 2. ಕುಕ್ಕುಟಿಗುದಿದಪೆ (ಶ್ರೀ). 3. ಕಕ್ಕಟಿಗಟಿಲ್ದಪೈ (ಶ್ರೀ). 4. ತಿಱ್ಱನೆ (ಶ್ರೀ). 5. ಪೆಱಉಟಿಯುಳ್ಳುವಿಲ್ಲಿ (ಶ್ರೀ). 6. ಪೆಱಉಟಿ (ಶ್ರೀ). 7. ರತ್ನತ್ರಯ ಪವಿತ್ರರೆನೆ (ಶ್ರೀ). 8. ಯಯ್ಯಾಜಱೊಳಗ್ಗಳ (ಶ್ರೀ). 9. ಯೆಪ್ಪತ್ತರ್ಕಂ (ಶ್ರೀ). 10. ಕಣ್ಗಳನ್ನರೆ (ಶ್ರೀ). ಕಣ್ಗ[ಳ]ನ್ನರೆ (T.N.S) 11. ಏ : ಇಲ್ಲಿ ಎಂ.ಎ.ರಾ.ರವರು ಕೊಟ್ಟಿದ್ದ ಶಬ್ದಾನುಶಾಸನದ ಪಾಠವನ್ನು ಶ್ರೀಯವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸ್ವೀಕರಿಸಿರುವರು. (T.N.S) ದಯ್ಯಯೆನಗಂ ನಿನಗಂ (ಶಬ್ದಾನುಶಾಸನ. ಸೂ. 45) ದಯ್ಯ ಎನಗಂ ನಿನಗಂ (ಶ್ರೀ). 12. ಬಜ್ದ (ಶ್ರೀ) ಬರ್ದ (T.N.S)

ಗದಾಯುದ್ಧ ಸಂಗ್ರಹ ಸಂಪಾದಕ ತೀ. ನಂ. ಶ್ರೀಕಠಯ್ಯ. 3ನೇ ಮುದ್ರಣ 1963. ಈ ಸಂಪಾದಿತ ಗ್ರಂಥವನ್ನು ಟಿ. ಎನ್. ಎಸ್. ರವರು ರನ್ನನ ಸಹಸ್ರಮಾನೋತ್ಸವ ಸಂದರ್ಭದಲ್ಲಿ "ಕನ್ನಡದ ರಕ್ಷಾಮಣಿ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರ ನೆನಪಿಗೆ ಶಿಷ್ಯನೊಬ್ಬನ ಭಕ್ತಿಯನಿವೇದನ" ಎಂದು ಅರ್ಪಿಸಿದ್ದಾರೆ–1949 ರಲ್ಲಿ.

**ಮಲ್ಲಿನಾಥಪುರಾಣ :**

ಕವಿತಾಪರಿಣತೆಯಂ [1]ವೆಜಿದೀ[1] ಕಾವ್ಯರಸಾರ್ಣವ ಪೂರ್ಣಚಂದ್ರನಭಿನವಪಂಪಂ

(ಎಂ. ಎ. ರಾ. 1–39)

ಕಳಕಂಠಂ [2]ಪುಗಿಲೆಂಬೀ[2] ಕಳನಿನದಂ

(ಎಂ. ಎ. ರಾ. 6–10)

ಭವಾಂಭೋಧಿಯ ತಡಿಯುನೆಯ್ದಿಸೆನ್ನಂ ನಯನಿಕ್ಷೇಪ [3]ಪ್ರಮಾಣವಾತ್ರದಿನರ್ಹಾ[3]

(ಎಂ. ಎ. ರಾ. 10–120)

**ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ : ಕಾವ್ಯಾಲಯ 1962.**

**ಕರ್ಣಾಟಕ ಕವಿರಾಜಮಾರ್ಗಂ :**

2 Ed. 1) K. B. Pathak–in 1898 for the Bibliotheca carnatica series. A. Venkata Rao & H. Sesha Aiyangar university oriental Research Institute, Madres, 1930.

"The different readings are given at the end in two lists and not at the foot of each page of the text. There is however, no reference in the text to suggest that there are these readings to consider.

"It is not clear from the remarks on page XXIV of the preface regarding the manuscripts whether the editors had before them any additional mss, besides those on which Mr. Pathaks' edition was based. The present editors have evidently

1. ಮೆಜಿದಂ (ಶ್ರೀ) ಮೆಜಿದೀ (ಕ.ವಿ.ವಿ. 1974). 2. ಪುಗಲೆಂಬೀ (ಶ್ರೀ) ಪುಗಿಲೆಂಬೀ (ಕ.ವಿ.ವಿ. 1974). 3. ಪ್ರಮಾಣಪಾತ್ರದಿನರ್ಹಾ (ಶ್ರೀ). ಪ್ರಮಾಣಮಾತ್ರದಿನರ್ಹಾ (ಕ.ವಿ.ವಿ: 1974) ವಿ : ಪಾತ್ರ ಎಂಬ ಪಾಠಾಂತರ ಮೂರು ಉತ್ತಮ ಪ್ರತಿಗಳಲ್ಲಿ ಸಿಕ್ಕಿದ್ದರೂ ಕ.ವಿ.ವಿ. ಯವರು ಅದನ್ನು ಕೈಬಿಟ್ಟಿದ್ದಾರೆ.

followed one of the mss, instead of making up the text from the best readings available.

ಎರಡು ಪರಿಷ್ಕರಣವನ್ನೂ ಹೋಲಿಸಿ ಉಳಿದುಕೊಂಡಿದ್ದ ತಪ್ಪುಗಳನ್ನು ತೋರಿಸಿ ಊಹಾತ್ಮಕ ಪರಿಷ್ಕರಣದಿಂದ ತಿದ್ದಿರುವರು ಶ್ರೀಯವರು ನೋಡಿ—

(1) [1]ಕೇಡಡಸಿದೊಡಂ ಬಗೆಯುಂ । ಕೂಡದು[1], ಕೂಡಿದುದುಮಱಿದು ವಿಪರೀತಮುಮಂ । ಮೂಡುಗುಮದಱಿಂ ಕರ್ಮಂ । ಕ್ಕೋಡಿ ಬರ್ದುಂಕಲ್ಕೆ ಕಲ್ತರಾರ್ ಬಿನ್ನಣಮಂ (ಪಾಠಕ್ 7)

(2) ವಚನಮೇಕ ಬಹುಕ್ರಮದಿಂ[2]ದೆರಱಿತ್ತಱ । ಕ್ಕಾರಯೆ[2] ಪೇೞ್ವಿಂ (P. 23, st. 1114, lines 3-4.)

**ಮಣಿಭೂಷಣ ವೃತ್ತ :**

(3) ಸಾದುಗೆತ್ತು ಬಗೆಯಾದವನಾ[3]ನೊಡನಟ್ಟಿದೇ[3]
ನಾದಮಾನುಮಱಿಮಾನಸನಾಗದೆ ಮಾಳದೊಳ್
[4]ಮೋದದಾನುಡುವ ಸೀರೆಗಮೆನ್ನನದಿರ್ಪ ಬಾ
ರಾದೆ[4] ಪೋದೆ[5]ಡೆಯೊಳೇ ತಡೆದಾನವನೆಂದಪೆಂ[5] (1–128)

ಇಂತು ಪೇೞ್ದೊಡಿದು ಗೌರವದೋಷದ ಮಾಱ್ಕೆ (1–129) ಎನ್ನುವನು ನೃಪತುಂಗ. ನಿದರ್ಶನಗಳು :

ಎ. ಬಗೆಯಾದೆ

ಬಿ. ಅವನಾನ್

ಸಿ. ಒಡನಟ್ಟಿದೇನ್ (ಶ್ರೀ) ಓಡಲಟ್ಟಿದೇನ್ (ಪಾ) ಒಡನಟ್ಟಿದೆನ್ (ವೆಂ)

ಡಿ. ಬಾರದೆ (ಶ್ರೀ) ಬಾರದೆ (ಪಾ) (ವೆಂ)

ಇ. ತಡೆದಾನ್ (ಶ್ರೀ) (ಪಾ) (ವೆಂ)

ಬಗೆಯಾದೆ ಬಾರಾದೆ — ಎಂಬ ರೂಪಗಳ ಬಗ್ಗೆ "really the negative farms were the older forms found in inscriptions and nearer the Tamil forms which still persist to our days. ಅವನಾನ್ ಮುಂತಾದ

1: ಕೇಡದಸಿದಂದು ಬಗೆಯುಂ ಮಾಡದು (ಎ. ವೆಂಕಟರಾವ್) ಕೇಡಡಸಿದಂದು ಬಗೆಯುಂ ಕೂಡದು (ಶ್ರೀ). 2. ದೆರಱಿಱತ್ತಾರಯೆ (ಶ್ರೀ). 3. ನೋಡಲಟ್ಟಿದೇ (ಪಾ) ನೋಡಲಟ್ಟಿದೆ (ಸೀ) ನೊಡನಟ್ಟಿದೆ (ವೆಂ). 4. ಮೋದದಾನುವ ಸೀರೆಗಮೆನ್ನನರ್ಪಿಬಾರದೆ (ಪಾ) (ಸೀ) ಮೋದದಿಂ ನುಡುವ ಸೀರೆಗ ಮನ್ನನದಿರ್ಪ ಬಾ (ರದೆ 1) (ವೆಂ). 5. (ಪಾ) (ಶ್ರೀ) (ನಾಯೆ)ಡೆಯೊಳಂ ತಡೆದಾನವನಂದಮಂ (ವೆಂ)ಡೆಯೊಳೆ ತಡೆದಾನವನೆಂದಪಂ (ಸೀ).

ವಿಭಕ್ತಿಯ ದೀರ್ಘರೂಪಗಳನ್ನು ಸಮರ್ಥಿಸಿಕೊಳ್ಳಲು ಕೇಶಿರಾಜ, ಕಿಟ್ಟೆಲನ ವ್ಯಾಕರಣ, ಕವಿರಾಜಮಾರ್ಗ, ಕಬ್ಬಿಗರಕಾವ್ಯ, ಛಪ್ಪಾತೆಲಂತ ಮುಂತಾದವರನ್ನು ಉಲ್ಲೇಖಿಸುತ್ತಾರೆ—ಶ್ರೀಯವರು.

(1) ಆರ್. ನರಸಿಂಹಾಚಾರ್ (1903)

**ಕಾವ್ಯಾವಲೋಕನ : ಪ್ರ :** (1) ಓರಿಯಂಟಲ್ ಲೈಬ್ರರಿ (9-8-1939) ಬಸವಲಿಂಗಯ್ಯ

(2) ಧಾರವಾಡದ ವಿದ್ಯಾವರ್ಧಕ ಸಂಘ (30-12-39) ಶಿ. ಶಿ. ಬಸವನಾಳ್

ಎ. ಅಂ ಸೀಂ ಎಂಬ ರೂಪಗಳನ್ನು ಒಪ್ಪದೆ ಅನ್ ಸೀನ್ ಎಂದಿರಬೇಕೆಂದೂ
ಎಂಗುಂ ತಿಂಬುಂ ,, ,, ಎನ್ನುಂ ತಿನ್ಬಂ ,,
ನೆರೆಪ್ಪು ಪರೆಪ್ಪು ತೆಱಿಪ್ಪು ,, ನೆರಪ್ಪು, ಪರಪ್ಪು, ತೆಱಪ್ಪು ,,
ಱ ಟ ಪ್ರಯೋಗದ ಬಗ್ಗೆ ಅನುಮಾನ ಬಂದರೆ ತಮಿಳನ್ನು ನೋಡಬೇಕೆಂದೂ ಬುದ್ಧಿ ಹೇಳುತ್ತಾರೆ.

ಬಿ. ಅರೆ ಉೞಿ, ಪೆಱಿವುೞಿ ಎಂಬ ಧಾರವಾಡದ ಪಾಠಗಳನ್ನು ಒಪ್ಪಿ— ಸನ್ನೂಲಿನ 302ನೇ ಸೂತ್ರವನ್ನು ಉಲ್ಲೇಖಿಸಿ ಅರೆಉಳಿ ಮತ್ತು ಪೆಱಿವುಳಿ ಎಂಬ ಮೈಸೂರು ಪಾಠಗಳನ್ನು ನಿರಾಕರಿಸುತ್ತಾರೆ.

ಸಿ. ಮೈಸೂರು ಧಾರವೆರಡರ ಕಿಳಿಜ್ ಎಂಬ ಪಾಠವನ್ನು ನಿರಾಕರಿಸಿ ಕೇಶಿರಾಜನ ಧಾತುಪಾಠವನ್ನು ಉಲ್ಲೇಖಿಸಿ ಅದು ರಾಂತವಾಗಿರಬೇಕೆನ್ನುತ್ತಾರೆ. ಪಾಠಾಂತಗಳನ್ನು ವಿಚಕ್ಷಣತೆಯಿಂದ ಆಯ್ದುಕೊಳ್ಳುವುದು ಒಳ್ಳೆಯದು–ಸಂದೇಹಕ್ಕವಕಾಶ ಇರುವ ಕಡೆ ಕೊಡಬೇಕು ಪ್ರತಿಮಾಡುವವರ ಪ್ರಮಾದಗಳನ್ನೆಲ್ಲಾ ತೋರಿಸುವುದರಿಂದ ಪ್ರಯೋಜವಿಲ್ಲ" ಎಂದು ಬುದ್ಧಿಹೇಳುತ್ತಾರೆ. ತಮಗೇ ಅನುಮಾನ ಬಂದಕಡೆ ಧಾರವಾಡ ಮೈಸೂರೆರಡರ ಜವನಿಟರಕ್ಕೆ ಪಾಠವನ್ನೆತ್ತಿಕೊಂಡು ಶ್ರವಣಬೆಳ್ಗೊಳ ಶಾಸನದಲ್ಲಿನ "ಜವನಿಟ್ಟುರಕ್ಕೆ" ಎಂಬುದರತ್ತ ಗಮನ ಸೆಳೆದು ಯಾವುದು ಸರಿಯೆಂದು ಕೇಳುತ್ತಾರೆ.

ಹೀಗೆ ಜಟಿಲವಾದ ಹಲವು ವಿಚಾರಗಳನ್ನು ಶ್ರೀಯವರು ತಿಳಿದವರಾಗಿದ್ದರೂ, ಆ ಕಡೆಗೆ ಅವರು ತಮ್ಮ ವೇಳೆಯನ್ನು ಕಳೆಯಲಿಲ್ಲ. ಕಾರಣ ಕಾವ್ಯಾವಲೋಕನದ ಕುರಿತ ಅವರ ವಿಮರ್ಶೆಯ ಕೊನೆಯ ಅವರ ಮಾತನ್ನೇ ಕೇಳಿ "ಶಾಸ್ತ್ರೀಯವಾದ ಕೆಲವು ವಿಚಾರಗಳನ್ನು ನಮಗೆ ತಿಳಿದಮಟ್ಟಿಗೆ ಪರಿಶೀಲಿಸಿರುತ್ತೇವೆ. ಈ ವಿಸ್ತಾರ ಸಾಮಗ್ರಿಯೆಲ್ಲಾ ಮುಂದೆ ಬೇಕೆ? ಲಕ್ಷಣ ಪ್ರಪಂಚದಲ್ಲಿ ಬಿಡುವುದನ್ನು ಬಿಟ್ಟು ಹೊಸತನ್ನು ಸೇರಿಸಿ ಹೊಸ ಶಾಸ್ತ್ರವನ್ನು ಹೊಂದಿಸಿಕೊಂಡು ಸುಲಭ ಸರಳರೀತಿಯನ್ನು

ಹಿಡಿಯಬೇಡವೇ ಎಂಬುದಾಗಿ ವಿದ್ವಾಂಸರು ಯೋಚಿಸಬೇಕಾಗಿದೆ" — ಎನ್ನುತ್ತಾ ನನ್ನೂಲಿಂದ ಒಂದು ಮಾತನ್ನು ಉಲ್ಲೇಖಿಸಿ ತಮ್ಮ ವಿಮರ್ಶೆಯನ್ನು ಮುಗಿಸುತ್ತಾರೆ : ಆ ಮಾತು ಹೀಗಿದೆ : ಪೞ್ಯದುನ ಕೞಿದಲುಂ ಪೊಸದುನ ಪುಗದಲುಂ। ಪೞವಲ ಕಾಲವಗ್ಗೈಯಿನಾನೇ—(ಹಳೆಯುದು ಕಳೆದು ಹೋಗುವುದು, ಹೊಸವುಬುದು ಹೋಗುವುದೂ ತಪ್ಪಲ್ಲ ; ಕಾಲದ ಬಗೆಯಿಂದ).

ಶ್ರೀಯವರು ಇಂಥ ಎಚ್ಚರಿಕೆಯ ಮಾತನ್ನು ಎಷ್ಟೇ ಆಡಿದರೂ ಅವರಿಗೇ ಎಚ್ಚರವಿಲ್ಲದೆ ಅವರ ಬಹು ಬೆಲೆಬಾಳುವ ಉತ್ತಮ ರಚನೆಗಳ ಮಾಧ್ಯಮ ಹೊಸಗನ್ನಡವಾಗಿರದೆ ಹಳಗನ್ನಡವೇ ಆಗಿತ್ತೆನ್ನುವುದು ಗಮನಿಸಬೇಕಾದ ವಿಚಾರ. ಅವರ ಗದಾಯುದ್ಧ (1926). ಅಶ್ವತ್ಥಾಮನ್ (1929), ಪಾರಸೀಕರು (1935) ಎಂಬ ಮೂರು ನಾಟಕಗಳೂ, ಕನ್ನಡ ತಾಯಿ ನೋಟ (1936), ಬಾನ್‌ಕೊಂಡ ಕೃಷ್ಣನ್ (1940), ಶುಕ್ರಗೀತೆ (1941), ಪಂಪನ ಒರತೆ (1941) — ಅವರ ಕಟ್ಟಕಡೆಯ ರಚನೆಯಾದ 'ಹಾರೈಕೆ' (1945) ಈ ಎಲ್ಲಾ ಭಾವಗೀತೆಗಳೂ ಹಳಗನ್ನಡದಲ್ಲೇ ಬರೆದುವು. ಅವರು ಮಾತಾಡಿದ್ದೆಲ್ಲಾ ಹೊಚ್ಚ ಹೊಸಗನ್ನಡ. ಬರೆದದ್ದೆಲ್ಲಾ ಮುಖ್ಯವಾಗಿ ಅಚ್ಚ ಹಳಗನ್ನಡ. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಅವರು ಎಚ್ಚರಿದ್ದಾಗ ಹೊಸಗನ್ನಡವನ್ನೂ, ಕನಸುಕಾಣುವಾಗ "ಎರಡಱುನೂಱಱ ತಿರುಳಕನ್ನಡ"ವನ್ನು ಅವರ ಉಸಿರು ಉಸಿರುತ್ತಿತ್ತು.

ಅವರ ಹಳಗನ್ನಡದ ಅಂದವನ್ನೂ ಬಂಧವನ್ನೂ ಛಂದವನ್ನೂ ಸ್ವಲ್ಪ ಕೇಳಿ ;

ಒರ್ನಾಡು ಕೂಡುಗೆ ತಾನೇ ಒರ್‌ಪೆರ್‌ಲೋಕಂ
ಕರ್ನಾಡು ಕಂಡು ಕಾಣ್ಕೆಗಳನ್.
ಕನ್ನಡ ಕಣ್ಮಣಿಗಳ್ ಪೆಣ್ಮಣಿಗಳ್ ಕಟ್ಟಾಳ್ಗಳ್
ಚೆನ್ನನೆಯ ಬಾಳ್ಗೆ ಬೆಳಕಕ್ಕೆ
ಕನ್ನಡ ತಾಯ್‌ವಾಳ್ಗೆ ವಾಳ್ಗೆ ಚೆಂದಮಿಳುಂ
ಕೂಡದೀ ಚೆನ್ನೈ[1]ಮಾನಾಡು[ಂ][1]
[2]ಪಳವಾನೇ[2] ಪೊಸವಿಲರೇ ತಳಿಮಳೆಯೋ ಚೆಲ್ವು ಬೆಳೆಯೋ
ಒಳಗಣ್ಣ[3]ಪಾರ್ವೆಯೋ ನೆನೆಯಿರಿ ನಮ್ಮ [4]ಪೊಲ[ನ]ಂ[4]
ಶ್ರೀಯೆಂಬನೊರ್ವನ್ ಅಡಿಯೆನೆನ್ ಕಾಯೆಂದು
ಬೇಳ್ಪನ್ ಪರಮಾತ್ಮನನ್.



ಟಿ : ಪಳವಾನೇ, ಒಳಗಣ್ಣಪಾರ್ವೆಯೋ ಎಂಬ ಪದಗಳು 1948ರ ಮುದ್ರಣದಲ್ಲಿ ಸರಿಯಾಗಿದ್ದು 1976ರ ಎರಡನೇ ಮುದ್ರಣದಲ್ಲಿ ಪಾಳವಾನೇ ಒಳಗಣ್ಣಾ ಪಾರ್ವೆಯೋ ಎಂದು ತಪ್ಪು ಅಚ್ಚಾಗಿದೆ. ಮಾನಾಡು ಮತ್ತು ಪೊಲನುಂ ಎಂಬ ಪದಗಳನ್ನು ಅನನ್ವಯ ವಿಭಕ್ತಿ ಉ ರೂಪದಲ್ಲಿ 1976ರ ಮುದ್ರಣದಲ್ಲೇ ಅಲ್ಲ 1948ರಷ್ಟು

ಹಿಂದಿನ ಮುದ್ರಣದಲ್ಲೇ ಕಾಣಿಸಿಕೊಂಡಿವೆ—ಅವುಗಳ ನಿಜರೂಪ ಮಾನಾಡುಂ ಮತ್ತು ಪೊಲನುಂ ಎಂದಿರಬೇಕಾಗಿತ್ತು. ಇದು ಅಚ್ಚಿನ ತಪ್ಪೋ ಅಚ್ಚುಹಾಕಿಸಿದ ವಿದ್ವಾಂಸರ ತಪ್ಪೋ ಎಂದು ಮಹಜರು ಮಾಡುವುದು ಇಲ್ಲಿಯ ಉದ್ದೇಶವಲ್ಲ—ಶ್ರೀಯವರ ಅಂದಿನ ಆ ಭಾಷಾವೈದುಷ್ಯ ಇಂದಿಗೆ ಎಟುಕದ ವಿಚಾರವೆಂಬುದಷ್ಟೇ ಪ್ರಸ್ತುತವಾದ್ದು. ನಮ್ಮ ಪ್ರಾಚೀನ ಕವಿಗಳ ಮಹಾಕಾವ್ಯಗಳು ಇನ್ನೂ ಪರಿಷ್ಕಾರವಾಗಬೇಕಾದ ಈ ಕಾಲಕ್ಕೆ ಇದು ಶೋಚನೀಯ.

**ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ–ಪುಟ ೨೦೩**

"ವೆಂಕಣ್ಣಯ್ಯನವರು ಸ್ವರ್ಗಸ್ಥರಾದಾಗ ಶ್ರೀಯವರು ಮಾತನಾಡುತ್ತ ಹೆಚ್ಚು ಮಾತು ಹೆಚ್ಚು ಬರಹ ಅವರಿಗೆ ಸೇರದು...ಶ್ರೀ ವೆಂಕಟನಾರಾಯಣಪ್ಪನವರೊಂದಿಗೆ ಪಂಪಭಾರತ ಮತ್ತು ಇಂಗ್ಲೀಷ್ ಕನ್ನಡ ನಿಘಂಟುವಿನ ಕೆಲಸವೂ, ನನ್ನೊಡನೆ(ಶ್ರೀಯವರೊಡನೆ) ಹರಿಶ್ಚಂದ್ರ ಕಾವ್ಯಸಂಗ್ರಹ, ಕರ್ನಾಟಕ ಕಾದಂಬರೀಸಂಗ್ರಹ, ಕನ್ನಡ ಕೈಪಿಡಿ, ಗದುಗಿನ ಭಾರತಗಳ ಸಂಪಾದನೆಯೂ; ತಾವೇ ಸಂಪಾದಕರಾಗಿ ಪ್ರಕಟಿಸಿದ ಬಸವರಾಜ ದೇವರ ರಗಳೆಯೂ ಅವರ (ವೆಂಕಣ್ಣಯ್ಯನವರ) ಸಾಹಿತ್ಯಸೇವೆಗೆ ಹೆಗ್ಗುರುತುಗಳಾಗಿ ನಿಲ್ಲುವುವೆಂದು ನಂಬಿದ್ದೇನೆ" ಎಂದು ಹೇಳುತ್ತ ನಮಗೆ ಅವಿದಿತವಾಗಿದ್ದ ಒಂದು ವಿಚಾರವನ್ನು ತೋಡಿಕೊಂಡಿದ್ದಾರೆ. ಅದೆಂದರೆ–ಶ್ರೀಯವರು–ದಿವಂಗತ ವೆಂಕಣ್ಣಯ್ಯನವರು ಸೇರಿ ಗದುಗಿನ ಭಾರತವನ್ನು ಸಂಪಾದನೆ ಮಾಡಿದ್ದರು ಎಂಬುದು. ವೆಂಕಣ್ಣನವರು ಶ್ರೀಯವರೊಡನೆ ಸೇರಿಕೊಂಡು ಸಂಪಾದಿಸಿದ ಕಿನ್ನಲಾದ ಹರಿಶ್ಚಂದ್ರ ಕಾವ್ಯಸಂಗ್ರಹ (1931) ಮತ್ತು ಕರ್ನಾಟಕ ಕಾದಂಬರೀ ಸಂಗ್ರಹ (1933) ಪ್ರಕಟವಾಗಿವೆ. ಅವುಗಳ ಮುನ್ನುಡಿಯಲ್ಲಿ ಸ್ವತಃ ಬಿ.ಎಂ. ಶ್ರೀಯವರು ಈ ಗ್ರಂಥಗಳನ್ನು ಪರಿಷ್ಕರಿಸುವಲ್ಲಿ ತಮ್ಮ ಪಾತ್ರವೇನು ಎಂಬುದನ್ನು ಕಿಂಚಿತ್ತಾದರೂ ಹೇಳಿಕೊಳ್ಳದೆ ಅವರು ಆ ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆಯ ಪ್ರಧಾನ ಸಂಪಾದಕರಾಗಿದ್ದುದರಿಂದ ಆ ಮಾಲೆಯ ಉದ್ದೇಶ ಕಾರ್ಯವಿಧಾನಗಳನ್ನು ಕುರಿತ ಮಾತನ್ನಷ್ಟೇ ಆಡಿರುವರು, ಆದರೆ ಕರ್ಣಾಟಕ ಕಾದಂಬರೀ ಸಂಗ್ರಹದಲ್ಲಿ ಅದರ ಸಂಪಾದಕರಾದ ಟಿ.ಎಸ್. ವೆಂಕಣ್ಣಯ್ಯನವರು ಪೀಠಿಕೆಯ ಕೊನೆಗೆ "ಈ ಗ್ರಂಥವನ್ನು ಸಂಗ್ರಹಿಸುವುದರಲ್ಲಿಯೂ ಅದರ ಪಾಠವನ್ನು ಗೊತ್ತುಮಾಡುವುದರಲ್ಲಿಯೂ, ಅದರ ಮುದ್ರಣಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳಲ್ಲಿಯೂ ಉಚಿತವಾದ ಸಲಹೆಗಳನ್ನಿತ್ತು ವಿಶೇಷವಾಗಿ ಸಹಾಯ ಮಾಡಿದ "ಬಿ.ಎಂ. ಶ್ರೀಯವರಿಗೆ ತಮ್ಮ ಮೊದಲ ಕೃತಜ್ಞತೆಯನ್ನು ಸಮರ್ಪಿಸಿರುವರು. ಎರಡನೆಯದಾಗಿ ಸಂಪಾದನ ಕಾರ್ಯದಲ್ಲಿ ತಮಗೆ ನೆರವು ನೀಡಿದ T. N. S. ಮತ್ತು D. L. N. ಅವರನ್ನೂ ಸ್ಮರಿಸಿಕೊಂಡಿರುವರು. ಹರಿಶ್ಚಂದ್ರ ಕಾವ್ಯ ಸಂಗ್ರಹಕ್ಕಾದರೋ ವೆಂಕಣ್ಣಯ್ಯನವರ ಜೊತೆಗೆ ಎ.ಆರ್.ಕೃ, ಅವರ–ಪೀಠಿಕೆ ಬರೆದವರಾದುದರಿಂದಲೂ–ಹೆಸರೂ ಸಂಪಾದಕರೆಂದು ಸೇರಿದೆ.

ಇದರಿಂದ ವೆಂಕಣ್ಣಯ್ಯನವರಿಗೆ ಕಾದಂಬರಿ ಸಂಗ್ರಹವನ್ನು ಸಂಪಾದಿಸುವಾಗ ವ್ಯಾಪಕವಾದ ರೀತಿಯಲ್ಲಿ ಬಿ.ಎಂ. ಶ್ರೀಕಂಠಯ್ಯನವರೂ ಮಿತರೀತಿಯಲ್ಲಿ T. N. S. ಮತ್ತು D. L. N. ರವರೂ ಸಹಾಯಮಾಡಿದ್ದರೆ, ಕಾದಂಬರೀ ಸಂಗ್ರಹವನ್ನು ಸಂಪಾದಿಸುವಾಗ ಅದೇ ವ್ಯಾಪಕವಾದ ರೀತಿಯಲ್ಲಿ ಶ್ರೀಯವರೂ, ಒಂದು ಒಪ್ಪಂದದ ರೀತಿಯಲ್ಲಿ ಎ.ಆರ್.ಕೃ. ಅವರೂ ಸಹಾಯ ಮಾಡಿರಬೇಕು. ಏನೇ ಆಗಿದ್ದರೂ ಆ ಎರಡೂ ಗ್ರಂಥಗಳ ಸಂಗ್ರಹಣ ಪರಿಷ್ಕರಣಗಳಲ್ಲಿ ಬಿ.ಎಂ.ಶ್ರೀಯವರ ಮಹತ್ತರ ಪಾತ್ರವೇನೆಂಬುದು ಸ್ಪಷ್ಟವಾಗುತ್ತದೆ. ಸ್ಪಷ್ಟವಾಗದೆ ಉಳಿದುಕೊಂಡಿರುವುದೆಂದರೆ ಬಿ.ಎಂ. ಶ್ರೀಯವರ ಜೊತೆಯಲ್ಲಿ ಸೇರಿಕೊಂಡು ಟಿ.ಎಸ್. ವೆಂಕಣ್ಣಯ್ಯನವರು ಸಂಪಾದಿಸಿದ "ಗದುಗಿನ ಭಾರತ"–ಅದು ಏನಾಯಿತು? ಎಲ್ಲಿಯಾದರೂ ಯಾವ ರೂಪದಲ್ಲಿಯಾದರೂ ಅದು ಅಚ್ಚಾಗಿದೆಯೇ–ಇಲ್ಲ ಅದು ಕಳೆದುಹೋಯಿತೇ–ಎಂಬುದು ಕುತೂಹಲಕರವಾದ ವಿಷಯ. ಏಕೆಂದರೆ ಶ್ರೀಯವರಿಗೆ ಗದುಗಿನ ನಾರಾಣಪ್ಪನೆಂದರೆ–ಮಹಾಕವಿಯೆಂದು ತುಂಬು ಮೆಚ್ಚಿಗೆ. ಅಂಥವನ ಮಹಾಕಾವ್ಯವಾದ ಗದುಗಿನ ಭಾರತವನ್ನು ವೆಂಕಣ್ಣಯ್ಯನವರು ಬಿ.ಎಂ.ಶ್ರೀಯವರ ವಿದ್ವತ್ಪೂರ್ಣವಾದ ಸಹಕಾರದಿಂದ ಅಖಂಡವಾಗಿ ಸಂಪಾದಿಸಿದ್ದರೆಂಬುದು ಶ್ರೀಯವರೇ ಘಂಟಾಘೋಷವಾಗಿ (1938) ರಲ್ಲಿ ಹೇಳಿರುವಾಗ–ಈ ನಲವತ್ತು ವರ್ಷಗಳ ಅವಧಿಯಲ್ಲಿ ಅವರ ಗತಿಯೇನು ಕತೆಯೇನು ?

ಪ್ರೊ. ತ.ಸು. ಶಾಮರಾಯರು "ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ" ಯನ್ನು ಪ್ರವರ್ತಿಸಿ–"ಉದ್ಯೋಗಪರ್ವ ಸಂಗ್ರಹ"ವೆಂಬ ಹೊತ್ತಿಗೆಯನ್ನು 1966ರಲ್ಲಿ ಆ ಮಾಲೆಯ ಎರಡನೇ ಗ್ರಂಥವಾಗಿ ಪ್ರಕಟಿಸಿದರು. ಅದು ತಾವು ಕೈಕೊಂಡಿರುವ ಕನ್ನಡ ಮಹಾಭಾರತ ಸಂಗ್ರಹದ ಮೊದಲನೆ ಸಂಪುಟ ಎಂದು 1947ರಲ್ಲಿ ಪ್ರಸಿದ್ಧಪಡಿಸಿದರು. ಅದೇ (1947) ವರ್ಷ "ಆದಿಪರ್ವಸಂಗ್ರಹ"ವನ್ನು ಎರಡನೆ ಶಂಪುಟವಾಗಿ ಪ್ರಕಟಿಸಿದರು. ಅವರ ಮುನ್ನುಡಿಯಲ್ಲಿ "ಗದುಗಿನಭಾರತ ವೆಂಕಣ್ಣಯ್ಯನವರ ಅಚ್ಚುಮೆಚ್ಚಿನ ಗ್ರಂಥ. ಅದನ್ನು ಅವರು ಅಚ್ಚುಕಟ್ಟಾಗಿ ಪ್ರಕಟಿಸಬೇಕೆಂಬ ಉದ್ದೇಶದಿಂದ (ಆ) ಭಾರತದ ಹಲವಾರು ಓಲೆಯ ಪ್ರತಿಗಳನ್ನು ಸಂಪಾದಿಸಿಟ್ಟಿದ್ದರು. ಭಾರತದ ಕೈಬರಹದ ಪ್ರತಿಯೊಂದನ್ನು ತಯಾರಿಸಿಟ್ಟಿದ್ದರು. ಸ್ವಲ್ಪ ಭಾಗ ಸಂಪಾದನ ಕಾರ್ಯವನ್ನೂ ನಡೆಸಿದ್ದರು" ಎನ್ನುತ್ತ ಮುಂದುವರಿದು "ಅವರು ತಯಾರಿಸಿಟ್ಟಿದ್ದ (ಆ) ಕೈಬರಹದ ಪ್ರತಿಯಲ್ಲಿ ಮೂರು ಪರ್ವಗಳು–ಆದಿ, ಅರಣ್ಯ, ಉದ್ಯೋಗ–ಈಗ (1947ರಲ್ಲಿ) ದೊರೆತಿವೆ" ಎಂದು ಹೇಳುತ್ತಿದ್ದಂತೆಯೇ "ಈ (ತಮ್ಮ ಆದಿಪರ್ವ) ಸಂಗ್ರಹ ಅಚ್ಚಾದಮೇಲೆ ಅವು ಅವು ದೊರೆತ ಕಾರಣ ಅವುಗಳ ಉಪಯೋಗ ಈ ಸಂಗ್ರಹಕ್ಕೆ ದೊರಕಲಿಲ್ಲ" ಎಂದು ಪರಿತಪಿಸಿ "ಈ ಸಂಗ್ರಹಕ್ಕೆ ಮತ್ತೊಮ್ಮೆ ಅಚ್ಚಾಗುವ ಸುಯೋಗ ದೊರಕಿದರೆ ಆಗ ಅದರ (ಅಂದರೆ ವೆಂಕಣ್ಣಯ್ಯನವರು ಸಂಪಾದಿಸಿಟ್ಟಿದ್ದ ಆದಿಪರ್ವದ) ಪೂರ್ಣ ಉಪಯೋಗವನ್ನು ಮಾಡಿಕೊಳ

ಲಾಗುವುದು" ಎಂಬ ನಿರೀಕ್ಷಣೆಯಿಂದ ಸಮಾಧಾನ ತಂದುಕೊಂಡಿದ್ದರು. ವೆಂಕಣ್ಣಯ್ಯ ನವರ ಕೈಬರಹ ಪ್ರತಿಯಲ್ಲಿ ಇದ್ದವೆಂದು ಹೇಳಲಾದ ಮೂರು ಪರ್ವಗಳಲ್ಲಿ ಒಂದಾದ ಉದ್ಯೋಗ ಪರ್ವದಿಂದ ತಮ್ಮ ಪರಿಷ್ಕರಣಕ್ಕೆ ನೆರವು ದೊರಕಿದುದಾಗಿ ಶ್ಯಾಮರಾಯರು 1974ರಲ್ಲಿ ಪ್ರಕಟಿಸಿದ 'ಉದ್ಯೋಗಪರ್ವಸಂಗ್ರಹ'ದ ಎರಡನೇ ಮುದ್ರಣದ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಉಳಿದ ಆದಿ (ಮತ್ತು ಅರಣ್ಯ) ಪರ್ವಗಳ ಸಂಗ್ರಹ 1947 ರಿಂದ 1955ರ ವರೆಗಿನ ಮಧ್ಯಂತರ ದಲ್ಲಿ ಪುನರ್ ಮುದ್ರಣಗೊಂಡಿಲ್ಲ. ಅ (ವು)ದು ಮತ್ತೊಮ್ಮೆ ಮುದ್ರಿತವಾಗಿ ಶ್ಯಾಮರಾಯರ ನಿರೀಕ್ಷೆ ಈಡೇರಿದ್ದು–1955ರಲ್ಲಿ "ಮಹಾಕವಿ ನಾರಣಪ್ಪನ 'ಕರ್ಣಾಟಕ ಭಾರತ ಕಥಾಮಂಜರಿ'ಯನ್ನು ಸಂಗ್ರಹಿಸಿ "ಕನ್ನಡ ಮಹಾಭಾರತ ಸಂಗ್ರಹ ಭಾಗ-೧"ನ್ನು "ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ ಯಲ್ಲಿ" ಪ್ರಕಾಶಪಡಿಸಿದಾಗ. ಆದರೆ ಆ ಕನ್ನಡ ಮಹಾಭಾರತ ಸಂಗ್ರಹ_ಭಾಗ ೧ಕ್ಕೆ ಶ್ಯಾಮರಾಯರು ಮಾಡಿಕೊಂಡಿರುವ "ಸಂಪಾದಕನ ಅರಿಕೆ"ಯಲ್ಲಿ ದಿವಂಗತ ವೆಂಕಣ್ಣಯ್ಯನವರ ಭಾರತದ ಸಂಪಾದನೆಯ ಮಾತೇನು—ಆ ವೆಂಕಣ್ಣಯ್ಯನವರ ಹೆಸರೂ ಪ್ರಸ್ತಾಪವಾಗಿಲ್ಲ. ಅಂದಮೇಲೆ ವೆಂಕಣ್ಣಯ್ಯನವರು ಸಂಪಾದಿಸಿದ ಇಡೀ ಭಾರತವೇನಾಯಿತು, ದೋಗಲಿ ಸಿಕ್ಕಿರುವ ಆದಿ-ಅರಣ್ಯ-ಉದ್ಯೋಗ ಪರ್ವಗಳೇ ನಾದವು ಅವಕ್ಕೆ ಶ್ರೀಯವರ ಸಹಸಂಪಾದಕತ್ವ ಲಭಿಸಿದ್ದರೂ–ಅವಕ್ಕೆ ಪ್ರತ್ಯೇಕ ಪ್ರಕಟನ ಮಹತ್ವವಿಲ್ಲವೇ ?

1938ರಲ್ಲಿ ಹೇಳಿದ ಈ ಮಾತಲ್ಲದೆ—ಬಿ.ಎಂ.ಶ್ರೀಯವರು "ಕುಮಾರವ್ಯಾಸ ಪ್ರಶಸ್ತಿ' ಗ್ರಂಥಕ್ಕೆ ಮುನ್ನುಡಿ ಬರೆಯುತ್ತ 1940ರಲ್ಲಿ ಮತ್ತೊಂದು ಸಲ ಹೀಗೆ ಹೇಳು ತ್ತಾರೆ : ಇಬ್ಬರೂ ಈ ಪ್ರಶಸ್ತಿ ಗ್ರಂಥಕ್ಕೆ ಪ್ರೇರಕರು ಅದಕ್ಕೆ ರೂಪಕೊಟ್ಟು ಜೊತೆಗೆ (ಗದುಗಿನ ಭಾರತದ) ಒಂದು ಸಂಪೂರ್ಣ ಮೂಲಗ್ರಂಥದ ಪ್ರಕಟನೆಗೆ ನೆರವಾಗುವ ಓಲೆಪ್ರತಿಗಳನ್ನು ಹುಡುಕಿ ತರಿಸಿ, ಅದರ ಒಂದು ಸಂಗ್ರಹರೂಪವನ್ನು ವಿಶ್ವವಿದ್ಯಾ ನಿಲಯಕ್ಕಾಗಿ ಸಿದ್ಧಪಡಿಸುವ ಪ್ರೇಮಕೈಂಕರ್ಯದಲ್ಲಿ ತೊಡಗಿದ್ದವರು (ಇಬ್ಬರನ್ನು ಕಾಲರಾಯನು ತನ್ನ ಕರಿಯ ನಾಲಗೆಯನ್ನು ಚಾಚಿ ನುಂಗಿಬಿಟ್ಟನು). ಕುಮಾರ ವ್ಯಾಸನ ಹೃದಯವನ್ನು ತಾವು ಹೊಕ್ಕು ಕನ್ನಡಿಗರಿಗೆ ದಾರಿಯನ್ನು ಸವಸಿದವರು— ಕೀರ್ತಿಶೇಷರಾದ ಶ್ರೀ ಟಿ.ಎಸ್. ವೆಂಕಣ್ಣಯ್ಯನವರೊಬ್ಬರು, ಶ್ರೀ ಪಂಜೆ ಮಂಗೇಶ ರಾಯರೊಬ್ಬರು, ವೆಂಕಣ್ಣಯ್ಯನವರು ತಳಹದಿಯನ್ನು ಹಾಕಿ, ವಿಮರ್ಶಕರನ್ನು ಕೂಡಿಸಿ ಗ್ರಂಥವನ್ನು (ಅಂದರೆ ಕುಮಾರವ್ಯಾಸ ಪ್ರಶಸ್ತಿಯನ್ನು) ಈ ರೂಪಕ್ಕೆ ತಂದರು" (ಕ.ಬ. ಸಾಹಿತ್ಯ, ಪುಟ–287) ಎಂದು. ಶ್ರೀಯವರ ಈ ಮಾತಿನಲ್ಲಿ ವೆಂಕಣ್ಣಯ್ಯನವರು ಮೈಸೂರು ವಿಶ್ವವಿದ್ಯಾನಿಲಯಕ್ಕಾಗಿ ಗದುಗಿನ ಭಾರತದ ಒಂದು ಸಂಗ್ರರೂಪವನ್ನೂ ಸಿದ್ಧಪಡಿಸುತ್ತಿದ್ದರೆಂಬ ಮತ್ತೊಂದು ಅಂಶವೂ ಹೊರಪಡಿಸುತ್ತಿದೆ ಇದರ ಕರಡು ಪ್ರತಿಗಳೆಲ್ಲಾದರೂ ಇದೆಯೇ ? ಕೇವಲ 40 ವರ್ಷಗಳ ಹಿಂದಿನ ಈ

ವಿಚಾರ ಸಾಮಗ್ರಿಯನ್ನು ಸಂಶೋಧಿಸಿ ಫಲಿತಾಂಶಗಳನ್ನು ವಿದ್ವಾಂಸರಾರಾದರೂ ಪ್ರಕಟಿಸಿದರೆ ಅವರಿಗೆ ಕನ್ನಡನಾಡಿನ ಯಾವ ವಿಶ್ವವಿದ್ಯಾನಿಲಯವೇ ಆದರೂ ಡಾಕ್ಟರೇಟನ್ನು-ಪಿ.ಎಚ್.ಡಿ. ಅಲ್ಲ-ಗೌರವ D. L. T. T. ಡಾಕ್ಟರೇಟ್ ಪ್ರಶಸ್ತಿಯನ್ನು ಕೊಡುವುದಾಗಿ ಕನ್ನಡ ಸಾಹಿತ್ಯ ಪರಿಷತ್ತು ಮಧ್ಯ ಪ್ರವೇಶಿಸಿ ಘೋಷಿಸಬೇಕು—ಎಂದು ತರುಣರೂ ದಕ್ಷರೂ ಆದ ಪರಿಷತ್ತಿನ ಅಧ್ಯಕ್ಷ ಶ್ರೀ ಹಂಪನಾ ಅವರನ್ನು ಕೋರುತ್ತೇನೆ.

ಒಟ್ಟಿನಲ್ಲಿ ಬಿ.ಎಂ.ಶ್ರೀಯವರು ವೇಕಣ್ಣಯ್ಯನವರ ಸಹ ಸಂಪಾದಕತ್ವದಲ್ಲಿ ಸಿದ್ಧಪಡಿಸಿದ 'ಗದುಗಿನಭಾರತ' ಕನ್ನಡನಾಡಿನ ಸಾರಸ್ವತ ಪ್ರಪಂಚದಲ್ಲಿ ಒಂದು ಚಾರಿತ್ರಿಕ ದಾಖಲೆಯೆಂಬುದನ್ನು ಮನಗಾಣಿಸಲು ಇಷ್ಟೆಲ್ಲ ವಿಚಾರ ಮಾಡಬೇಕಾಯಿತು.

ಬಸವರಾಜದೇವರ ರಗಳೆಯನ್ನು ವೆಂಕಣ್ಣಯ್ಯನವರು ಸ್ವತಃ ಸಂಪಾದಿಸಿ ಪ್ರಕಟಿಸಿದುದಾಗಿ ಬಿ.ಎಂ.ಶ್ರೀಯವರು ಹೇಳಿರುವ ವೆಂಕಣ್ಣಯ್ಯನವರಾದರೊ ಆ ರಗಳೆಯನ್ನು 1930ರಲ್ಲಿ ಪ್ರಕಟಿಸುತ್ತ—"ಓರಿಯಂಟಲ್ ಲೈಬ್ರರಿಯ ಹಸ್ತಲಿಖಿತ ಪ್ರತಿಗಳಲ್ಲಿ ಅಡಗಿದ್ದ ಈ ಗ್ರಂಥವನ್ನು ಮೊದಲು ಕಂಡುಕೊಂಡು ಇದನ್ನು ಪ್ರಕಟಿಸಬೇಕೆಂಬ ಪ್ರೇರಣೆಯನ್ನು ನನ್ನಲ್ಲುಂಟುಮಾಡಿ ಇದನ್ನು ಮುದ್ರಣಕ್ಕೆ ಸಿದ್ಧಪಡಿಸುವಾಗಲೂ ಪೀಠಿಕೆಯನ್ನು ಬರೆಯುವಾಗಲೂ ಅವಶ್ಯಕವಾದ ಅನೇಕ ಸಲಹೆಗಳನ್ನು ಕೊಟ್ಟ ನನ್ನ ವಿದ್ಯಾಗುರುಗಳಾದ ಶ್ರೀಯವರಿಗೆ ಚಿರಋಣಿಯಾಗಿದ್ದೇನೆ" ಎಂದು ಹೇಳಿ ಆ ಗ್ರಂಥವನ್ನು "ವಿದ್ಯಾಗುರುಗಳಾದ ಶ್ರೀಯವರಿಗೆ ಅರ್ಪಿತ" ಎಂದಿರುವುದು ಅರ್ಥಪೂರ್ಣವಾಗಿದೆ.

ಬಿ.ಎಂ.ಶ್ರೀಯವರು ಗ್ರಂಥಸಂಪಾದನ ಕ್ಷೇತ್ರದಲ್ಲಿ ಮಾಡಿದ ಮತ್ತೊಂದು ವಿಕ್ರಮವನ್ನು ಕೊನೆಯದಾಗಿ ಹೇಳಿ ಈ ಪ್ರಬಂಧವನ್ನು ಮುಗಿಸುತ್ತೇನೆ,

ಬಿ.ಎಲ್. ರೈಸ್‌ರವರು 1898 ರಲ್ಲಿ ಪಂಪಭಾರತವನ್ನು ಪ್ರಕಟಿಸಿದ್ದರು. ಅದನ್ನು ಪರಿಷತ್ತು ಪರಿಷ್ಕರಿಸಿ ಪ್ರಕಟಿಸುವ ಒಂದು ಯೋಜನೆಯನ್ನು 1917ರಲ್ಲೇ ಮಾಡಿತ್ತಾದರೂ ಆ ಕಾರ್ಯ ಪ್ರಾರಂಭವಾದದು 1922 ರಲ್ಲೇ. ಆ ವೇಳೆಗೆ ಶ್ರೀಯವರಿಗೆ 38ರ ಪ್ರಾಯ. ಕಡಬದ ನಂಜುಂಡಶಾಸ್ತ್ರಿಗಳು ಮತ್ತು ತೋಗೆರೆ ನಂಜುಂಡಶಾಸ್ತ್ರಿಗಳು ಪರಿಷ್ಕರಣವನ್ನು ಪ್ರಾರಂಭಿಸಿ ಬಿಡಲಾರದ ಪಾಠದ ತೊಡಕುಗಳು ಎದುರಾದಾಗ ಮೊದಲನೇ ಆಶ್ವಾಸವನ್ನಷ್ಟೆ ಪರಿಷ್ಕರಿಸಿ ಅಚ್ಚುಹಾಕಿಸಿ ಕನ್ನಡನಾಡಿನಾದ್ಯಂತ 38 ಜನ ವಿದ್ವಾಂಸರ ಸಲಹೆಗಾಗಿ ಕಳುಹಿಸಿದರು ಆಗ ಸಲಹೆಗಳನ್ನು ಕಳಿಸಿದವರಲ್ಲಿ ಮೊದಲಿಗರೇ ಶ್ರೀಯವರು. ಕೆಲಸ ಪ್ರಾರಂಭಿಸಿದ್ದ ಆ ಸಮಯದಲ್ಲಿ ಪ್ರತಿಗಳ ಜೊತೆಗೆ ಮತ್ತೊಂದು ಪ್ರತಿಲಭ್ಯವಾದಾಗ ಅದುವರೆಗೆ ಮಾಡಿದ ಪರಿಷ್ಕರಣವೆಲ್ಲ ವ್ಯರ್ಥವಾದುದರಿಂದ ಹೊಸ ಬೆಳಕಿನಲ್ಲಿ ಕಡಬದ ನಂಜುಂಡಶಾಸ್ತ್ರಿಗಳು ಟಿ.ಎಸ್. ವೆಂಕಣ್ಣಯ್ಯನವರು ಬೆಳ್ಳಾವೆ ವೆಂಕಟನಾರಾಯಣಪ್ಪನವರು ಸೇರಿ ಮೊದಲೆರಡು

ಆಶ್ವಾಸಗಳನ್ನು "ತಿದ್ದಿದರು". ಈ ತಿದ್ದುಪಡಿ ಸರಿಯೋ ಅಲ್ಲವೋ ಎಂಬುದನ್ನು ಚರ್ಚಿಸಲು 9–10–1924 ರಂದು ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿ ಸಭೆ ಸೇರಿದ ಪ್ರತಿಷ್ಠಿತರಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಮೊದಲಿಗರು–ಆಮೇಲೆ ಜಿ. ಕೃಷ್ಣಪ್ಪನವರು ಎ. ಆರ್. ಕೃಷ್ಣಶಾಸ್ತ್ರಿಗಳು ಮುಂತಾದವರು. ಚರ್ಚೆಯಿಂದ ನಿಷ್ಪನ್ನವಾದ ಹೊಸ ಸೂತ್ರಗಳಿಗೆ ಅನುಸಾರವಾಗಿ ಪಂಪಭಾರತವನ್ನು ಮತ್ತೆ ಮೊದಲಿಂದ ಪರಿಷ್ಕರಿಸಲಾರಂಭಿಸಿ ಸಿದ್ಧಪಡಿಸಿದ ಮೊದಲನೇ ಆಶ್ವಾಸನೆಯನ್ನು ಮತ್ತೆ ಅಚ್ಚು ಹಾಕಿಸಿ ಡಿ.ವಿ.ಜಿ., ಬಿ.ಎಂ.ಶ್ರೀ., ಆರ್. ನರಸಿಂಹಾಚಾರ್, ಮುಂತಾದವರಿಗೆ ಸಲಹೆಗಳಿಗಾಗಿ ಕಳಿಸಿಕೊಡಲಾಯಿತು. ಬಿ. ಎಂ. ಶ್ರೀ ಮುಂತಾದವರು ಕೊಟ್ಟ ಸಲಹೆಗಳನ್ನು ಅನುಸರಿಸಿ ಕಾರ್ಯ ಮುಂದುವರಿಯಿತು ಬೆಳ್ಳಾವೆಯವರು ಕಡಬದವರು ಮತ್ತು ವೆಂಕಣ್ಣಯ್ಯನವರು ಸೇರಿ ಪ್ರತಿಪಾಠವನ್ನು ಚರ್ಚಿಸಿ ಮೂವರೂ ಒಪ್ಪಿದ ಪಾಠವನ್ನೂ ಪಾಠಾಂತರಗಳನ್ನೂ ಕೊಟ್ಟು ಗ್ರಂಥವನ್ನೆಲ್ಲ ಮುದ್ರಣಕ್ಕೆ ಸಿದ್ಧಪಡಿಸಲಾಯಿತಂತೆ. ಆಗ ಅದರ ಅಚ್ಚಿನ ಕಾರ್ಯವನ್ನು ಸಂಪೂರ್ಣವಾಗಿ ನಿರ್ವಹಿಸಿಕೊಂಡಿದ್ದ ಬೆಳ್ಳಾವೆಯವರು ಕಡೆಯ ಪ್ರೂಫನ್ನು ಬಿ.ಎಂ.ಶ್ರೀಯವರಿಗೆ ತೋರಿಸಿ ಅವರ ಸಲಹೆಗಳನ್ನು ಪಡೆದೇ ಅಚ್ಚು ಹಾಕಿಸಿದ್ದಾರಂತೆ. ಬಿ.ಎಂ.ಶ್ರೀಯವರು ತಮಗಿರುವ ಉತ್ಕಟವಾದ ಕನ್ನಡ ಭಾಷಾಪ್ರೇಮದಿಂದ ಪ್ರೂಫುಗಳನ್ನೆಲ್ಲಾ ವಿಶದವಾಗಿ ನೋಡಿ ಬೆಲೆಯುಳ್ಳ ಅನೇಕ ಸಲಹೆಗಳನ್ನು ಕೊಡುತ್ತಿದ್ದರೆಂದು ಭಾರತದ ಸಂಪಾದಕರಾದ ಬೆಳ್ಳಾವೆ ವೆಂಕಟನಾರಾಯಣಪ್ಪನವರೇ ಅದರ ಉಪೋದ್ಘಾತದಲ್ಲಿ ಹೇಳಿಕೊಂಡಿದ್ದಾರೆ.

ಹೀಗೆ ಬಿ.ಎಂ. ಶ್ರೀಯವರು ಗ್ರಂಥಸಂಪಾದನ ಕ್ಷೇತ್ರದಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ವಿದ್ವತ್ಪೂರ್ಣವಾದ ಪಾತ್ರವನ್ನು ನಿರ್ವಹಿಸಿ–ತಮ್ಮ ಹೆಸರನ್ನು ಸಂಪಾದಕರೆಂದು ನಮೂದಿಸಿಕೊಳ್ಳದೆ–ತಮ್ಮ ಗೆಳೆಯರ ಶಿಷ್ಯರ ಸ್ನೇಹವಾತ್ಸಲ್ಯಗಳ ನಿರಾಕಾರ ಸಂಕೇತವಾಗಿ ನಿಂತಿದ್ದಾರೆ.

# ಬಿ.ಎಂ.ಶ್ರೀ ಅವರ ವ್ಯಕ್ತಿತ್ವ-ಒಂದು ಪುನರಾಚರಣೆ

**ಜಿ. ಶಂಕರಯ್ಯ**

ಬಿ.ಎಂ. ಶ್ರೀ ಅವರ ವ್ಯಕ್ತಿತ್ವಕ್ಕೂ ಅವರ ಜೀವನದ ಆಗುಹೋಗುಗಳಿಗೂ ಅವಿನಾಭಾವವಾದ ಸಂಬಂಧವಿದೆ. ಅವರ ವ್ಯಕ್ತಿತ್ವೋದ್ಯೋತಕವಾದ ಮೂಲ ಪ್ರವೃತ್ತಿಗಳಮೇಲೆ ಇತರ ಪ್ರವೃತ್ತಿಗಳು ಉದ್ದಕ್ಕೂ ಮೇಲಾಟ ನಡೆಸಿವೆ. ಒಂದೊಂದು ಕಾಲದಲ್ಲಿ ಒಂದೊಂದು ಪ್ರವೃತ್ತಿ ಇತರ ಪ್ರವೃತ್ತಿಗಳನ್ನು ಹತ್ತಿಕ್ಕಿ ಆಳಲೆಳಸಿದೆ. ಇದರ ಸತ್ಯಾಸತ್ಯತೆಯನ್ನು ತಿಳಿಯಬೇಕಾದರೆ ಅವರ ಜೀವನ ವೃತ್ತಾಂತವನ್ನು ತುಸು ಬೆದಕಿ ನೋಡಿದಲ್ಲದೆ ಸಾಧ್ಯವಿಲ್ಲ—ಹೀಗನ್ನಿಸಿ, ಅವರ ಜೀವನದ ಹಿನ್ನೆಲೆಯಲ್ಲಿ ಅವರ ವ್ಯಕ್ತಿತ್ವವನ್ನು ಗುರುತಿಸುವ ನಮ್ರ ಪ್ರಯತ್ನಕ್ಕೆ ಇಲ್ಲಿ ಕೈಹಾಕಿದ್ದೇನೆ. ಸಂದರ್ಭ ಸನ್ನಿವೇಶಗಳಿಗೆ ಅನುಗುಣವಾಗಿ ನಾನು ಮುಂದೆ ತಳೆದಿರುವ ನಿಲುಮೆಯಲ್ಲಿ ಅಸಂಗತ ಗಳೇನಾದರೂ ಇದ್ದಲ್ಲಿ ತಿಳಿದವರು ದಯಮಾಡಿ ತಿದ್ದಬೇಕು.

ಶ್ರೀ ಅವರ ಜೀವನವನ್ನು, 1884 ರಿಂದ 1926 ರವರೆಗಿನ ಸುಮಾರು 40 ವರ್ಷಗಳ ಸುದೀರ್ಘವಾದ ಕಾಲವನ್ನು ಪೂರ್ವಸಿದ್ಧತೆಯ ಕಾಲವೆಂದೂ ; 1926 ರಿಂದ 1938-39ರ ವರೆಗಿನ 12-13 ವರುಷಗಳ ಅವಧಿಯನ್ನು ಸಾಧನೆಯ ಕಾಲ ವೆಂದೂ ; 1938 ರಿಂದ 1942 ರವರೆಗಿನ ನಾಲ್ಕು ವರ್ಷಗಳ ಕಾಲವನ್ನು ಸಿದ್ಧಿಯ ಇಲ್ಲವೆ (ಫಲ) ಜಯಪ್ರದ ಕಾಲವೆಂದೂ ; 1942 ರಿಂದ 1944 ರವರೆಗಿನ ಎರಡು ವರ್ಷಗಳನ್ನು ನಿರ್ವಿಣ್ಣತೆಯ ಅಥವಾ ಅಜ್ಞಾತವಾಸದ ಕಾಲವೆಂದೂ; ಕೊನೆಯದಾದ 1944 ರಿಂದ 1946 ರವರೆಗಿನ ಮತ್ತೆ ಎರಡು ವರ್ಷಗಳ ಕಾಲವನ್ನು ಹತಾಶೆಯ ಅಥವ ಜೀರ್ಣೋದ್ಧಾರ ಪ್ರಯತ್ನದ ಕಾಲವೆಂದೂ—ಸ್ಥೂಲವಾಗಿ ಐದು ವಿಭಾಗಗಳ ನ್ನಾಗಿ ಮಾಡಬಹುದು.

ಮೊದಲು ಸು : 40 ವರುಷಗಳಷ್ಟು ಅವಧಿಯನ್ನು ಪೂರ್ವಸಿದ್ಧತೆಯ ಕಾಲ ವೆಂದು ಕರೆದಿದ್ದೆನಾದರೂ ಅದು ನಿಜವಾಗಿಯೂ ಪ್ರಾರಂಭವಾಗುವುದು ಅವರು ಬಿ.ಎ., ಪದವಿಯನ್ನು ಪಡೆದ ವರ್ಷದಿಂದ ಅಂದರೆ 1901 ರಿಂದ 1926 ವರೆಗೆ, ಎಂದಿಟ್ಟುಕೊಳ್ಳಬಹುದು ; ಇಷ್ಟಾದರೂ ಈ ಕಾಲ 20 ವರ್ಷಗಳಷ್ಟಾಯಿತು. ಇದು ಯಾವ ದೃಷ್ಟಿಯಿಂದ ನೋಡಿದರೂ ಕಡಿಮೆಯ ಕಾಲವೇನಲ್ಲ. ಈ ಅವಧಿಯಲ್ಲಿ ಅವರು ಕನ್ನಡನಾಡು, ನುಡಿಯ ಮತ್ತು ಸಾಹಿತ್ಯದ ಮುನ್ನಡೆಯ ವಿಚಾರವಾಗಿ ಆಳ ವಾದ ಅಭ್ಯಾಸದಲ್ಲಿ ತೊಡಗಿದ್ದರೆಂಬುದು ನಿರ್ವಿವಾದ. ಈ ಅವಧಿಯಲ್ಲಿ ಅವರು

ಒಂದೆರಡು ಇಂಗ್ಲೀಷ್ ಪ್ರಬಂಧಗಳನ್ನೂ, ಕೆಲವು ಇಂಗ್ಲೀಷ್ ಗೀತಗಳ ಅನುವಾದ ಗಳನ್ನೂ ಪ್ರಕಟಿಸಿದರು. 1911ರಲ್ಲಿ, ಧಾರವಾಡದ ವಿದ್ಯಾವರ್ಧಕ ಸಂಘದ ಆಶ್ರಯ ದಲ್ಲಿ ಅವರು ಮಾಡಿದ ಭಾಷಣದಲ್ಲಿ ಅವರ ವಿಚಾರಧಾರೆ ಸುವ್ಯಕ್ತವಾಗಿದೆ. ಆದರೆ ಆ ಭಾಷಣದ ನಂತರ ಸು: 1926 ರವರೆಗೆ ಅವರೆಂದೂ ಮತ್ತೆ ಸಾರ್ವಜನಿಕವಾಗಿ ಕನ್ನಡದ ಬಗ್ಗೆ, ಕನ್ನಡದಲ್ಲಿ ಮಾತನಾಡುವ ಧೈರ್ಯಕ್ಕೆ ಮನಸ್ಸು ಮಾಡಲಿಲ್ಲ ಎಂಬುದು ಗಮನಿಸಬೇಕಾದ ಅಂಶ. ಇಷ್ಟು ದೀರ್ಘಕಾಲದವರೆಗೆ ಅವರೇಕೆ ಮೌನ ವಹಿಸಿದರು? ಅವರ ಅಂದಿನ ಭಾಷಣಕ್ಕೆ ನಿರೀಕ್ಷಿತ ಪ್ರತಿಕ್ರಿಯೆ ದೊರೆಯಲಿಲ್ಲವೆ? ತಮ್ಮ ಅಭ್ಯಾಸದಲ್ಲೇ ಅರಕೆಯನ್ನು ಕಂಡರೆ? ಆತ್ಮವಿಶ್ವಾಸದ ಕೊರತೆಯಾಯಿತೆ? ಕಾಲವಿನ್ನೂ ಪಕ್ವಸ್ಥಿತಿಗೆ ಬಂದಿಲ್ಲ ಎಂದುಕೊಂಡರೆ? ಅಥವಾ ಸಾಂಸಾರಿಕ ಏರುಪೇರು ಗಳು ಅವರ ಉತ್ಸಾಹವನ್ನು ಮೆಟ್ಟಿ ನಿಂತವೆ?

ಹೇಳಿ ಕೇಳಿ ಶ್ರೀ ಇಂಗ್ಲೀಷ್ ಅಧ್ಯಾಪಕರು, ಎಳೆಹರೆಯದವರು. ಕನ್ನಡ ವನ್ನು ಪಾಠಕ್ರಮದಲ್ಲಿ ಕಲಿತವರಾದರೂ ವಿದ್ಯುಕ್ತವಾಗಿ ಅದರಲ್ಲಿ ಪದವಿಯನ್ನು ಪಡೆದವರಲ್ಲ. ಆದರೂ ತಾಯ್ನುಡಿಯ ನಾಡಿಗಾಗಿ ಅವರ ಹೃದಯ ಮರುಗಿತು. ಕೈಲಾದ ಸೇವೆಮಾಡಿ ಅದರ ಸ್ಥಾನಮಾನವನ್ನು ಹೆಚ್ಚಿಸಬೇಕೆಂಬ ತೀವ್ರವಾದ ಆಸಕ್ತಿ ಆಕಾಂಕ್ಷೆಗಳನ್ನು ವಹಿಸಿದರು. ಈ ಶತಕದ ಆದಿಯಲ್ಲಿ ಕನ್ನಡ ಸಾಹಿತ್ಯ ಅಲ್ಲೊಂದು ಇಲ್ಲೊಂದು ಹೊಸ ಪ್ರಯೋಗಗಳನ್ನು ಕಾಣುತ್ತಿತ್ತಾದರೂ ಬಹಳಷ್ಟು ಮಟ್ಟಿಗೆ ರಕ್ತ ಹೀನ, ಪರಂಪರಾಗತ ಶರಣವಾದ ಶೈಲಿಯಲ್ಲೇ ಕುಂಟುತ್ತ ತೆವಳುತ್ತ ಸಾಗಿತ್ತು. ಅದಕ್ಕೆ ಹೊಸತೇ ಒಂದು ರೂಪರಚನೆ ಅತ್ಯಂತ ತೀವ್ರವಾದ ಅಗತ್ಯವಾಗಿತ್ತು. ಅಂತಹ ಪುನಶ್ಚೇತನಕ್ಕೆ ಮಾರ್ಗಯಾವುದು? ಹಿಂದೊಮ್ಮೆ, ಕನ್ನಡ, ಅದು ಬಹುಶಃ ಜೀವಂತವಲ್ಲದಿದ್ದರೂ ಪ್ರಭಾವಶಾಲಿ ಭಾಷೆಯಾಗಿದ್ದ ಕಾಲದಲ್ಲಿ, ಸಂಸ್ಕೃತದ ನೆರ ವನ್ನು ಪಡೆದು ಯಶೋಭಾಗಿಯಾಯಿತು. ಅದೇ ಸಂಸ್ಕೃತ ಇಂದು ಮತ್ತೊಮ್ಮೆ ಕನ್ನಡಕ್ಕೆ ನವಚೈತನ್ಯವನ್ನು ಕೊಡಬಲ್ಲುದೆ? ಶ್ರೀ ಅವರಿಗೆ ಅದು ಅಶಕ್ಯವೆನಿಸಿತು. ಹಾಗಾದರೆ ಬೇರೆ ದಿಕ್ಕು? ಸಮೃದ್ಧವಾಗಿ ಬೆಳೆದು ಶ್ರೇಷ್ಠವಾದ ಕಾವ್ಯಪರಂಪರೆ ಯನ್ನು ಹೊಂದಿರುವ ಇಂಗ್ಲೀಷೇ ಗತಿಯೆನಿಸಿತು. ಗಣಿಯನ್ನೇನೋ ಗುರುತಿಸಿದರು. ಆದರೆ ಅದರಿಂದ ವಜ್ರಗಳನ್ನು ಅಗೆದು ತೆಗೆದು ಪರಿಷ್ಕರಿಸುವ ರೀತಿಯಾವುದು? ಅದನ್ನೇ ಅವರು ಮುಂದೆ ತಮ್ಮ ಇಂಗ್ಲೀಷ್ ಗೀತೆಗಳ ಅನುವಾದದಲ್ಲಿ ತೋರಿಸಿ ಕೊಟ್ಟರು.

ಆದರೆ ತಮ್ಮ ಈ ಪ್ರಯತ್ನ ಅದೆಷ್ಟರಮಟ್ಟಿಗೆ ಒಪ್ಪಿತವಾದೀತು, ಅಂತಿಮ ವಾಗಿ ಸಾರ್ಥಕವಾದೀತು ಎಂಬ ಬಗ್ಗೆ ಈ ಅವಧಿಯಲ್ಲಿ ಅವರಿಗೆ ಸಾಕಷ್ಟು ಆತ್ಮ ವಿಶ್ವಾಸವಿದ್ದಿರಲಾರದು. ಆದ್ದರಿಂದ ಕನ್ನಡವನ್ನು ಮತ್ತಷ್ಟು ಆಳವಾಗಿ ಅಭ್ಯಾಸ ಮಾಡಿ, ಅದರ ಜಾಯಮಾನವನ್ನು ಚೆನ್ನಾಗಿ ಅರ್ಥಮಾಡಿಕೊಂಡು, ಅಧಿಕಾರವಾಣಿ

ಯಿಂದ ಮಾತನಾಡಲು ಸಾಧ್ಯವಾಗುವವರೆಗೆ ಕಾಯುವುದೇ ಮೇಲು ಎಂದು ಕೊಂಡಿರ ಬಹುದು. ಕನ್ನಡಿಗನಾದ ಇಂಗ್ಲೀಷ್ ಅಧ್ಯಾಪಕ ಕನ್ನಡದ ಬಗ್ಗೆ ತೋರುತ್ತಿರುವ ಆಸಕ್ತಿ, ಪ್ರೀತಿ ಆದರಗಳು ಕೇವಲ ಸೋಗು, ಕಣ್ಣೊರೆಸುವ ಕೆಲಸ ಎಂದು ಜನ ಭಾವಿಸಬಾರದು: ಅದು ನನ್ನ ವ್ರತ, ಜೀವನ ಮಂತ್ರ ಎಂಬುದನ್ನು ಸಾಧಿಸಿ ತೋರಿಸಬೇಕು, ಹಾಗೇ ಮಾಡಬೇಕಾದರೆ ತೀವ್ರವಾದ ಸಾಧನೆ, ತಪಸ್ಸು ಅಗತ್ಯ ಎಂದು ಅವರು ಮನಗಂಡರು. ಈ ರೀತಿಯ ಗಂಭೀರವಾದ ಹೊಣೆ ಹೊತ್ತ ಅವರ ಆಲೋಚನೆ ಬಹುಶಃ ಸಧ್ಯದ ಅವರ ಆಸಕ್ತಿ, ಆಕಾಂಕ್ಷೆಗಳಿಗೆ ಕಡಿವಾಣ ಹಾಕಿತು.

ಅದೇ ವೇಳೆಯಲ್ಲೇ ಅವರ ಉತ್ಸಾಹ, ಉಲ್ಲಾಸ ಕನಸುಗಳಿಗೆಲ್ಲ ಮಾರಕವಾದ ಸಾಂಸಾರಿಕ ಆಘಾತಗಳು ಅನಿರೀಕ್ಷಿತವಾಗಿ ಬಂದೆರಗಿದುವು. ಇದ್ದ ಒಬ್ಬನೇ ಗಂಡು ಹುಡುಗ ನಾಲ್ಕಾರು ವರ್ಷಗಳ ಎಳೆಯಸ್ಸಿನಲ್ಲಿಯೇ ಯಾವುದೋ ಅಚಾತುರ್ಯವೋ, ಯಾರದೋ ಅಸಡ್ಡೆಯೋ ಕಾರಣವಾಗಿ ದೃಷ್ಟಿಕಳೆದುಕೊಂಡು ಶಾಶ್ವತವಾಗಿ ಕುರುಡ ನಾಗಿಬಿಟ್ಟ. ಈ ನೋವಿನಗಾಯ, ನಾಲ್ಕನೆಯ ಹೆರಿಗೆಯಲ್ಲಿ ಹುಟ್ಟಿದ ಗಂಡುಮಗು ವಿನ ಸಮೇತ ಕೊನೆಯುಸಿರೆಳೆದ ಪ್ರೀತಿಯ ಪತ್ನಿಯ ಸಾವಿನಲ್ಲಿ ಮತ್ತೆ ಬಿರಿಯಿತು. ಯಾರ ಪ್ರಿತಿಯ ಆಸರೆಯಲ್ಲಿ ತಮ್ಮ ಬಾಳಿನ ಆದರ್ಶ ಆಕಾಂಕ್ಷೆಗಳನ್ನು ರೂಪಿಸಿ ಕೊಂಡರೋ, ಯಾರ ಸಹವಾಸದಲ್ಲಿ ತಮ್ಮ ಬಾಳಿನ ಹೊಂಗನಸುಗಳನ್ನು ಕಾಣ ಬಯಸಿದ್ದರೋ, ಆಕೆಯೇ ಇನ್ನಿಲ್ಲವೆನಿಸಿದಾಗ, ಅವರ ಸುಖದ ಸಂತೋಷದ, ಕನಸುಗಳ ಗೋಪುರವೇ ಕಳಚಿ ಬುಡಮೇಲಾಗಿ ಬಿತ್ತು. ಚಿಕ್ಕಪುಟ್ಟ ಮೂವರು ಮಕ್ಕಳ ಲಾಲನೆ ಪಾಲನೆ, ಅಷ್ಟೇನೂ ಆರೋಗ್ಯವಂತಳಲ್ಲದ ತಾಯಿಯ ಸೇವೆ, ಕುರುಡನಾದ ಮಗನ ಭವಿಷ್ಯದ ಬಗ್ಗೆಯ ಚಿಂತೆ, ಅವರ ಚೈತನ್ಯದ ಕುಡಿಯನ್ನು ಚಿವುಟಿದುವು. ತಮ್ಮ ಆಕಾಂಕ್ಷೆ ಆದರ್ಶಗಳ ಸಂಬಂಧವಾದ ಸಹಜ ಅಧೀರತೆಯ ಜೊತೆಗೆ ಈ ಸಿಡಿಲೇಟುಗಳೂ ಬಡಿದು ಅವರು ಸ್ಥಂಭೀಭೂತರಾದರು. ಆ ಆಘಾತ ದಿಂದ ಬಿಡಿಸಿಕೊಂಡು ಮೇಲೇಳಲು ಅವರ ಸೂಕ್ಷ್ಮ ಸಂದೇಗಿಯಾದ ಚೇತನಕ್ಕೆ ಹದಿನೈದು ವರ್ಷಗಳೇ ಹಿಡಿದುವು. ದೀರ್ಘವಾದ ಈ ಅವಧಿಯನ್ನು ಅವರು ವಲ್ಮೀಕವಾಸಿಯೆಂಬಂತೆ ಕಳೆದರು. ಜನ್ಮಜಾತ ಅಂತರ್‌ಮುಖತೆ ಉತ್ಸಾಹ ಆದರ್ಶ ಗಳನ್ನು ಮೆಟ್ಟಿ ಅಧಿಕಾರ ವಹಿಸಿಕೊಂಡರು.

ಸುದೀರ್ಘವಾದ ಅಂತರಂಗದೊಡನೆಯ ಅವರ ಈ ಹೋರಾಟ 1926 ರ ವೇಳೆಗೆ ಒಂದು ನಿಶ್ಚಿತ ಘಟ್ಟವನ್ನು ಮುಟ್ಟಿತೆಂದು ಭಾವಿಸಬಹುದು. ತಾನಿನ್ನು ಈ ಜೀವನದಲ್ಲಿ ಒಂಟಿಯೆಂಬುದನ್ನು ನಿಶ್ಚಯಿಸಿಕೊಂಡ ಅವರು, ಮನಸ್ಸನ್ನು ಗಟ್ಟಿಮಾಡಿ ಕೊಂಡು ಮತ್ತೊಮ್ಮೆ ತಮ್ಮ ಎಳೆಹರೆಯದ ಆದರ್ಶವನ್ನು ಕೈಹಿಡಿದರು. ಅದಕ್ಕೆ ತನ್ನ ಜೀವನವನ್ನು ಸಮರ್ಪಿಸಿಕೊಂಡಲ್ಲದೆ ತನಗೆ ಅನ್ಯಸಾರ್ಥಕತೆಯಿಲ್ಲ ಎಂಬುದನ್ನು ಮನಗಂಡರು. ಇಲ್ಲಿಂದ ನಿಜವಾದ ಅವರ ಸಾಹಿತ್ಯ ಚಟುವಟಿಕೆ ಪ್ರಾರಂಭವಾಯಿ

ಶೆನ್ನಬೇಕು. ಈ ಮೊದಲು ಒಂದೆರಡು ಬಾರಿ ಅಲ್ಪ ಸ್ವಲ್ಪ ಸಂಖ್ಯೆಯಲ್ಲಿ ಅರೆಮನಸ್ಸಿನಿಂದೆಂಬಂತೆ (ಪ್ರತಿಕ್ರಿಯೆ ಅರಿಯಲೊ ?) ಪ್ರಕಟವಾಗಿದ್ದ ತಮ್ಮ ಭಾಷಾಂತರಿತ ಕವನಗಳನ್ನೆಲ್ಲಾ ಕೂಡಿಸಿ 'ಇಂಗ್ಲೀಷ್ ಗೀತೆಗಳನ್ನು ಬೆಳಕಿಗೆ ತಂದರು.' 'ಇಂಗ್ಲೀಷ್ ಗೀತಗಳು' ಬಿ. ಎಂ. ಶ್ರೀ ಅವರ ವ್ಯಕ್ತಿತ್ವ ಮತ್ತು ಆಧುನಿಕ ಕನ್ನಡ ಸಾಹಿತ್ಯ ಎರಡರ ಮೇಲೂ ಅಳಿಸಲಾರದ ಪ್ರಭಾವವನ್ನು ಬೀರಿತು. ಅದು ಒಮ್ಮೆಗೇ ಅವರನ್ನು, ಅವರ ನಿರೀಕ್ಷೆಗೂ ಮೀರಿ, ಯಶಸ್ಸಿನ ಧೌತಪ್ರಭೆಗೀಡು ಮಾಡಿತು. ಎಲ್ಲರ ದೃಷ್ಟಿ ಅವರ ಕಡೆಗೆ ತಿರುಗಿತು. ಆಧುನಿಕ ಕನ್ನಡ ಸಾಹಿತ್ಯಾಕಾಶದಲ್ಲಿ ಹೊಸ ನಕ್ಷತ್ರವೊಂದು ಕಾಣಿಸಿಕೊಂಡು. ಅಲ್ಲಿಯವರೆಗೆ ಆ ದಿಸೆಯಲ್ಲಿ ನಡೆದ ಎಲ್ಲ ಪ್ರಯತ್ನಗಳ ಪರಿಪೂರ್ಣಾವಸ್ಥೆಯ ಪಕ್ವಕೃತಿಯೆನಿಸಿಕೊಂಡಿತು 'ಇಂಗ್ಲೀಷ್ ಗೀತೆಗಳು', ವಲ್ಮೀಕವಾಸ ಸಫಲವಾಯಿತು.

ಸಾಂಸಾರಿಕ ನೋವು ನಷ್ಟಗಳ ಕಾರಣವಾದ ನಿರುತ್ಸಾಹ ನಿರ್ವಿಣ್ಣತೆಗಳ ಬಿಗಿಮುಷ್ಟಿಯಿಂದ ಬಿಡಿಸಿಕೊಂಡು ಮುಂದೆ ಅವರು ಸಂಪೂರ್ಣವಾಗಿ ಕನ್ನಡದ ಸೇವೆಗೆ ಕಟಿ ಕಟ್ಟಿನಿಂತರು. ಇಂಗ್ಲೀಷ್ ಗೀತಗಳ ಜೊತೆಗೆ ಅದೇ ವರ್ಷವೇ ಪ್ರಕಟವಾದ 'ಗದಾಯುದ್ಧ'ದಿಂದ ಹಿಡಿದು 'ಅಶ್ವತ್ಥಾಮನ್' 'ಪಾರಸಿಕರು' ಹೀಗೆ ಕ್ರಮವಾಗಿ ಮುಂದೆ ಅವರ ಕೃತಿಗಳು ಪ್ರಕಟವಾಗಿ ಒಂದೊಂದು ಅಚ್ಚಳಿಯದ ಪ್ರಭಾವವನ್ನು ಬೀರಿದುವು. ಇದರ ಜೊತೆಗೆ ಇತರ ಸಾಹಿತ್ಯ ಸಂಬಂಧವಾದ ಚಟುವಟಿಕೆಯೂ ಭರದಿಂದ ಸಾಗಿತು. ಕನ್ನಡದ ಗೌರವ ಪ್ರಾಧ್ಯಾಪಕರನ್ನಾಗಿ ನಿಯಮಿಸುವುದರ ಮುಖಾಂತರ ವಿಶ್ವವಿದ್ಯಾಲಯ ಇವರ ಕನ್ನಡ ಪಾಂಡಿತ್ಯವನ್ನು ಗುರುತಿಸಿತು. ಇದು ಅವರ ಆತ್ಮವಿಶ್ವಾಸಕ್ಕೆ ಪುಟಕೊಟ್ಟಿತು. 1930 ರಲ್ಲಿ ಬೇಡದ ಮನಸ್ಸಿನಿಂದ ಬೆಂಗಳೂರಿಗೆ ಹೋಗಿ ನೆಲಸಿದರೂ, ಬಹು ಬೇಗನೆ ಅಲ್ಲಿಯೂ ಅವರು ಮುಂದಾಳತ್ವ ವಹಿಸಿದರು. ಆತ್ಮವಿಶ್ವಾಸ ಬಲಿಯುತ್ತಾ ಬಂತು. ಹಳೆಯ ಗಾಯಗಳು ಮಾಯುತ್ತಾ ಬಂದವು. ಆದರ್ಶ ಹಸಿರಾಯಿತು. ಉತ್ಸಾಹ ಚಿಮ್ಮಿತು. ಆದರೆ ವಿಧಿ ಬೇರೆಯೇ ಬಗೆಯಿತು. ಅದು ಮತ್ತೊಮ್ಮೆ ಅವರನ್ನು ಬಡಿದಪ್ಪಳಿಸಿತು. ಈ ಬಾರಿ ಅಳಿಯನ ಅಕಾಲಿಕ ಮೃತ್ಯುವಿನ ರೂಪದಲ್ಲಿ ತುಂಬು ಯೌವನದಲ್ಲೇ ಮಗಳು ವೈಧವ್ಯವನ್ನು ವಹಿಸಿದಳು. ಅವರ ಹೃದಯ ದುಃಖದ ಆವೇಗದಿಂದ ಕಂಪಿಸಿತು. ಕೆಲವೇ ದಿನಗಳ ಅಂತರದಲ್ಲಿ ತಾಯಿಯೂ ತೀರಿಹೋದಳು. ಶ್ರೀ ಅವರ ದುಃಖದ ಪಾತ್ರೆ ತುಂಬಿತು. ಆದರೂ ಅವರು ಈ ಬಾರಿ ಬೇಗನೆ ಚೇತರಿಸಿಕೊಳ್ಳಲು ಶಕ್ತರಾದರು ಎನ್ನಬೇಕು. ಅದಕ್ಕೆ ಕಾರಣ, ಈ ಬಾರಿ, ಅವರ ಮುಂದಿನ ಗುರಿ ಅವರ ಕಣ್ಣ ಮುಂದೆ ಕಟ್ಟಿದಂತೆ ನಿಚ್ಚಳವಾಗಿ ನಿಂತಿದ್ದುದೇ ಇರಬೇಕು. ವೈಯಕ್ತಿಕ ಕಷ್ಟನಷ್ಟಗಳು ಈ ಬಾರಿ ಅವರನ್ನು ಅದುರಿಸಿದರೂ ಅಧೀರರನ್ನಾಗಿ ಮಾಡಲಿಲ್ಲ. ಹಾಗೆ ಮಾಡಿದರೂ ಅದನ್ನವರು ಹೊರಗೆ ತೋರಗೊಡಲಿಲ್ಲ. ಬದಲು, ಮತ್ತಷ್ಟು ಏಕಾಗ್ರತೆಯಿಂದ, ಅದೆಲ್ಲವನ್ನು ಮರೆತುಬಿಡಲೋ ಎಂಬಂತೆ ಕನ್ನಡದ ಕೆಲಸಕ್ಕೆ ಧುಮ್ಮಿಕ್ಕಿದರು. ಮುಂದೆ

'ಅಶ್ವತ್ಥಾಮನ್' ನಾಟಕದ ವಿಷಯವಾದ ವಾದವಿವಾದಗಳು ಉದ್ರಿಕ್ತಾವಸ್ಥೆಯನ್ನು ಮುಟ್ಟಿದ್ದವು. ವಿನಾಕಾರಣವಾಗಿ ಅನೇಕರು ಅವರ ಮನಸ್ಸನ್ನು ನೋಯಿಸಿದರಾದರೂ ಶ್ರೀ ಅವರು ಅವನ್ನು ಎದೆಯೊಡ್ಡಿ ಸಹಿಸಿದರು.

1938 ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆಯಾದ ಮೇಲೆ ಶ್ರೀ ಅವರು ಸಂಪೂರ್ಣವಾಗಿ ಕನ್ನಡನಾಡಿನ ಸ್ವತ್ತಾದರು. ಇದೇ ಸಂದರ್ಭದಲ್ಲಿ ಅವರ ವ್ಯಕ್ತಿತ್ವದಲ್ಲಿಯೂ ಒಂದು ಮುಖ್ಯ ಬದಲಾವಣೆಯಾಯಿತು. ಇದುವರೆಗೂ ಅಂತರ್ಮುಖಿಯಾಗಿದ್ದ ಅವರ ವ್ಯಕ್ತಿತ್ವ, ಬಹಿರ್ಮುಖಿಯಾಗಲು ಹಾತೊರೆಯುತ್ತಿತ್ತೆಂಬಂತೆ, ಒಮ್ಮಿಂದೊಮ್ಮೆಲೇ ಬಿಡುಗಡೆ ಪಡೆಯಿತು. ಕನ್ನಡವೇ ಉಸಿರೆಂಬಂತೆ ಈ ನಾಲ್ಕು ವರ್ಷಗಳನ್ನು ಅವರು ಕಳೆದರು. ಕನ್ನಡನಾಡಿನ ಮೂಲೆಮೂಲೆಯನ್ನೂ ಆಸರು ಬೇಸರೆನ್ನದೆ ಸುತ್ತಿ ಜನತೆಯ ಹೃದಯದಲ್ಲಿ ಕನ್ನಡದ ಬಗ್ಗೆ ಪ್ರೀತಿ ಅಭಿಮಾನಗಳನ್ನು ಉಕ್ಕಿಸಿದರು. ಅನೇಕ ರೀತಿಯ ಸಾಹಿತ್ಯ ಚಟುವಟಿಕೆಗಳನ್ನು ಪ್ರಾರಂಭಿಸಿದರು. ಪರಿಷತ್ತಿನ ಹೆಸರು ಎಲ್ಲೆಲ್ಲಿಯೂ ಕೇಳಿಬರುವಂತೆ ಮಾಡಿದರು. ಎಲ್ಲರ ಗಮನ ಸೆಳೆದು, ಸೂರೆಗೊಂಡರು. ಕನ್ನಡದ ಬಾವುಟವನ್ನು ಎತ್ತಿ ಹಿಡಿದರು. ಕನ್ನಡದ ಕಣ್ಮಣಿಯೆನಿಸಿಕೊಂಡರು. ದೊರೆಗಳ ಅನುಗ್ರಹಕ್ಕೂ ಪಾತ್ರರಾದರು. ಇನ್ನೇನು ಬೇಕು ?

ಮೇಲುನೋಟಕ್ಕೆ ಇದಕ್ಕಿಂತ ಸಾರ್ಥಕವಾದ ಜೀವನ ಬೇರೆ ಇಲ್ಲ ಎನ್ನಿಸಬಹುದು ಆದರೆ ವಾಸ್ತವಸಂಗತಿ ಹಾಗಿರಲಿಲ್ಲ. ಹೆಜ್ಜೆ ಹೆಜ್ಜೆಗೂ ವಿರೋಧವನ್ನು ಅವರು ಎದುರಿಸಬೇಕಾಯಿತು. ಅವರ ಜೀವಮಾನದ ಅತ್ಯಂತ ಜಯಪ್ರದವಾದ ಈ ಅವಧಿಯಲ್ಲಿಯೂ ಅವರು ನೋವಿನ ನಿಟ್ಟುಸಿರು ಬಿಡದೆ ಇರಲಾಗಲಿಲ್ಲ. ನೋವಿನ ನೆಳಲಿಲ್ಲದ ನಲಿವನ್ನು ಅವರು ಪಡೆದು ಬಂದಿರಲಿಲ್ಲ. ಆಗ ಅವರ ಸಂಕೋಚ ಸ್ವಭಾವ, ಸೂಕ್ಷ್ಮಪ್ರವೃತ್ತಿಗಳು ತಲೆಯೆತ್ತಿದುವಾದರೂ ಅದನ್ನು ಮೀರಿದ ಅದಮ್ಯ ಉತ್ಸಾಹ ಆವೇಶಗಳಿಗೆ ತಮ್ಮನ್ನು ತಾವು ಒಪ್ಪಿಸಿಕೊಂಡು ಕನ್ನಡವನ್ನು ಬಿಟ್ಟು ಅನ್ಯವನ್ನು ಮರೆತರು. ಪರಿಷತ್ತಿನ ಉಪಾಧ್ಯಕ್ಷ ಗದ್ದುಗೆ ಬರುಬರುತ್ತಾ ಮುಳ್ಳಿನ ಹಾಸಿಗೆಯಾಯಿತು. ಸಣ್ಣಪುಟ್ಟ ವಿಷಯಗಳಿಗೂ ತೀವ್ರವಾದ ವಿರೋಧವನ್ನು ಅವರು ಎದುರಿಸಬೇಕಾಯಿತು. ನ, ಣ, ಪ್ರಸಂಗವಂತೂ ಅವರನ್ನು ಜಿಗುಪ್ಸೆಯಿಂದ ಹಿಮ್ಮೆಟ್ಟುವಂತೆ ಮಾಡಿತು. ಕ್ಷುದ್ರರಾಜಕೀಯ ಪರಿಷತ್ತಿನಲ್ಲಿ ತಾಂಡವವಾಡಿತು. ಇದೆಲ್ಲಾ ನಿಜವೇ ಎಂದು ಅವರೇ ಸಂಶಯಪಟ್ಟುಕೊಳ್ಳುವಷ್ಟರ ಮಟ್ಟಿಗೆ ವಾತಾವರಣ ಕಹಿಯಾಯಿತು. ಶ್ರೀ ಬಹಳಷ್ಟು ನೊಂದರು.

ಪರಿಣಾಮವಾಗಿ, ಪ್ರಾಧ್ಯಾಪಕವೃತ್ತಿಯಿಂದ ಪರಿಷತ್ತಿನ ಉಪಾಧ್ಯಾಕ್ಷ ಸ್ಥಾನದಿಂದ ನಿವೃತ್ತರಾದ ದಿನವೇ ಹೆಚ್ಚು ಕಡಿಮೆ ಇದ್ದಕ್ಕಿದ್ದಂತೆ ಒಮ್ಮೆಲೇ ಅವರು, ಜನತೆಯ ಹೃದಯರಂಗದಿಂದಲ್ಲದಿದ್ದರೂ ಅವರ ಕಣ್ಣಿನ ರಂಗದಿಂದ, ಮರೆಯಾದರು.

ಈಗ ಅವರ ಆತ್ಮವಿಶ್ವಾಸದ ಅಡಿಪಾಯುವೇ, ಕುಸಿದುಬಿತ್ತು. ಜೊತೆಗೇ ಅವರ ಸಹಜ ಪ್ರವೃತ್ತಿಗಳಾದ ಸಂಕೋಚ, ಸೂಕ್ಷ್ಮಮನೋಭಾವಗಳೂ, ನಿರ್ವಿಣ್ಣತೆಯೂ ಕೂಡಿ ಕೊಂಡು ಶ್ರೀ ಅವರು ಬಸವನ ಹುಳುವಿನಂತೆ ಮತ್ತೆ ತಮ್ಮ ಚಿಪ್ಪನ್ನು ಹೊಕ್ಕರು. ಈ ಅಘಾತದಿಂದ ಮತ್ತೆ ಅವರು ಚೇತರಿಸಿಕೊಳ್ಳಲು ಸಾಧ್ಯವಾಗಲೇ ಇಲ್ಲ. 1942 ರಿಂದ 1944ರ ಈ ಎರಡು ವರುಷಗಳ ಅವಧಿಯಲ್ಲಿ ಅವರು ಸಾರ್ವಜನಿಕವಾಗಿ ಕಾಣಿಸಿಕೊಂಡ ಸಂದರ್ಭಗಳನ್ನು ಬೆರಳಿನಿಂದ ಎಣಿಸಬಹುದು. ಬಿ.ಎಂ.ಶ್ರೀ ಅವರ ಚಲಾವಣೆ ನಿಂತುಹೋಯಿತು. ಉತ್ಸವಮೂರ್ತಿಯನ್ನು ಊರೆಲ್ಲಾ ವಿಜೃಂಭಣೆ ಯಿಂದ ಸುತ್ತಿಸಿ ತಂದು ದೇವಾಲಯದಲ್ಲಿರಿಸಿ, ದೀಪ ಆರಿಸಿ, ಬೀಗಮುದ್ರೆ ಜಡಿದಂತಾ ಯಿತು. ಶ್ರೀಕಂಠವಾಣಿ ಸ್ಥಗಿತವಾಯಿತು. ಎಂಥ ಎತ್ತರದಿಂದ ಎಂಥ ಆಳಕ್ಕೆ ! ಈ ರೀತಿಯ ಬಾಳು ಬಹು ಬೇಗನೇ ಅವರಿಗೆ ಅಸಹನೀಯವಾಯಿತು. ಎಷ್ಟು ದಿನ ತಾನೇ ಅನಾದರಕ್ಕೆ ಈಡಾಗಿ ಅಜ್ಞಾತವಾಸಮಾಡಿಯಾರು ? ಇದೇ ಸಂದರ್ಭದಲ್ಲಿ ಅವರನ್ನು ಅವರ ಪೂರ್ವದ ಸಾಂಸಾರಿಕ ವ್ಯಥೆಗಳು ಹರಿದು ತಿನ್ನಲು ಪ್ರಾರಂಭಿಸಿರ ಬೇಕು. ತಾನಿನ್ನು ಒಂಟಿಯಾಗಿ, ಜನರಿಂದ ಬೇರೆಯಾಗಿ ಉಳಿದು ಬಾಳಲಾರೆನೆಂಬ ಸತ್ಯ ಮನವರಿಕೆಯಾಗಿರಬೇಕು. ಅಂತಲೇ ಅವರು ಕೋರಿಕೆಯನ್ನು ಮುಂದಿಟ್ಟ ಕೂಡಲೇ, ಪೂರ್ವಾಪರವನ್ನೂ ಆಲೋಚಿಸದೆ, ಧಾರವಾಡದ ಕಾಲೇಜಿಗೆ ಪ್ರಿನ್ಸಿಪಾಲ ರಾಗಿ ಹೋಗಲು ನಿರ್ಧರಿಸಿದರು. ಅನಾದರಕ್ಕೀಡಾದ ಅಜ್ಞಾತವಾಸದ ಈ ಎರಡು ವರ್ಷಗಳ ಅವಧಿ ಬಹುಶಃ ಅವರ ಜೀವಮಾನದಲ್ಲೆಲ್ಲಾ ಅತ್ಯಂತ ದಾರುಣವಾದ ಕಾಲವಾಗಿರಬೇಕು.

ಇಷ್ಟಕ್ಕೆಲ್ಲಾ ಅವರು ಮಾಡಿದ ಪಾಪವೇನು ? ಇಷ್ಟರಮಟ್ಟಿಗೆ ಅವರನ್ನು ಮೂಲೆಗುಂಪಾಗುವಂತೆ ಮಾಡಲು ಅವರ ವಿರೋಧಶಕ್ತಿಗಳು ಅದೆಷ್ಟು ಜಾಗ್ರತೆ ಯಿಂದ ಅದೆಂತಹ ನೀಲಿನಕಾಶೆಯನ್ನು ಸಿದ್ಧಪಡಿಸಿರಬೇಕು ? ನಾಲ್ಕು ವರುಷಗಳೂ ಕನ್ನಡನಾಡಿನ ಉದ್ದಗಲಕ್ಕೂ 'ಇಂತಪ್ಪನಿಲ್ಲವೆ'ಂಬಂತೆ ವಿಜೃಂಭಿಸಿದ ಬಿ.ಎಂ.ಶ್ರೀ ಅವರ ಸ್ಥಿತಿ–ಎರಡು ಮೂರು ಗಂಟೆಗಳಿಗೆ ಬಾಡಿಗೆಗಾಗಿ ತಂದ ವಸ್ತ್ರಭೂಷಣಗಳಿಂದ ರಂಗದಮೇಲೆ ವಿಜೃಂಭಿಸಿದ ನಾಯಕನಟ, ಆಟ ಮುಗಿದ ಕೂಡಲೇ ಅವುಗಳನ್ನು ಅದರ ಮಾಲೀಕನಿಗೆ ಒಪ್ಪಿಸಿ ಸಪ್ಪೆಯಾಗಿ ಮರಳುವಂತೆ ಆಯಿತು. ಕೇವಲ ಪರಿಷತ್ತಿನ ಉಪಾಧ್ಯಕ್ಷ ಸ್ಥಾನ ತನ್ನ ವರ್ಚಸ್ಸನ್ನು ಅವರಿಗೆ ಸ್ವಲ್ಪಕಾಲ ಎರವಲಾಗಿತ್ತು, ಅದರಿಂದ ಅವರು ನಿವೃತ್ತರಾದ ಕೂಡಲೇ ಅದನ್ನವರಿಂದ ಕಸಿದುಕೊಂಡುಬಿಟ್ಟಿತೆ ? ಅಂತೂ ಕನ್ನಡದ ಕೆಲಸಕ್ಕೆ ಕಟಿಬದ್ಧರಾಗಿ ನಿಂತು, ಕಾರಣ ಪುರುಷನೆಂಬಂತೆ ದುಡಿದ ಜೀವ ಆ ಉತ್ಸಾಹ ಆವೇಶಗಳನ್ನೆಲ್ಲಾ ಒಮ್ಮೆಲೇ ಬಸಿದುಬಿಟ್ಟಿತೋ ಎಂಬಂತೆ ನಿರ್ವಿಣ್ಣ ವಾಯಿತು, ಮೂಕವೇದನೆಗೆ ಬಲಿಯಾಯಿತು.

ಅಂತಿಮವಾದ 1944 ರಿಂದ 1946ರ ವರೆಗಿನ ಎರಡು ವರುಷಗಳು ಕೂಡ ಅವರ ನಿರೀಕ್ಷೆಯನ್ನು ಮತ್ತೂ ಸುಳ್ಳಾಗಿಸಿದವು. ಅವರು ಪ್ರಿನ್ಸಿಪಾಲ್‌ಗಿರಿಯನ್ನು

ಒಪ್ಪಿಕೊಂಡು ಧಾರವಾಡಕ್ಕೆ ಹೋದ ಸಂದರ್ಭವಂತೂ, ಮುಳುಗುವ ವ್ಯಕ್ತಿಯೊಬ್ಬ ಜೀವದಾಸೆಯಿಂದ ತೇಲಿಬಂದ ಕಡ್ಡಿಯ ತುಂಡೊಂದನ್ನು ಬಾಚಿ ತಬ್ಬಿಕೊಂಡು ಬದುಕುಳಿಯಲೆತ್ನಿಸಿದಂತೆ ಎನ್ನಿಸದಿರದು. ಅವರ ಈ ಪ್ರತ್ಯಾಶೆ, ಅವರ ಗೆಳೆಯರ ಈ ಪ್ರಯತ್ನ ಹೆಮ್ಮರವೊಂದನ್ನು (ಮುದಿಮರ?) ಅದರ ಸ್ಥಾನದಿಂದ ಬೇರುಸಮೇತ ಕಿತ್ತು ಬೇರೊಂದೆಡೆ ನೆಡಲು ಮಾಡಿದ ಪ್ರಯತ್ನದಂತಿದೆ. ಹೊಸ ನೆಲ, ಹೊಸ ವಾತಾವರಣದಲ್ಲಿ ತನ್ನ ಜೀವಸತ್ವವನ್ನು ಹೀರಿಕೊಂಡು ವರ್ಧಿಸುವ ಶಕ್ತಿಯನ್ನು ಆ ಬೇರುಗಳು ಅಲ್ಲಿಗಾಗಲೇ ಬಹುಶಃ ಕಳೆದುಕೊಂಡಿವೆ. ಹಿಂದಿನ ಆತ್ಮವಿಶ್ವಾಸ ಅವರಿಗೆ ದಕ್ಕದೇ ಹೋಯಿತು. ಹಿಂದಿನಂತೆ ಜನತೆಯನ್ನು ಆಕರ್ಷಿಸಲಾಗಲೀ, ಆದರ್ಶವನ್ನು ತುಂಬಲಾಗಲೀ ಅವರು ಅಸಮರ್ಥರಾದರು. ಕ್ರಮೇಣ ಆ ಮರ ಕಮರಿತು. ಒಂದು ದಿನ ಬುಡ ಮೇಲಾಗಿ ಬಿತ್ತು.

ಪ್ರಿನ್ಸಿಪಾಲರಾಗಿ ಅವರು ಧಾರವಾಡದಲ್ಲಿ ಸಾಧಿಸಿದ್ದೇನೇ ಇರಲಿ ಬಿಡಲಿ. ಆಧುನಿಕ ಕನ್ನಡ ಸಾಹಿತ್ಯದ ಆಚಾರ್ಯಪುರುಷರೆನ್ನಿಸಿಕೊಂಡ ಬಿ.ಎಂ.ಶ್ರೀ ಅಲ್ಲಿ ಸಾಧಿಸಿದ್ದೇನು ? ಏನೂ ಇಲ್ಲ. ಧಾರವಾಡಕ್ಕೆ ಹೋಗಿ ನೆಲಸಿದ ಬಿ.ಎಂ.ಶ್ರೀ ಹಿಂದಿನ ಶ್ರೀ ಅಲ್ಲ. ಹಗಲ ಚಂದ್ರ. ಸಂಪೂರ್ಣ ನಿರ್ವಿಣ್ಣತೆಗೆ ಬಲಿಯಾಗಿದ್ದ ಅವರು ಅದೆಷ್ಟೇ ಪ್ರಯತ್ನಪಟ್ಟರೂ ತಮ್ಮ ಆ ಪಾತ್ರಕ್ಕೆ ಜೀವಕಳೆ ತುಂಬಲು ಅಸಮರ್ಥರಾದರು. ಹೋಗಲಿ, ಅಲ್ಲಿ ಅವರು ಪಡೆದದ್ದಾದರೂ ಏನು ? ಮಿತ್ರರೆನಿಸಿಕೊಂಡವರ ಅರೆ ಮನಸ್ಸಿನ ಆದರ ; ವ್ಯವಸ್ಥಾಪಕ ಮಂಡಲಿಯ ಅವಜ್ಞೆ ; ಸಾಹಿತಿ ಪ್ರಭೃತಿಗಳ ಅಸಡ್ಡೆ; ಎಲ್ಲಕ್ಕಿಂತಲೂ ಮಿಗಿಲಾಗಿ ಅನೈರ್ಮಲ್ಯ ವಾಸ್ತವ್ಯದ ಕಾರಣವಾದ ಮಲೇರಿಯಾ ! ಶ್ರೀ ಸಂಪೂರ್ಣವಾಗಿ ಸೋಲನ್ನೊಪ್ಪಿಕೊಂಡು, ಒದಗಿಬಂದ ಗತಿಯನ್ನು ತುಟಿಯೆರಡು ಮಾಡದೆ ಸಹಿಸಿಕೊಂಡು, ಬಹುಶಃ ದಿನಗಳನ್ನೆಣಿಸಿದರು. ಇಷ್ಟಾದರೂ ಈ ಎರಡು ವರುಷಗಳು ಈ ಹಿಂದಿನ ಎರಡು ವರ್ಷಗಳಿಗಿಂತ ಅವರ ದೃಷ್ಟಿಯಲ್ಲಿ ಎಷ್ಟೋ ಪಾಲು ಮೇಲು ಎನ್ನಿಸಿರಬೇಕು. ಅಂತೂ ಬಿ.ಎಂ.ಶ್ರೀ ತಮ್ಮ ಜೀವನದ ಜೀರ್ಣೋದ್ಧಾರದ ಈ ಪ್ರಯತ್ನದಲ್ಲಿ ಸಂಪೂರ್ಣವಾಗಿ ಅಸಫಲರಾದರು. ಅಂತಿಮವಾಗಿ ಹತಾಶರಾದರು.

ಬಿ.ಎಂ.ಶ್ರೀ ಸ್ವಭಾವತಃ ಪ್ರಮುಖವಾಗಿ ಸೂಕ್ಷ್ಮಸ್ವಭಾವದ ಆದರ್ಶಪರರಾದ ಅಂತರ್‌ಮುಖಿ. ಇದೇ ಗುಣವೇ ಹೊರಗೆ ಗಂಭೀರ ಮನೋಭಾವವಾಗಿಯೂ ಕಾಣಿಸಿಕೊಂಡಿತು. ಕಾಲಕ್ರಮೇಣ ಇದರ ಜೊತೆಗೆ ವಿಷಾದಬೆರೆತ ಒಂಟಿತನವೂ ಸೇರಿಕೊಂಡಿತು. ಆದರೆ ಅವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಈ ಗುಣಗಳ ಸ್ಥಾನದಲ್ಲಿ ಉತ್ಕಟ ಆವೇಶರೂಪವೆಂದೂ ಕರೆಯಬಹುದೋ ಏನೋ. ಮುಂದೆ, ಅಂತಿಮ ವರುಷಗಳಲ್ಲಿ ಉತ್ಸಾಹವೆಲ್ಲಾ ಪೂರ್ಣ ಬಸಿದುಹೋಗಿ ನಿರ್ವಿಣ್ಣತೆ, ಒಂಟಿ ತನ, ಅಸಹಾಯತೆ, ಹತಾಶೆಗಳು ತಾಂಡವವಾಡಿದುವು.

ಅವರ ವ್ಯಕ್ತಿತ್ವದಲ್ಲಿನ ಈ ಪ್ರವೃತ್ತಿಗಳ ಪೈಪೋಟಿಗೆ ಅವರು ಜೀವನದಲ್ಲಿ ಅನುಭವಿಸಿದ, ಹಿಂದೆ ನೋಡಿದ, ಏರುಪೇರುಗಳೇ ಕಾರಣ. ಈಗಾಗಲೇ ಗಮನಿಸಿದಂತೆ ಅವುಗಳಲ್ಲಿ ಮುಖ್ಯವಾದುವು ಎರಡು. ಒಂದು ಸಾಂಸಾರಿಕ ಕಷ್ಟನಷ್ಟಗಳ ರೂಪವಾದದ್ದು. ಆಪ್ತೇಷ್ಟರಲ್ಲಿ ಒಬ್ಬೊಬ್ಬರನ್ನು ಅವರು ಕಳೆದುಕೊಂಡಾಗಲೂ ಶ್ರೀ ಅವರು ಅಷ್ಟಷ್ಟುಮಟ್ಟಿಗೆ ಎಲೆಯುದಿರಿದ ಮರದಂತೆ ವಿವಿಕ್ತವಾಗುತ್ತಾ ಹೋದರು. ಎರಡನೆಯ ಕಾರಣ ಸಾರ್ವಜನಿಕ ಜೀವನದಲ್ಲಿ ಅವರು ಎದುರಿಸಬೇಕಾಗಿ ಬಂದ ವಿರೋದಶಕ್ತಿಗಳು ವೃತ್ತಿಗೆ ಸಂಬಂಧಿಸಿದಂತ ಮೂರನೆಯ ಕಾರಣವೊಂದು ಇದ್ದಿರಬಹುದಾದರೂ ಅದು ಅಷ್ಟೇನೂ ಮಹತ್ವದ ಪಾತ್ರವಹಿಸಿದಂತೆ ಕಂಡುಬರುವುದಿಲ್ಲ. ಮೊದಲೆರಡರಲ್ಲಿ ಮೊದಲನೆಯದನ್ನು ಮರೆಯುವ ಪ್ರಯತ್ನವನ್ನೇನೋ ಅವರು ಮಾಡಿದರು, ಆದರೆ ಎರಡನೆಯದು ಅದಕ್ಕೆ ಅವಕಾಶ ಕೊಡಲಿಲ್ಲ ಹೀಗಾಗಿ ಎರಡೂ ಸೇರಿ ಅವರನ್ನು ಹಣ್ಣಾಗಿಸಿದುವು.

ಬೇರೆಯವರನ್ನು ನೋಯಿಸುವುದು ಶ್ರೀ ಅವರ ಸ್ವಭಾವವೇ ಅಲ್ಲ. ಬದಲು ಬೇರೆಯವರು ತಮ್ಮನ್ನು ಅದೆಷ್ಟೇ ನೋಯಿಸಿದರೂ ತುಟಿಕಚ್ಚಿ ಬಿಗಿಹಿಡಿದು ಸಹಿಸುವರು. ಮತ್ತೊಬ್ಬರಲ್ಲಿ ಅದನ್ನು ಹೇಳಲೂ ಹೋಗರು. ನಸು ವಿಷಾದ ಬೆರೆತ ಆ ನಗೆಯಲ್ಲಿ ಎಂದೂ ಯಾರೂ ಕಪಟವನ್ನು ಕಂಡಿಲ್ಲ. ಹೃದಯದ ಕಾವುನೋವು ಅತ್ಯಂತ ಸಹಜವಾಗಿ ಅವರ ತುಟಿಗಳಲ್ಲಿ ನಗೆಯಾಗಿ ಅರಳುತ್ತಿತ್ತು.

ಅವರಿಗೆ ಆಪ್ತವಾದ ಮಿತ್ರವರ್ಗ ದೊರಕಲಿಲ್ಲ. ಸಖ್ಯಕ್ಕೆ ಹಾತೊರೆದ ಜೀವ ಅವರದಾದರೂ ಮೇಲೆಬಿದ್ದು ಸ್ನೇಹ ಮಾಡಿಕೊಳ್ಳುವ ಸ್ವಭಾವ ಅವರದಲ್ಲ. ಹೀಗಾಗಿ ಅವರಿಗೆ ದೊರೆತ ಮಿತ್ರವರ್ಗ ಅವರ ಸುಖ ಸಂತೋಷಗಳಲ್ಲಿ ಪಾಲುಗಾರರೇ ವಿನಹ ನೋವಿನಲ್ಲಿ ಪಾಲ್ಗೊಂಡಂತೆ ಕಂಡುಬರುವುದಿಲ್ಲ. ಶ್ರೀ ಅವರಿಗೆ ಅತ್ಯಂತ ಆಪ್ತವಾದ ಮಿತ್ರವರ್ಗವಿಲ್ಲದೇ ಹೋದುದಕ್ಕೆ ಅವರ ಸ್ವಭಾವವೂ ಸ್ವಲ್ಪಮಟ್ಟಿಗೆ ಕಾರಣ. ಅವರು ತಮ್ಮ ನೊಂದ ಹೃದಯದ ಮುಂದೊಂದು ತೆರೆಯೆಳೆದು, ಆ ದೃಶ್ಯವಾಗಲೀ, ಅದರ ಇರುವಿಕೆಯ ಸುಳಿವಾಗಲೀ, ಯಾರಿಗೂ, ಆಗವಂತೆ ನಡೆದುಕೊಂಡರು ಇದರಿಂದ ಅವರು ಇಷ್ಟು ಜನದ ಮಧ್ಯೆಯಿದ್ದರೂ ಒಂಟಿಯಾಗಿಯೇ ಉಳಿದರು. ಇದರ ತಪ್ಪನ್ನು ಶ್ರೀ ಅವರ ವ್ಯಕ್ತಿತ್ವವೊಂದರ ಮೇಲೆಯೇ ಹಾಕುವುದೂ ಸರಿಯಲ್ಲ ; ಅದರ ಹೊಣೆ ಅವರ ನೊಂದ ಹೃದಯವನ್ನು ತಮ್ಮ ಸದ್ಭಾವನೆಯಿಂದ ಮಿಡಿಯಲಶಕ್ತವಾದ, ಅಥವಾ ಮಿಡಿಯಲಿಚ್ಛಿಸದ ಸಮೀಪವರ್ತಿಗಳೆನಿಸಿಕೊಂಡವರ ಮೇಲೆಯೂ ಇತ್ತೆಂಬುದನ್ನು ವ್ಯಸನದಿಂದ ಮನಗಾಣಬೇಕಾಗಿದೆ. ಶುದ್ಧವಾದ, ಆತ್ಮೀಯವಾದ ಸ್ನೇಹದ ಕೊರತೆ ಶ್ರೀ ಅವರ ಜೀವನದಲ್ಲಿ ಎದ್ದು ಕಾಣುತ್ತದೆ.

ಈ ಹಿನ್ನೆಲೆಯಲ್ಲಿ ಅವರು ಮಹಾರಾಜರಿಂದ ಕೊಡಮಾಡಿದ ಬಿರುದು ಪದಕಗಳನ್ನು ಸ್ವೀಕರಿಸಿದ ಕೃತಾರ್ಥ ಮನೋಭಾವವನ್ನು ಸುಲಭವಾಗಿ ಅರಿಯಬಹುದಾಗಿದೆ

ತನ್ನನ್ನು ಅರ್ಥಮಾಡಿಕೊಂಡವರು ಒಬ್ಬರಾದರೂ ಇದ್ದಾರೆ ಎಂಬ ಕೃತಜ್ಞತೆಯ ಮನೋಭಾವ ಅಲ್ಲಿ ಎದ್ದು ಕಾಣುತ್ತದೆ.

ಇದೆಲ್ಲದರ ಪಡಿನೆಳಲನ್ನು ಬಿ.ಎಂ.ಶ್ರೀ ಅವರು ರಚಿಸಿರುವ ಪ್ರತಿಯೊಂದು ಕೃತಿಯಲ್ಲಿಯೂ ಕಾಣಬಹುದಾಗಿದೆ. 'ಗದಾಯುದ್ಧ' 'ಅಶ್ವತ್ಥಾಮನ್' 'ಪಾರಸಿಕರು' ಏಕೆ 'ಇಂಗ್ಲೀಷ್‌ಗೀತೆಗಳ' ಬಹುಮಾನ ಕವನಗಳು–ಇಲ್ಲಿಯ ವಸ್ತುವಿನಲ್ಲೆಲ್ಲಾ ಸಮಾನವಾಗಿ ಗುಪ್ತಗಾಮಿನಿಯಾಗಿ ಹರಿಯುತ್ತಿರುವ ವಿಷಣ್ಣಛಾಯೆ ಕೇವಲ ಆಕಸ್ಮಿಕವಾಗಿರಲಾರದು.

ಬಿ.ಎಂ.ಶ್ರೀ ಅವರ ಕತೃತ್ವಶಕ್ತಿಗಿಂತಲೂ ಅವರ ದೂರದೃಷ್ಟಿ, ಅವರ ಕೃತಿಗಳಿಗಿಂತಲೂ ಅವರು ಕೊಟ್ಟ ಪ್ರೋತ್ಸಾಹ, ಮಾಡಿದ ಪ್ರಯತ್ನ, ಹಾಕಿಕೊಟ್ಟ ದಾರಿ ನೂರುಮಡಿ ಹೆಚ್ಚು, ಒಬ್ಬವ್ಯಕ್ತಿ ತಾನೇನನ್ನು ಮಾಡಿ ತೋರಿಸಿದನೆನ್ನುವುದಕ್ಕಿಂತ ಯಾವ ಸದುದ್ದೇಶವನ್ನು ಹೊಂದಿದ್ದನೆನ್ನುವುದು ಮುಖ್ಯ. ಒಬ್ಬನ ಹಿರಿಮೆ ಅವನು ಹಾಕಿಕೊಟ್ಟ ಮಾರ್ಗದಲ್ಲಿ ಮುಂದೆ ಅದೆಷ್ಟು ಮಂದಿ, ಅದೆಷ್ಟುಕಾಲ, ಕ್ರಮಿಸುತ್ತಾರೆ ಎಂಬಲ್ಲಿ, ತಡವಾಗಿಯಾದರೂ ಬೆಳಕಿಗೆ ಬರುತ್ತದೆ. ಈ ದೃಷ್ಟಿಯಲ್ಲಿ ಬಿ.ಎಂ.ಶ್ರೀ ಆಧುನಿಕ ಕನ್ನಡ ಸಾಹಿತ್ಯಾಕಾಶದಲ್ಲಿ ಎಂದೆಂದಿಗೂ ಮಿನುಗುವ ಧ್ರುವತಾರೆ.

ಒಟ್ಟಿನಲ್ಲಿ, ಬಿ.ಎಂ.ಶ್ರೀ ಅವರು ಜೀವನದುದ್ದಕ್ಕೂ ಬೆಲ್ಲಕ್ಕಿಂತ ಬೇವನ್ನೆ ಹೆಚ್ಚು ಮೆದ್ದವರು. ಆದರೆ ಅದನ್ನು ಎಂದೂ ತೋರಿದವರಲ್ಲ. ಅವರ ಕನ್ನಡನಾಡು, ನುಡಿಗಳ ಅವ್ಯಾಜಪ್ರೇಮ, ಅವರ ಸಾಂಸಾರಿಕ, ಸಾರ್ವಜನಿಕ ಕಹಿ ಅನುಭವಗಳನ್ನೆಲ್ಲಾ ಮೆಟ್ಟಿ ನಿಂತಿದೆ. ಜೀವನದಲ್ಲಿ ಗೆಲುವಿನಂತೆಯೇ ಸೋಲನ್ನು ಅವರು ಗೊಣಗದೆ ನಗುನಗುತ್ತಲೇ ಸ್ವೀಕರಿಸಿದ್ದಾರೆ. ಸಫಲತೆ ಅವರ ಜೀವಮಾನದಲ್ಲಿ ಅವರನ್ನು ವಂಚಿಸಿದರೂ ಅವರ ಕೀರ್ತಿಕಾರ್ಯವನ್ನು ಬಿಡಲಾರದಾಗಿದೆ. ಇದ್ದಾಗ ಬೇಡವಾಗಿ, ಇಲ್ಲದಾಗ ಪರಿತಪಿಸುವ ಮನುಷ್ಯ ಸಹಜ ಪ್ರಕೃತಿಗೆ ಬಲಿಯಾದ ಮತ್ತೊಂದು ಸೌಭಾಗ್ಯವಾಗಿದೆ ಶ್ರೀ ಅವರ ಜೀವನ.



# ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು–೧೮

## ಹೊಸ ಪ್ರಕಟಣೆಗಳು

| | | | ಬೆಲೆ ರೂ. | ಪೈ |
|---|---|---|---|---|
| 1. | ಆದಿಪುರಾಣಂ | ಕೆ. ಎಲ್. ನರಸಿಂಹ ಶಾಸ್ತ್ರಿ | 17 | 50 |
| 2. | ಚೆನ್ನಬಸವ ಪುರಾಣಂ ಸಂಪುಟ 1+2 | ಎಂ. ಚಂದ್ರಶೇಖರ್ | 30 | 00 |
| 3. | ಶಬರಶಂಕರ ವಿಳಾಸಂ | ದಿಬ್ಬೂರು ಶ್ರೀನಿವಾಸರಾವ್ | 6 | 50 |
| 4, | ಕರ್ನಾಟಕ ಕೃಷ್ಣರಾಯ ಭಾರತ | ತಿಮ್ಮಣ್ಣಕವೀಂದ್ರ ವಿರಚಿತ | 27 | 50 |
| 5, | ನಾಂದಿ | ಸಂಪಾದಿತ : ಟಿ. ಆರ್. ಮಹದೇವಯ್ಯ | 11 | 00 |
| 6. | ಎಡೆತೊರೆ ಅರ್ಕಪುಷ್ಕರಣೀ ಮಹಾತ್ಮೆ | ಸಂಪಾದಿತ : ಶ್ರೀಮತಿ ಶಾಂತ | 5 | 00 |
| 7. | ತುಳುನಾಡಿನ ಸ್ಥಳನಾಮಗಳು | ಕೆಮ್ಮೂರು ರಘುಪತಿಭಟ್ಟ | 3 | 50 |
| 8. | ಶರತ್‌ಚಂದ್ರ | ವಿವಿಧ ಲೇಖಕರು | 3 | 00 |
| 9, | ಅಮೆರಿಕದಲ್ಲಿ ಗೊರೂರು | ಡಾ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್ | 15 | 00 |
| 10. | ವ್ಯಂಗ್ಯದರ್ಪಣ | ವಿವಿಧ ವ್ಯಂಗ್ಯ ಚಿತ್ರಕಲಾವಿದರು | 5 | 00 |

## ಪುನರ್ಮುದ್ರಣ

| | | | | |
|---|---|---|---|---|
| 11. | ಮನಮಂಥನ | ಡಾ॥ ಎಂ. ಶಿವರಾಂ | 17 | 50 |
| 12, | ಸ್ವಸ್ಥಜೀವನ | ಎಂ. ಗೋಪಾಲಕೃಷ್ಣರಾವ್ | 7 | 00 |
| 13. | ಅಲರ್ಜಿ | ಡಾ॥ ಎಂ. ಶಿವರಾಂ ಹಾಗೂ ಡಾ॥ ಓಂಪ್ರಕಾಶ್ | 4 | 00 |
| 14. | ಕನ್ನಡದ ಬಾವುಟ | ಸಂಗ್ರಹ : ಬಿ. ಎಂ. ಶ್ರೀ. | 4 | 00 |
| 15. | ಸಂಭಾವನೆ | 'ಶ್ರೀ' ಅವರಿಗೆ ಒಪ್ಪಿಸಿದ ಪ್ರಬಂಧಗಳ ಸಂಪುಟ | 30 | 00 |
| 16. | ಕನ್ನಡನಾಡಿನ ಚರಿತ್ರೆ ಭಾಗ-1 | ಡಾ॥ ಬಿ. ಎ. ಸಾಲತ್ತೊರೆ ಡಾ॥ ದೇಸಾಯಿ ಪಾಂಡುರಂಗರಾಯರು | 3 | 00 |